# देवपूजा तत्वम्

# ದೇವಪೂಜಾ ತತ್ವಮ್

(ಅರ್ಥ ಸಹಿತಮ್)

ಸಂಗ್ರಾಹಕರು :

ವಿದ್ವಾನ್ ಡಾ ॥ ಚತುರ್ವೇದಿ ಎಸ್. ವೇದವ್ಯಾಸಾಚಾರ್ಯ

ಪ್ರಕಾಶನ :

ಚತುರ್ವೇದಿ ಸೇವಾ ಟ್ರಸ್ಟ್

# देवपूजा तत्वम्

# ದೇವಪೂಜಾ ತತ್ತ್ವಮ್

(ಅರ್ಥ ಸಹಿತಮ್)

ಸಂಗ್ರಾಹಕರು :

**ವಿದ್ವಾನ್ ಡಾ ॥ ಚತುರ್ವೇದಿ ಎಸ್. ವೇದವ್ಯಾಸಾಚಾರ್ಯ,**

ಎಂ. ಎ., ಬಿ.ಎಡ್., ಪಿಹೆಚ್‌ಡಿ

ಪ್ರಕಾಶನ :

**ಚತುರ್ವೇದಿ ಸೇವಾ ಟ್ರಸ್ಟ್**

184, 'ಭಾಗವತ ಮಂದಿರಮ್', 22ನೇ ಮುಖ್ಯ ರಸ್ತೆ,

12ನೇ 'ಎ' ಅಡ್ಡ ರಸ್ತೆ, ರಾಘವೇಂದ್ರ ಲೇ ಔಟ್, ಪದ್ಮನಾಭನಗರ

ಬೆಂಗಳೂರು – 70. ಫೋನ್ : 94492 13797

## ಪರಮಪೂಜ್ಯ ಶ್ರೀ 108 ಶ್ರೀ ವಿಶ್ವೇಶ್ವತೀರ್ಥರ

# ಅನುಗ್ರಹವಚನ



ಶ್ರೀ ಶ್ರೀ 108 ಶ್ರೀ ವಿಶ್ವೇಶತೀರ್ಥರು
ಪಂಚಮ ಪರ್ಯಾಯ ಶ್ರೀಕೃಷ್ಣ ಮಠ
[ಪೇಜಾವರ ಅಧೋಕ್ಷಜ ಮಠ]
ಉಡುಪಿ, ದಕ್ಷಿಣ ಕನ್ನಡ

ಶ್ರೀಮಧ್ವಾಚಾರ್ಯರು ಭಗವಂತನನ್ನು ಅಪರೋಕ್ಷೀಕರಿಸಿಕೊಳ್ಳಲು ನಿರಂತರ ಶಾಸ್ತ್ರಭ್ಯಾಸ, ವಿಮರ್ಶೆ, ನಿಧಿಧ್ಯಾಸನವೆಂಬ ಮೂರು ಮಾರ್ಗಗಳನ್ನು ತೋರಿದ್ದಾರೆ.

ಆದರೆ ಧೂಳು ತುಂಬಿದ ಕನ್ನಡಿಯಲ್ಲಿ ಪ್ರತಿಬಿಂಬದ ಸ್ಪಷ್ಟ ಚಿತ್ರ ಬೀಳದಂತೆ ಮಾಲಿನ್ಯವಿರುವ ಅಂತಃಕರಣದಲ್ಲಿ ಭಗವಂತನ ಬಿಂಬ ಬೀಳಲಾರದು. ಸತ್ಕರ್ಮಾಚರಣೆಯು ಮನೋಮಾಲಿನ್ಯವನ್ನು ಹೋಗಲಾಡಿಸಿ ಬಿಂಬವು ಸ್ಫುಟವಾಗಿ ಬೀಳಲು ಅನುವು ಮಾಡಿಕೊಡುತ್ತದೆ. ಅಂತಃಕರಣ ಶುದ್ಧಿ ಮಾಡಿ ಜ್ಞಾನಮಾರ್ಗದಲ್ಲಿ ನಮ್ಮನ್ನು ನಡೆಸಲು ಅತ್ಯಂತ ಅವಶ್ಯಕವಾದ ಸದಾಚಾರವಿಲ್ಲದೆ ಭಕ್ತಿಯು ಪೂರ್ಣವಾಗಲಾರದು. ಇದಕ್ಕಾಗಿಯೇ "ತಂತ್ರಸಾರ ಸಂಗ್ರಹ" ರಚಿಸಿ ಸದಾಚಾರದಲ್ಲಿ ಮಾರ್ಗದರ್ಶನವನ್ನು ಮಾಡಿರುವರು.

ಶ್ರೀಮದಾಚಾರ್ಯರು ತೋರಿಸಿದ ದೇವಪೂಜಾ ಪದ್ಧತಿಯು ಸಂಕ್ಷೇಪವಾಗಿದ್ದು ವ್ಯಾಖ್ಯಾನರೂಪವಾಗಿ ಅನೇಕ ಮಹನೀಯರ ಕೃತಿಗಳು ಹೊರಬಂದಿವೆ. ಆದರೆ ಈ ವ್ಯಾಖ್ಯಾನಗಳು ಸಂಸ್ಕೃತದಲ್ಲಿವೆ. ಸಾಮಾನ್ಯ ಜನರಿಗೆ ಧಾರ್ಮಿಕ ತೃಷೆಯನ್ನು ತಣಿಸಲೆಂದೇ ಕನ್ನಡದಲ್ಲಿ ಅನೇಕ ಅನುವಾದಗಳೂ ಬಂದಿವೆ. ನಮಗೆ ಪರಮಪ್ರಿಯರಾದ ಶ್ರೀ ಎಸ್. ವೇದವ್ಯಾಸಾಚಾರ್ಯರು ಶ್ರಮವಹಿಸಿ ಅನೇಕ ಗ್ರಂಥಗಳಿಂದ

ಪ್ರಮಾಣಪೂರ್ವಕವಾಗಿ **"ದೇವಮೂಹಾತತ್ತ್ವಮ್"** ಎಂಬ ಗ್ರಂಥವನ್ನು ಬರೆದಿರುವುದು ನಮಗೆ ಅತ್ಯಂತ ಸಂತೋಷವಾಗಿದೆ.

ಇದೊಂದು ಅಧ್ಯಯನ ಪೂರ್ಣವಾದ ಅನೇಕ ಟಿಪ್ಪಣಿ, ವಿಶೇಷಾಂಕಗಳನ್ನು, ಸಂಪ್ರದಾಯವನ್ನು ಪರಿಶೀಲಿಸಿ ಈ ಗ್ರಂಥವನ್ನು ಪ್ರಕಟಗೊಳಿಸಿದ್ದಾರೆ. ಹರಿವಾಯುಗಳಿಗೆ ಅರ್ಪಿಸಿರುವ ಕೃತಿರತ್ನಗಳ ಮಾಲೆಯಲ್ಲಿ ವರ್ಷವರ್ಷವೂ ಹೊಸಹೊಸ ರತ್ನಗಳು ಸೇರ್ಪಡೆಯಾಗುತ್ತಲೇ ಇವೆ. ಈ ಮಾಲೆಯ ಉತ್ತಮ ರತ್ನಗಳಲ್ಲಿ ಈ ಗ್ರಂಥವೂ ಒಂದಾಗಿದೆ.

ನಮ್ಮ ಪ್ರಿಯ ಶಿಷ್ಯರೂ, ವಿದ್ವಾಂಸರೂ, ಪ್ರವಚನಕಾರರೂ, ಸಂಶೋಧಕರು ಆಗಿರುವ ವೇದವ್ಯಾಸಾಚಾರ್ಯರು ನಮ್ಮ ವಿದ್ಯಾಪೀಠದಲ್ಲಿಯೇ ಹನ್ನೆರಡು ವರ್ಷ ಅಧ್ಯಯನ ಮಾಡಿ ಮನೆಯಲ್ಲಿ ಪಾಠ-ಪ್ರವಚನ, ಗ್ರಂಥ ಪ್ರಕಾಶನ ಮೊದಲಾದ ವಿವಿಧ ಸಾಮಾಜಿಕ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇದು ನಮಗೆ ಅತ್ಯಂತ ಹರ್ಷವುಂಟು ಮಾಡಿದೆ. ಈ ಗ್ರಂಥವು ಪಂಚಮಾ ವೃತ್ತಿಯಾಗಿ ಮುದ್ರಿತವಾಗುತ್ತಿರುವುದು ನಮಗೆ ಸಂತಸವಾಗಿದೆ. ಇದೇ ರೀತಿ ಜಿಜ್ಞಾಸುಗಳಿಗೆ ಉಪಯುಕ್ತವಾಗುವ ಗ್ರಂಥಗಳು ಇವರಿಂದ ಅನುವಾದಿಸಲ್ಪಟ್ಟು ಸಮಾಜಕ್ಕೆ ದೊರೆಯುವಂತಾಗಲಿ ಎಂದು ಆಶಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು

ಶ್ರೀಶ್ರೀ ವಿಶ್ವೇಶ್ವತೀರ್ಥ ಶ್ರೀಪಾದಂಗಳವರು

# ಮುನ್ನುಡಿ

ದೇವಪೂಜೆಯು ಭಗವಂತನಿಗೆ ತೋರುವ ಕೃತಜ್ಞತೆ. ಭಗವಂತನಿಗೆ ಈ ಜಗತ್ತಿನ ಸೃಷ್ಟ್ಯಾದಿಗಳಿಂದ ಯಾವ ಪ್ರಯೋಜನವಿಲ್ಲದಿದ್ದರೂ ಜೀವರಿಗೆ ಅವರವರ ಯೋಜನೆಯಂತೆ ಗತಿಯನ್ನು ನೀಡಿ ಅನುಗ್ರಹಿಸಿದ್ದಾಗಿ ನಾವು ತೋರುವ ಗೌರವಾರ್ಪಣೆಯೇ ದೇವಪೂಜೆ.

ನಮ್ಮ ದೇಹದಲ್ಲಿ ಬಿಂಬನಾಗಿ ನಮ್ಮನ್ನು ನಿಯಂತ್ರಿಸುತ್ತಿರುವ ಭಗವಂತನಿಗೂ ಹಾಗೂ ಪ್ರತಿಮೆ, ಸಾಲಿಗ್ರಾಮಾದಿಗಳಲ್ಲಿ ಸನ್ನಿಹಿತ-ನಾಗಿರುವ ಭಗವಂತನಿಗೂ ಐಕ್ಯ ಚಿಂತನೆಯನ್ನು ಮಾಡುತ್ತಾ, ಆವಾಹನಾದಿ ಉಪಚಾರಗಳಿಂದ ಪೂಜಿಸುವುದೇ ದೇವಪೂಜೆ ಹಾಗೂ ಭಗವಂತನಾಜ್ಞೆಯಂತೆ ಭಗವಂತನ ಆರಾಧನೆಯನ್ನು ಮಾಡಲು ನಮ್ಮ ದೇಹದಲ್ಲಿ ನಿಂತು ನಮ್ಮನ್ನು ಪ್ರೇರಿಸುವ ಶ್ರೀಹರಿಯ ಪರಿವಾರ ದೇವತೆಗಳಾದ ತತ್ವಾಭಿಮಾನಿ ದೇವತೆಗಳನ್ನು ಪೂಜಿಸುವುದು ಭಗವಂತನಿಗೆ ಪ್ರಿಯವೆನಿಸಿದೆ. ಆದ್ದರಿಂದ ಜೀವೋತ್ತಮರಾದ ಮುಖ್ಯಪ್ರಾಣದೇವರು, ಗರುಡ ಶೇಷಾದಿಗಳನ್ನು ಆಯಾಯ ಪ್ರತೀಕಗಳಲ್ಲಿ ಶಾಸ್ತ್ರೋಕ್ತವಾಗಿ ಆವಾಹಿಸಿ, ಶ್ರೀಹರಿಗೆ ಸಮರ್ಪಿಸಿದ ಪದಾರ್ಥಗಳಿಂದ ಉಪಚರಿಸುವುದು. **"ಪೂಜ್ಯಶ್ಚ ಭಗವಾನ್ ನಿತ್ಯಂ"** ಎಂಬ ಆಚಾರ್ಯೋಕ್ತಿಯಂತೆ ಪ್ರತಿದಿನವೂ ದೇವರ ಪೂಜೆಯನ್ನು ಮಾಡಲೇಬೇಕು. ಪೂಜೆಯನ್ನು ಮಾಡದೆ ಭೋಜನವನ್ನು ಮಾಡಲು ಆರ್ಹತೆವುಂಟಾಗುವುದಿಲ್ಲ.

ಬ್ರಾಹ್ಮಣನ ದೇಹವು ಕೇವಲ ಕ್ಷುದ್ರ, ಐಹಿಕ ಕಾಮನೆಗಳಿಗಾಗಿ ಬಂದಿದ್ದಲ್ಲ. ಮೀಸಲಾಗಿಲ್ಲ. ಆಮುಷ್ಮಿಕ ಸುಖಕ್ಕೆ ಬೇಕಾದ ಸಾಧನ ಮಾಡಲು ಇರುವ ದೇಹವಾಗಿದೆ. ಆಮುಷ್ಮಿಕ ಸುಖದಲ್ಲೂ ಪುನರಾವೃತ್ತಿ-ರಹಿತವಾದ ಸಂಸಾರ ನಿವೃತ್ತಿ ಪೂರ್ವಕ ನೈಜಸುಖಾನುಭವರೂಪವಾದ ಶಾಶ್ವತ ಸುಖವೇ ಸಜ್ಜನರಿಂದ ಅಪೇಕ್ಷಣೀಯವಾಗಿದೆ.

**ಬ್ರಾಹ್ಮಣಸ್ಯ ಚ ದೇಹೋಽಯಂ ಕ್ಷುದ್ರಕಾಮಾಯ ನೇಷ್ಯತೇ ।**
**ಕೃಚ್ಛ್ರಾಯ ತಪಸೇ ಚೇಹ ಪ್ರೇತ್ಯಾನಂತಸುಖಾಯ ಚ ॥**

ಇಂತಹ ಸುಖವು ಹೇಗೆ ಲಭಿಸುತ್ತದೆ? ಎಂದರೆ ಭಗವಂತನನ್ನು ಸರಿಯಾಗಿ ಶಾಸ್ತ್ರಗಳಿಂದ ತಿಳದರೆ ಮಾತ್ರ ಈ ಶಾಶ್ವತ ಸುಖವು ಲಭಿಸುತ್ತದೆ. ಇಂತಹ ಭಗವದ್ ಜ್ಞಾನವುಂಟಾಗಲು ಅಂತಃಕರಣ ಶುದ್ಧಿಬೇಕು. ಇಂತಹ ಅಂತಃಕರಣ ಶುದ್ಧಿಯಾದರೂ ದೇವಪೂಜಾದಿ ನಿತ್ಯ ನೈಮಿತ್ತಿಕ ಕರ್ಮಗಳಿಂದ ಉಂಟಾಗುತ್ತದೆ. ಅಂತಃಕರಣ ಶುದ್ಧಿಯಾದ ಮೇಲೆ ಶುದ್ಧವಾದ ಜ್ಞಾನವುಂಟಾಗಿ ಭಗವಂತನಲ್ಲಿ ಭಕ್ತಿವುಂಟಾಗಿ ಪರಮ ಪುರುಷಾರ್ಥವೆನಿಸಿದ ಮೋಕ್ಷವುಂಟಾಗುತ್ತದೆ. ಆದ್ದರಿಂದ ವಿಷ್ಣುವನ್ನು ತಿಳಯಬೇಕು. ಭಗವಂತನು ನಿತ್ಯ ತೃಪ್ತನಾದ್ದರಿಂದ ಬೇರೆ ಲೌಕಿಕ ವಸ್ತುಗಳನ್ನು ಅಪೇಕ್ಷಿಸನು ಅವನಿಗೆ ಬೇಕಾದದ್ದು ಭಕ್ತಿಯೊಂದೆ.

**ಭಕ್ತ್ಯೈವ ತುಷ್ಟಿಮಭ್ಯೇತಿ ವಿಷ್ಣುರ್ನಾನ್ಯೇನ ಕೇನಚಿತ್ ।**

ಎಂಬಂತ ಮಹಾತ್ಮ್ಯ ಜ್ಞಾನಪೂರ್ವಕ ಸುದೃಢಸ್ನೇಹ ರೂಪವಾದ ಭಕ್ತಿಯೇ ಪರಮಾತ್ಮನ ಅನುಗ್ರಹಕ್ಕೆ ಕಾರಣ.

ಭಗವಂತನಲ್ಲಿ ಇಂತಹ ಅವಿಚ್ಛಿನ್ನವಾದ ಭಕ್ತಿವುಂಟಾಗಲು ಹಾಗೂ ಭಗವದ್ಧರ್ಶನವಾಗಲು ಭಗವಂತನ ಮಹಿಮೆ ಹಾಗೂ ಗುಣಾತಿಶಯಗಳ ನಿರಂತರ ಧ್ಯಾನವು ಅವಶ್ಯಕವಾಗಿದೆ. ದೇವತಾರ್ಚನೆಯಲ್ಲಿ ಉಪಯೋಗಿಸುವ ಪ್ರತಿಮೆ, ಸಾಲಿಗ್ರಾಮಗಳು ಭಗವಂತನ ಬಿಂಬರೂಪ ಧ್ಯಾನಕ್ಕಾಗಿಯೂ, ತುಲಸೀ, ಗಂಧ ಮೊದಲಾದವು, ಅವುಗಳಲ್ಲಿರುವ ಭಗವಂತನ ಗುಣ ಧ್ಯಾನ ಮಾಡಲು, ವೇದಮಂತ್ರಗಳು ಮಹಾತ್ಮ್ಯ ಧ್ಯಾನಕ್ಕೂ ಸಾಧನಗಳಾಗಿವೆ.

ಆದ್ದರಿಂದ ಶಾಸ್ತ್ರಗಳಲ್ಲಿ ವರ್ಣಿಸಿರುವ ಇಷ್ಟ ದೇವತಾ ಮೂರ್ತಿಯನ್ನು ಸಂಪಾದಿಸಿ ಅಥವಾ ಮಹಾನುಭಾವರು ಪೂಜಿಸಿರುವ ಪ್ರತಿಮೆಯನ್ನಿಟ್ಟು-ಕೊಂಡು ಆ ಪ್ರತಿಮೆಯಲ್ಲಿ ಬಿಂಬರೂಪಿಯನ್ನು ಆವಾಹಿಸಿ, ಪಂಚಾಮೃತಾದಿ ಸ್ನಾನಗಳಿಂದ ಅಭಿಷೇಕಿಸಿ, ಅಂಗಮಾರ್ಜನ ಮಾಡಿ ದಿವ್ಯಪೀಠದಲ್ಲಿ ಪರಿವಾರ ಸಹಿತವಾಗಿ ಕುಳ್ಳರಿಸಿ, ತುಲಸಿ, ಪುಷ್ಪ-ಗಂಧಾದಿಗಳಿಂದ ಆಭರಣಗಳಿಂದ ಪೂಜಿಸಿ, ಉತ್ತಮ ಪದಾರ್ಥಗಳನ್ನು ನಿವೇದಿಸಿ,

ತಾಂಬೂಲಾದಿಗಳನ್ನು ಅರ್ಪಿಸಿ, ಧೂಪ-ದೀಪ-ಮಂಗಲ ನೀರಾಜನವನ್ನು ಅರ್ಪಿಸುವುದು, ಸ್ತೋತ್ರ ಪಾಠಗಳಿಂದ ಸ್ತುತಿಸುವುದು, ಚಾಮರ-ದರ್ಪಣ-ವಾದ್ಯ-ಪ್ರದಕ್ಷಿಣೆ-ನಮಸ್ಕಾರ ಇವುಗಳಿಂದ ಅರ್ಚಿಸಬೇಕು. ಭಗವಂತನನ್ನು ನಾವು ಯಾವ ರೀತಿಯಿಂದಲೂ ಮೆಚ್ಚಿಸಲು ಸಾಧ್ಯವಿಲ್ಲವಾದರೂ ಪೂಜೆಯು ಭಗವಂತನಿಗೆ ಕೃತಜ್ಞತಾ ಸಮರ್ಪಣ ರೂಪವಾಗಿದೆ. ಇಂತಹ ಪೂಜೆಯನ್ನು ಮಾಡಿದಾಗ ಮಹಾಕೃಪಾಳುವಾದ ಭಗವಂತನು ತಾನಾಗಿಯೇ ಸರ್ವಸುಖ ಸಂಪತ್ತನ್ನು ಕೊಟ್ಟು ಸಲಹುವನು. ಈ ಕಾರಣದಿಂದಲೇ ನಿತ್ಯವು ಪೂಜೆಯು ವಿಹಿತವಾಗಿದೆ.

ಆದ್ದರಿಂದ ತಮಗೆ ವಿಹಿತವಾದ ಕರ್ಮಗಳಿಂದ ಭಗವಂತನನ್ನು ಅರ್ಚಿಸಿ ಸಿದ್ಧಿಯನ್ನು ಹೊಂದಬೇಕು.

ಇಂತಹ ಗುಣಪರಿಪೂರ್ಣನಾದ ಭಗವಂತನನ್ನು ಮೆಚ್ಚಿಸಲು ವಿಧಿವಿಹಿತವಾದ ಕರ್ಮವನ್ನು ಸರಿಯಾಗಿ ತಿಳಿದು ಮಾಡಬೇಕು.

**ಪೂಜೆಯ ಅವಶ್ಯಕತೆ** : ಯಾರು ಪ್ರತಿದಿವಸದಲ್ಲೂ ಎರಡು ಹೊತ್ತುಗಳಲ್ಲಿ ಮೋಹದಿಂದಾಗಲೀ, ಆಲಸ್ಯದಿಂದಲಾಗಲೀ, ಪೂಜೆಯನ್ನು ಮಾಡದೇ ಭೋಜನ ಮಾಡುವರೋ ಅವರು ನರಕವನ್ನು ಅನುಭವಿಸಿ ನಂತರ ಹಂದಿಯಾಗಿ ಹುಟ್ಟುವರು.

**ಯೋ ಮೋಹಾದಥವಾ ಆಲಸ್ಯಾತ್ ಅಕೃತ್ವಾ ದೇವತಾರ್ಚನಂ ।**
**ಭುಂಕ್ತೇ ಸ ಯಾತಿ ನಿರಯಂ ಸೂಕರತ್ವಂ ಚ ಗಚ್ಛತಿ ॥**

– ಕೂರ್ಮಪುರಾಣ

ಸ್ನಾನ ಮಾಡದೆ ಊಟ ಮಾಡುವವನು ನರಕದಲ್ಲಿ ಮಲವನ್ನು, ಜಪ ಮಾಡದಿರುವನು ಕೀವು, ರಕ್ತಗಳನ್ನು, ಹೋಮ ಮಾಡದಿರುವನು ಕ್ರಿಮಿಗಳನ್ನು, ದೇವಪೂಜೆಯನ್ನು ಮಾಡದಿರುವವನು ಸಮಸ್ತ ಪಾಪಗಳನ್ನು ಹೊಂದುವನು.

**ಅಸ್ನಾಯೀ ಚ ಮಲಂ ಭುಂಕ್ತೇ ಅಜಪೀ ಪೂಯಶೋಣಿತಂ ।**
**ಅಹೋಮೀ ಚ ಕೃಮೀನ್ ಭುಂಕ್ತೇ ಅನರ್ಚಃ ಸರ್ವಪಾಪಕೃತ್ ॥**

– ಹಾರೀತರು

**ಶ್ರೀಹರಿಯನ್ನು ಪೂಜಿಸಬೇಕು** : ಭಗವಂತನನ್ನು ಬಿಟ್ಟು ಇತರ ದೇವತೆಗಳನ್ನು ಸ್ವತಂತ್ರರೆಂದು ಪೂಜಿಸಬಾರದು.

**ಹರಿರೇವ ಸದಾ ಪೂಜ್ಯಃ ನಾನ್ಯೋ ದೇವಃ ಸ್ವತಂತ್ರತಃ ।**

**ಸರ್ವೇಷಾಮಪಿ ದೇವಾನಾಂ ಮಯಾಽಪಿ ಪುರುಷೋತ್ತಮಃ ॥**

**ಪೂಜನೀಯೋ ಹರಿರ್ನಿತ್ಯಂ ಬ್ರಾಹ್ಮಣಾನಾಂ ವಿಶೇಷತಃ ॥**

ಪೂಜೆಯ ಮೂರು ವಿಧಗಳಲ್ಲಿ ಯಾವುದಾದರೊಂದು ವಿಧಿಯಿಂದ ಪೂಜಿಸಬೇಕು.

ಬ್ರಾಹ್ಮಣನಿಗೆ ಒಂಭತ್ತು ವಿಧವಾದ ಕರ್ಮಗಳನ್ನು ಶಾಸ್ತ್ರದಲ್ಲಿ ವಿಧಿಸಲಾಗಿದೆ.

**ಅರ್ಚನಂ, ಮಂತ್ರಪಠನಂ, ಯಾಗೋ, ಯೋಗೋ, ಮಹಾತ್ಮನಃ ।**

**ನಾಮಸಂಕೀರ್ತನಂ ಸೇವಾ ತಚ್ಚಿಹ್ನೈಃ ಅಂಕನಂ ತಥಾ ॥**

**ತದೀಯಾರಾಧನಂ ಚೇಜ್ಯಾ ನವಧಾ ಭಿದ್ಯತೇ ಶುಭೇ ।** – ಪದ್ಮಪುರಾಣ

ಹೀಗೆ ಭಗವಂತನನ್ನು ಅರ್ಚಿಸಿದರೆ ಸಮಸ್ತ ದೇವತೆಗಳನ್ನು ಅರ್ಚಿಸಿದಂತೆ.

**ಅರ್ಚಿತೇ ದೇವ ದೇವೇಶೇ ಶಂಖ ಚಕ್ರಗದಾಧರೇ ।**

**ಅರ್ಚಿತಾಃ ಸರ್ವದೇವಾಃ ಸ್ಯುಃ ಯತಃ ಸರ್ವಗತೋ ಹರಿಃ ॥**

– ಕೃಷ್ಣಾಮೃತ ಮಹಾರ್ಣವ

**ಯೇಽರ್ಚಯಂತಿ ನರಾ ನಿತ್ಯಂ ತೇಽಪಿ ವಂದ್ಯಾ ಯಥಾ ಹರಿಃ ।**

**ನಾಸ್ತಿ ಶ್ರೇಯಸ್ಕರಂ ನೃಣಾಂ ವಿಷ್ಣೋರಾರಾಧನಾನ್ ಮುನೇ ॥**

– ಪುಲಸ್ತ್ಯರು

ಈ ಭಗವಂತನ ಪೂಜೆಯನ್ನು ಭಗವಂತನ ಅನುಗ್ರಹವನ್ನು ಸಂಪಾದಿಸಲೆಂದೇ ಆಚರಿಸಬೇಕು. ಕಾಮ್ಯಕರ್ಮಗಳಿಗಾಗಿ ದೇವತಾ ಪೂಜೆಯನ್ನು ಮಾಡಬಾರದು.

ಪ್ರತಿಬಿಂಬಕ್ಕೆ ಅಲಂಕಾರವನ್ನು ಮಾಡದಿದ್ದರೂ, ಬಿಂಬಕ್ಕೆ ಅಲಂಕಾರ ಮಾಡಿದಾಗ ಪ್ರತಿಬಿಂಬದಲ್ಲಿ ತೋರಿಬರುವಂತೆ ಬಿಂಬರೂಪಿಯಾದ

ಭಗವಂತನನ್ನೇ ಅರ್ಚಿಸಿದಾಗ ಅದು ನಮ್ಮಲ್ಲಿ ತೋರುವುದು. ದೇವತಾರ್ಚನೆಯನ್ನು ಮಾಡುವ ವಿಧಾನಗಳನ್ನು ತಂತ್ರಶಾಸ್ತ್ರಗಳು ತಿಳಿಸುತ್ತವೆ. ತಂತ್ರಗಳಲ್ಲಿ ಸಾತ್ವಿಕಾದಿ ವಿಭಾಗವಿದ್ದು, ಸಾತ್ವಿಕ ತಂತ್ರಮಾರ್ಗವನ್ನು ನಿರೂಪಿಸುವ ವಿಷ್ಣುಕೃತವಾದ ತಂತ್ರಸಾರವನ್ನು ಆಚಾರ್ಯರು ಉಲ್ಲೇಖಿಸಿದ್ದು **"ತಂತ್ರಸಾರ ಸಂಗ್ರಹ"**ವೆಂಬ ಗ್ರಂಥವನ್ನೂ ರಚಿಸಿದ್ದಾರೆ. **"ವಿಷ್ಣೂದಿತೇ ತಂತ್ರಸಾರೇ"** ಎಂದು ತಮ್ಮ ಗ್ರಂಥಕ್ಕೆ ವಿಷ್ಣುಕೃತ ತಂತ್ರಸಾರ ಮೂಲವೆಂದಿದ್ದರೂ ಆ ಗ್ರಂಥವು ಲಭ್ಯವಿಲ್ಲ. ಆದರೂ ತಮ್ಮ ತಂತ್ರಸಾರ ಸಂಗ್ರಹದಲ್ಲಿ ಪೀಠಪೂಜೆ, ಆವರಣ ದೇವತಾಪೂಜೆ, ಕಲಶ ಪೂಜಾಕ್ರಮ, ಚಕ್ರಾಬ್ಜ-ಭದ್ರಕಮಂಡಲ, ತತ್ವನ್ಯಾಸ-ಮಾತೃಕಾನ್ಯಾಸ ಇವೇ ಮೊದಲಾದ ವಿಷಯಗಳನ್ನು ತಿಳಿಸಿರುವರು.

ಆನಂತರ ಆಚಾರ್ಯರ ಅನುಜರಾದ ಶ್ರೀ ವಿಷ್ಣುತೀರ್ಥರು ಬರೆದ **"ಸನ್ಯಾಸಪದ್ಧತಿ"** ನಾರಾಯಣ ಪಂಡಿತರ **"ಯೋಗದೀಪಿಕಾ"** ಗ್ರಂಥಗಳು **"ತಂತ್ರಸಾರ ಸಂಗ್ರಹ"**ದ ವ್ಯಾಖ್ಯಾನದಂತಿದ್ದು ಶ್ರೀ ಟೀಕಾಚಾರ್ಯರ **'ಪದ್ಮಮಾಲೆ'**ಯಾದರೂ ತಂತ್ರಸಾರ ಸಂಗ್ರಹದಲ್ಲಿ ಬರುವ ಪೂಜಾ ಕ್ರಮವನ್ನು ಸಮಗ್ರವಾಗಿ ತಿಳಿಸುವ ಕೃತಿಯಾಗಿದೆ.

ವಿಸ್ತಾರವಾಗಿ ಪೂಜೆ ಮಾಡಲು ನಾವು ಅಸಮರ್ಥರಾದಾಗ ಇರುವ ದ್ರವ್ಯಗಳಿಂದಲೇ, ಗೊತ್ತಿರುವ ಮಂತ್ರಗಳಿಂದಲೇ ಅರ್ಚಿಸಿ ಪೂಜಿಸಿದರೂ ಭಗವಂತನು ಫಲ ನೀಡುವನು.

**ಯದಿ ವಿಸ್ತರತಃ ಪೂಜಾಂ ಕರ್ತುಂ ನೈವ ಶಕ್ಯತೇ ।**
**ಜಲಂ ದಲಂ ತುಲಸ್ಯಾಃ ವಾಽವಶ್ಯಂ ವಿಷ್ಣೌ ಸಮರ್ಪಯೇತ್ ॥**

ಪಾದ್ಮಸಂಹಿತೆಯಲ್ಲಿ ಪುರುಷಸೂಕ್ತದಲ್ಲಿರುವ ಹದಿನಾರು ಮಂತ್ರ-ಗಳಿಂದ ಷೋಡಶೋಪಚಾರ ಪೂಜೆಯನ್ನು ಮಾಡಲು ವಿಧಿಸಲಾಗಿದೆ.

ಪುರುಷಸೂಕ್ತ ಬರದೆ ಇದೂ ಸಾಧ್ಯವಾಗದಿದ್ದಾಗ "ಪ್ರಮಾದ-ದಿಂದಾಗಲೀ, ಅಡಚಣೆಗಳಿಂದಾಗಲೀ ಪೂಜೆಯನ್ನು ಮಾಡಲು ಆಗದೆ ಹೋದಾಗ ಪದ್ಯಮಾಲೆಯ ಪಠನದಿಂದ ಪೂಜಾಫಲವನ್ನು ಪಡೆಯಬಹುದು" ಎಂದು ಪದ್ಯಮಾಲಾದಲ್ಲಿಯೇ ತಿಳಿಸಲಾಗಿದೆ.

**ಪ್ರಮಾದತೋ ನಿರೋಧಾದ್ವಾ ಹರೇಃ ಪೂಜಾ ಭವೇನ್ ನ ಚೇತ್ ।**
**ಪಠನಾತ್ ಪದ್ಯಮಾಲಾಯಾಃ ನರಃ ಪೂಜಾಫಲಂ ಲಭೇತ್ ॥**

ಆದರೆ ಈ ಮಾರ್ಗ ಆಪತ್ಕಾಲದಲ್ಲಿ ಮಾತ್ರ ಹೇಳಿರುವುದು. ಪೂಜೆಯನ್ನು ಬಿಡಬಾರದು ಎಂದೇ ತಾತ್ಪರ್ಯ.

ಈ ದೇವಪೂಜಾತತ್ತ್ವದಲ್ಲಿ ವಿಸ್ತಾರವಾಗಿಯೂ, ಸಂಕ್ಷಿಪ್ತವಾಗಿಯೂ, ಪಾದ್ಮಸಂಹಿತೆಯಲ್ಲಿ ಹೇಳಿದ ಪುರುಷಸೂಕ್ತದ ಕ್ರಮವನ್ನು ತಿಳಿಸಲಾಗಿದೆ. ಕಡೆಯಲ್ಲಿ ಪದ್ಯಮಾಲೆಯನ್ನು ಪೂರ್ತಿಯಾಗಿ ಪಾರಾಯಣಕ್ಕೆ ಅನುಕೂಲವಾಗಲೆಂದು ಕೊಡಲಾಗಿದೆ.

ದೇವಪೂಜಾ ಪದ್ಧತಿಗಳು ಅನೇಕವಿದ್ದರೂ ಪದ್ಧತಿಗಳಲ್ಲಿ ವ್ಯತ್ಯಾಸವಿರುವುದರಿಂದಲೂ, ಸಮಗ್ರವಾಗಿ ವಿಷಯಗಳು ಒಂದೆಡೆಯಲ್ಲಿ ಸಿಗದಿರುವುದರಿಂದಲೂ ಆ ನ್ಯೂನತೆ ಪರಿಹಾರ ಹಾಗೂ ವಿಶಿಷ್ಟತೆಯನ್ನು ಹೊಂದಿರುವ ಈ ದೇವಪೂಜಾತತ್ತ್ವದ ಅವಶ್ಯಕತೆ ಇತ್ತು. ಇದಕ್ಕಾಗಿ ದೇವಪೂಜಾತತ್ತ್ವವು ಹೊರಬಂದಿದೆ. ಇದರಲ್ಲಿ ದೇವಪೂಜಾದಲ್ಲಿ ಬರುವ ಸಮಗ್ರ ಮಂತ್ರಗಳಿಗೂ ಅರ್ಥವನ್ನು ಬರೆಯಲಾಗಿದೆ. ಇದರಿಂದ ಅರ್ಥ ತಿಳಿದು ಪೂಜೆ ಮಾಡಲು ಸಹಾಯವಾಗುತ್ತದೆ. ಇದು ಇನ್ನೊಂದು ವೈಶಿಷ್ಟ್ಯ.

ಈ ದೇವಪೂಜಾತತ್ತ್ವಕ್ಕೆ ಕೃಪೆ ಮಾಡಿ ಅನುಗ್ರಹವಚನವನ್ನು ನೀಡಿ ಪ್ರೋತ್ಸಾಹಿಸಿರುವ ನನ್ನ ವಿದ್ಯಾಗುರುಗಳಾದ 108 ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರಿಗೆ ಭಕ್ತ್ಯಾದರ ಪೂರ್ವಕವಾಗಿ ಕೃತಜ್ಞತೆ ಹಾಗೂ ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುವೆ.

ಈ ಗ್ರಂಥದ ಮುಖಪುಟ ರಚನೆಯನ್ನು ಮಾಡಿಕೊಟ್ಟ ಶ್ರೀ ಶೇಷಗಿರಿಯವರಿಗೆ ಮತ್ತು ಡಿ.ಟಿ.ಪಿ. ಕಾರ್ಯವನ್ನು ಆಸಕ್ತಿಯಿಂದ ಮಾಡಿದ ಶ್ರೀ ಎಸ್.ಎನ್.ರಮೇಶ್‌ರವರಿಗೂ ಹಾಗೂ ಸುಂದರವಾಗಿ ಮುದ್ರಿಸಿಕೊಟ್ಟ ಶ್ರೀ ಯಂತ್ರೋದ್ಧಾರಕ ಪ್ರಿಂಟರ್ಸ್ ಮತ್ತು ಪ್ರಕಾಶಕರಾದ ಶ್ರೀ ಅನಿಲ್‌ಕುಮಾರ್‌ರವರಿಗೂ, ಚತುರ್ವೇದಿ ಸೇವಾ ಟ್ರಸ್ಟ್ ಕೃತಜ್ಞತೆಯನ್ನು ಸಲ್ಲಿಸುತ್ತದೆ.

ಇತಿ ಸಜ್ಜನವಿಧೇಯ,

**ವಿದ್ವಾನ್ ಡಾ ॥ ಚತುರ್ವೇದಿ ಎಸ್. ವೇದವ್ಯಾಸಾಚಾರ್ಯ**

# ಪರಿವಿಡಿ

ಪುಟ ಸಂಖ್ಯೆ

## ವಿಭಾಗ – 2 :

### ಸಂಕ್ಷಿಪ್ತ ದೇವಪೂಜಾ

ವಿಭಾಗ – 3 :

**ಪುರುಷಸೂಕ್ತ ಸಂಕ್ಷೇಪ ಪೂಜಾ**

ವಿಭಾಗ – 8 :

**ಅಭಿಷೇಕ ಸೂಕ್ತಗಳು**

ವಿಭಾಗ – 9 :

**ಅಷ್ಟಮಹಾಮಂತ್ರಾಃ**



ವಿಭಾಗ – 10 :

**ಸ್ನಾನ ವಿಧಿ**

* * * * * *

## – :ಪೂಜೆಯಲ್ಲಿ ತಿಳಿಯಬೇಕಾದ ನಿಯಮಗಳು :–

1. ದೇವರಪೂಜೆ ಮಾಡದೇ ಊಟ ಮಾಡಿದರೆ ಮಲವನ್ನು ತಿಂದಂತೆ ಹಾಗೂ ಹಂದಿಯಾಗಿ ಹುಟ್ಟುವನು.
2. ಹರಿಯನ್ನು ಸ್ವತಂತ್ರನೆಂದು ಪೂಜಿಸಬೇಕು. ಬೇರೆ ಯಾರನ್ನೂ ಸ್ವತಂತ್ರರೆಂದು ಪೂಜಿಸಬಾರದು.
3. ಬ್ರಹ್ಮಾದಿಗಳನ್ನು ಪರಿವಾರ ದೇವತೆಗಳೆಂದು ಪೂಜಿಸಬೇಕು.
4. ಗೃಹಸ್ಥರು ಶಾಲಿಗ್ರಾಮದಲ್ಲಿ ಶ್ರೀಹರಿಯನ್ನು ಪೂಜಿಸಬೇಕು.
5. ಆಶೌಚಗಳಲ್ಲಿ ತಾನು ಪೂಜಿಸದೆ ಆಶೌಚವಿಲ್ಲದವರಿಂದ ಪೂಜೆ ಮಾಡಿಸಬೇಕು.
6. ಸ್ನಾನ, ಶುದ್ಧ ವಸ್ತ್ರಧಾರಣೆ, ಪುಂಡ್ರಧಾರಣ, ಮುದ್ರೆ, ಸಂಧ್ಯಾವಂದನೆ, ಏಕಾದಶ್ಯಾದಿ ವ್ರತ, ಮುಂತಾದವುಗಳನ್ನು ಮಾಡಿಯೇ ಪೂಜಾಧಿಕಾರ ಲಭಿಸುತ್ತದೆ.
7. ಪೂಜೆಗಾಗಿರುವ ನೀರನ್ನು ಶುದ್ಧ ದೇವರ ವಸ್ತ್ರದಿಂದ ಶೋಧಿಸಿ, ನೃಸಿಂಹ ಬೀಜಾಕ್ಷರ ಬರೆದು, ಉಗುರುಗಳನ್ನು ನೀರಿನಲ್ಲಿ ಮುಳುಗಿಸದೆ ಅಗ್ರ್ಯೋದಕ ತರಬೇಕು.
8. ಪೂಜೆಗಾಗಿ ಸಾಲಿಗ್ರಾಮ, ಸುದರ್ಶನ, ಚಕ್ರಾಣಿಕೆಗಳು, ಕೃಷ್ಣಪ್ರತಿಮೆ, ವಿಷ್ಣುಪಾದ ಇವು ಇರಲೇಬೇಕು.
9. ತುಲಸೀ, ಶಂಖ, ಗಂಟೆ, ಗಂಧಾದಿಗಳನ್ನು ಸಿದ್ಧಪಡಿಸಿಕೊಂಡು ಪೂಜೆ ಪ್ರಾರಂಭಿಸಬೇಕು. ತುಲಸಿಯನ್ನು ಸ್ನಾನ ಮಾಡಿ ಬಿಡಿಸಬೇಕು, ನೀರಿನಿಂದ ತೊಳೆಯಬಾರದು.
10. ಪುಷ್ಪಗಳನ್ನು ಸ್ನಾನದ ಮೊದಲು ಬಿಡಿಸಿಕೊಳ್ಳಬೇಕು. ನೀರಿನಿಂದ ತೊಳೆಯದೆ ಉಪಯೋಗಿಸಬಾರದು. ತುಲಸೀ ಹಾಗೂ ಪುಷ್ಪಗಳನ್ನು ಒಂದೇ ತಟ್ಟೆಯಲ್ಲಿಡಬಾರದು. ಚಂಡುಮಲ್ಲಿಗೆ, ಸುಗಂಧರಾಜ, ಕಾಡುಮಲ್ಲಿಗೆ ಮೊದಲಾದ ಪುಷ್ಪಗಳು ನಿಷಿದ್ಧವಾಗಿವೆ.
11. ದೇವಸ್ಥಾನದಲ್ಲಿ ಕದ್ದ ಹೂವುಗಳು, ಚೌಕಾಶಿ ಮಾಡಿ ತಂದ

ಹೂವುಗಳು, ಎಕ್ಕದೆಲೆ, ಕುಂಬಳದೆಲೆಗಳಲ್ಲಿ ತಂದ ಹೂವು ಪೂಜೆಗೆ ಅನರ್ಹವಾದದ್ದು.

12. ತುಲಸಿಯನ್ನು ನಿಷಿದ್ಧ ತಿಥಿವಾರಗಳಲ್ಲಿ ಬಿಡಿಸಬಾರದು. ತುಲಸಿಯು ಅಲಭ್ಯವಾದಾಗ, ತಯಾರಾದ ತುಲಸೀಮಣಿ ಇದಾವುದೂ ಇಲ್ಲದಿದ್ದಾಗ ತುಲಸಿಯ ಸ್ತೋತ್ರ ಮಾಡುತ್ತಾ ಪೂಜಿಸಬಹುದು. ತುಲಸಿ ಇಲ್ಲದ ಪೂಜೆ ಮಾತ್ರ ಹರಿಗೆ ಇಷ್ಟವಾಗುವುದಿಲ್ಲ.

13. ಪೂಜೆಯಲ್ಲಿ ವಿಹಿತವಾದ ಬ್ರಹ್ಮಪಾರ ಸ್ತೋತ್ರ, ಪುರುಷಸೂಕ್ತ, ಅಂಭೃಣೀಸೂಕ್ತ, ಬಳಿತ್ಥಾಸೂಕ್ತ, ದ್ವಾದಶಸ್ತೋತ್ರ ಅರ್ಚನೆಗೆ ವೆಂಕಟೇಶ ಸ್ತೋತ್ರಾದಿಗಳು, ಪೂಜಾನಂತರ ಜಿತಂತೇಸ್ತೋತ್ರ, ಪಾಪಮೋಚನೆ ಸ್ತೋತ್ರಗಳನ್ನು ಹೇಳಲೇಬೇಕು.

14. ಶಂಖಪೂಜೆಯು ಕಡ್ಡಾಯ. ಶಂಖವನ್ನು ಬರೇ ನೆಲದ ಮೇಲಿಡದೆ ಪೀಠದ ಮೇಲಿರಿಸಬೇಕು. ಶಂಖದ ಸಂಬಂಧವಿಲ್ಲದೆ ಯಾವುದೇ ಅರ್ಪಣೆ ನಿಷ್ಫಲ. ಶಂಖವನ್ನು ತಂಬಿಗೆಯಲ್ಲಿ ಮುಳುಗಿಸಿ ಎತ್ತದೆ ಉದ್ಧರಣೆಯಿಂದ ತುಂಬುವುದು ಶಂಖೋದಕವನ್ನು ಪ್ರೋಕ್ಷಣೆಗಾಗಿ ಮಾತ್ರ, ಕುಡಿಯಲು ಅಲ್ಲ. ಶಂಖದ ನೀರನ್ನು ಕೈಗೆ ಹಾಕಿಕೊಂಡೆ ನೈವೇದ್ಯಾದಿ ಪ್ರೋಕ್ಷಣೆ ವಿಹಿತವಾಗಿದೆ.

15. ಕಲಶಪೂಜೆ, ಶಂಖಪೂಜೆ, ಪೀಠಪೂಜೆ, ಆವರಣ ಪೂಜೆ ಹಾಗೂ ತತ್ವನ್ಯಾಸಾದಿಗಳನ್ನು ಮಾಡಲೇಬೇಕು. ಈ ಪೂಜೆಗಾಗಿ ಗಂಧಾಕ್ಷತೆಗಳನ್ನು ಬೇರೆಯಾಗಿಟ್ಟಿರಬೇಕು.

16. ಪೂಜೆಯ ಮೊದಲು ಪೂಜಾರ್ಹತೆಗಾಗಿ ನಾರಾಯಣಾಷ್ಟಾಕ್ಷರ ಮಂತ್ರವನ್ನು ಜಪಿಸಬೇಕು. ಅದಕ್ಕಾಗಿ ಉಪದೇಶ ಪಡೆದಿರಬೇಕು.

17. ಪೂಜೆಯಲ್ಲಿ ಒಳ ಉಡುಪುಗಳನ್ನು ಮಾತ್ರ ಧರಿಸಿ ಮಾಡುವ ಪೂಜೆಯು ನಿಷಿದ್ಧವಾಗಿದೆ. ಕಚ್ಚೆಯನ್ನು ಹಾಕಿಕೊಂಡೇ ಉತ್ತರೀಯ ಧರಿಸಿ ಪೂಜೆ ಮಾಡಬೇಕು.

18. ಧೂಪವನ್ನು ಬಾಯಿಂದ ಊದದೆ, ವಸ್ತ್ರ ಅಥವಾ ಹಸ್ತದಿಂದ ಬೀಸಬಹುದು.

19. ಸಾಲಿಗ್ರಾಮಾದಿಗಳನ್ನು ಎಡಗೈಯಲ್ಲಿರಿಸಿಕೊಂಡು ಅಭಿಷೇಕಾದಿಗಳನ್ನು

ಮಾಡಬಾರದು ಹಾಗೂ ಪ್ರತಿಮೆಗೆ ಮಾತ್ರ ಆವಾಹನಾದಿಗಳು, ಸಾಲಿಗ್ರಾಮಕ್ಕೆ ಆವಾಹನೆ ವಿಸರ್ಜನೆ ಇರುವುದಿಲ್ಲ.

20. ದೇವರ ಪಾತ್ರೆಗಳನ್ನು ಶುದ್ಧವಾಗಿರಿಸಿಕೊಂಡು ಪೂಜಿಸಬೇಕು. ದೇವರ ಪಾತ್ರೆಗಳಲ್ಲಿ ದೇವತಾ ಸನ್ನಿಧಾನ ಇರುವುದರಿಂದ ಕಾಲಿನಿಂದ ಒದೆಯುವುದು ನಿಷಿದ್ಧ.

21. ಪೂಜಾ ಕಾಲದಲ್ಲಿ ತಂತ್ರಸಾರರೀತ್ಯಾ ಪೂಜೆಯನ್ನು ಅಳವಡಿಸಿಕೊಳ್ಳಬೇಕು ಹಾಗೂ ಆಯಾಯ ಮಂತ್ರಗಳನ್ನು ಸರಿಯಾಗಿ ಉಚ್ಚರಿಸಬೇಕು.

22. ಪೂಜಾಕಾಲದಲ್ಲಿ ರಜಸ್ವಲೆ, ಶೂದ್ರರು, ವರ್ಣಬಾಹ್ಯರೊಂದಿಗೆ ಮಾತನಾಡಬಾರದು. ನಗುವುದು ಹಾಸ್ಯ, ವಿನೋದ ಇವುಗಳೂ ನಿಷಿದ್ಧ.

23. ದೇವರ ನೈವೇದ್ಯಕ್ಕೆ ಗ್ಯಾಸ್ ಮೊದಲಾದ ಅಗ್ನಿಗಳಲ್ಲಿ ತಯಾರಾದ ಅನ್ನಾದಿಗಳು ನಿಷಿದ್ಧ, ಅಶುಚಿಯಾಗಿ ತಯಾರಾದ ಅನ್ನಾದಿಗಳೂ ನಿಷಿದ್ಧ, ಸ್ನಾನಾದಿಗಳಿಂದ ಶುಚಿಯಾಗಿಯೇ ತಯಾರಾದವುಗಳೇ ನಿವೇದನಾರ್ಹವಾಗುತ್ತವೆ ಹಾಗೂ ತಾವು ರುಚಿ ನೋಡಿ, ಮೂಸಿದ ನೈವೇದ್ಯ ಅರ್ಪಿಸಬಾರದು.

24. ಭಗವಂತನು ಪೂರ್ಣನಾದ್ದರಿಂದ ಒಂದು ಪಾತ್ರೆ ತುಂಬಾ ನೀರನ್ನಾಗಲೀ, ಅನ್ನಾದಿಗಳನ್ನಾಗಲಿ ಇಡಬೇಕು. ಅರ್ಧ ಪಾತ್ರೆ ಅರ್ಧ ಅನ್ನಾದಿಗಳು ನಿಷಿದ್ಧ.

25. ದೇವರಿಗೆ ನಿವೇದಿಸಿದ ನಂತರ ಬ್ರಹ್ಮ-ವಾಯು ಮೊದಲಾದ ದೇವತೆಗಳಿಗೆ ನೈವೇದ್ಯ ಸಮರ್ಪಿಸಿ, ವೈಶ್ವದೇವ, ಬಲಿಹರಣ, ಗೋಗ್ರಾಸ ಇವುಗಳನ್ನು ಮಾಡಿದ ನಂತರ ತಾನು ಭುಂಜಿಸಬೇಕು.

26. ತೀರ್ಥವನ್ನು ಹಿರಿಯರಿಗೆ ನೀಡಿದ ನಂತರ ಪೂಜಕನೂ ಸ್ವೀಕರಿಸಬೇಕು. ತೀರ್ಥವನ್ನು ಪರಮಾಣುವಿನಷ್ಟು ಭೂಮಿಗೆ ಬೀಳಿಸಬಾರದು.

27. ತೀರ್ಥವನ್ನು ನಿರ್ಮಾಲ್ಯತೀರ್ಥ ಮೂರು ಬಾರಿ, ಮಹಾತೀರ್ಥ ಮೂರು ಬಾರಿ, ರಾತ್ರಿ ಊಟಕ್ಕೆ ಮೊದಲು ಮೂರು ಬಾರಿ

ಭೋಜನಾಂತರಂದಲ್ಲಿ ಒಂದೊಂದು ಬಾರಿ ಹೀಗೆ ಹತ್ತು ಬಾರಿ ತೀರ್ಥ ಪಾನವು ವಿಹಿತವಾಗಿದೆ. ಏಕಾದಶಿಯಂದು ಮಾತ್ರ ಕೇವಲ ಒಂದು ಬಾರಿ.

28. ತೀರ್ಥವನ್ನು ನೀರು ಕುಡಿದ ಹಾಗೆ ಕುಡಿಯಬಾರದು. ಮದ್ಯಕ್ಕೆ ಸಮವಾಗುತ್ತದೆ.

29. ತೀರ್ಥವನ್ನು ಭೋಜನಾನಂತರ ತಾನು ತೆಗೆದುಕೊಂಡು ಉಳಿದವರಿಗೆ ಕೊಡಬೇಕು.

30. ದೇವರ ದೀಪಕ್ಕೆ ಹರಳೆಣ್ಣೆ, ಪಾಮಾಯಿಲ್ಲು ನಿಷಿದ್ಧ. ದೇವರ ದೀಪ ಹಚ್ಚದೆ ಪೂಜೆ ಮಾಡಬಾರದು. ಮಣ್ಣಿನ ಹಣತೆಯಲ್ಲಿ ದೀಪ ಹಚ್ಚುವುದು ನಿತ್ಯ ಪೂಜೆಯಲ್ಲಿ ನಿಷಿದ್ಧ.

31. ಪೂಜಾನಂತರ ಪ್ರದಕ್ಷಿಣ ನಮಸ್ಕಾರ ಮಾಡಿ ಪೂಜೆಯನ್ನು ಭಗವಂತನಲ್ಲಿ ಅರ್ಪಣೆ ಕಡ್ಡಾಯ ಹಾಗೂ ಫಲಾಪೇಕ್ಷೆ ಇಲ್ಲದೆ ಪೂಜಿಸಬೇಕು.

32. ವಾತ–ಮೂತ್ರಾದಿಗಳನ್ನು ಮುಗಿಸಿ ಸ್ನಾನ ಮಾಡಿಕೊಂಡು ಪೂಜಿಸಬೇಕು ವಿನಹ ಅವುಗಳನ್ನು ಬಂಧಿಸಿಕೊಂಡು ಪೂಜಿಸಬಾರದು.

33. ನಿರಾಸನನಾಗಿಯೂ, ಶಿಖೆಯನ್ನು ಕಟ್ಟಿಕೊಳ್ಳದೆಯೇ ಒದ್ದೆ ವಸ್ತ್ರವನ್ನು ಉಟ್ಟು ಪೂಜಿಸಬಾರದು.

34. ಪೂಜಾಕಾಲದಲ್ಲಿ ಯಾವುದೇ ಮೊಬೈಲ್‌ಗಳನ್ನು ಮುಟ್ಟಿಕೊಂಡು, ಅವರೊಂದಿಗೆ ಮಾತನಾಡುತ್ತಾ ಪೂಜೆ ಮಾಡಬೇಡಿ. ಸ್ವಿಚ್ ಆಫ್ ಮಾಡಿ, ನಿಶ್ಚಿಂತವಾಗಿ ಒಂದು ಘಂಟೆ ಭಕ್ತಿಯಿಂದ ಪೂಜೆ ಮಾಡಿರಿ.

35. ಪೂಜೆಯೆಂಬುದು ಭಗವಂತನಿಗೆ ನಾವು ತೋರುವ ಕೃತಜ್ಞತೆ. ಅದರಲ್ಲಿ ದೋಷ ಬರಬಾರದು.

36. ಏಕಾದಶೀ, ಚಾತುರ್ಮಾಸ್ಯ ಕೃಷ್ಣಷ್ಟಾಮೀ ಆಪತ್ ಕಾಲದಲ್ಲಿಯೂ ಬಿಡಬೇಡಿ. ಧರ್ಮವನ್ನು ರಕ್ಷಿಸುವವರಿಗೆ ಧರ್ಮವು ಅವರನ್ನು ರಕ್ಷಿಸದೆ ಬಿಡುವುದಿಲ್ಲ.

37. ಕಾಫಿ ಮೊದಲಾದವುಗಳನ್ನು ಕುಡಿದು ಪೂಜೆ ಮಾಡಬೇಡಿ. ಭಗವಂತನ ಅನುಗ್ರಹವಾಗುವುದು ತ್ಯಾಗದಿಂದಲೇ.

38. ದೇವಪೂಜ ಮಂತ್ರಗಳನ್ನು ಉಪದೇಶ ಪಡೆದು ಪೂಜಾಕಾಲದಲ್ಲಿ ಭಕ್ತಿಯಿಂದ ಪರಿಸುತ್ತಾ ತಂತ್ರ ಮುಂದುವರಿಸಿ. ಪೂಜೆ ಹಾಗೂ ಪೂಜಾ ಮಂತ್ರಗಳನ್ನು ಹೇಳಿಕೊಡಲು ನಮ್ಮ ಸಂಸ್ಥೆ ಸಿದ್ಧವಿದ್ದು ಅದನ್ನು ಉಪಯೋಗಿಸಿಕೊಳ್ಳಿರಿ. ಇಂತಹ ಅಮೂಲ್ಯ ವೈಷ್ಣವ ಜನ್ಮವನ್ನು ಸದುಪಯೋಗ ಮಾಡಿಕೊಳ್ಳಿರಿ. ಈಗಾಗಲೇ ಯಮಧರ್ಮ ನಮ್ಮ ಮೇಲೆ ಕಣ್ಣು ಹಾಕಿದ್ದಾನೆ, ಮರೆಯಬೇಡಿ. ವಿದೇಶ ವಸ್ತು, ಸಿದ್ಧಾಂತಗಳಿಗೆ ಮಾರು ಹೋಗಿ ಹಾಳಾಗಬೇಡಿ. ಈ ಜನ್ಮ ಹೋದರೆ ಮುಂದೆ ಇಂತಹ ಸಾಧನ ಶರೀರ ದೊರೆಯಲಾರದು. ಏಳಿರಿ, ಎದ್ದೇಳಿರಿ, ಗುರುಗಳನ್ನು ಹಿಡಿಯಿರಿ. ಹರಿ ಗುರುಗಳ ಅನುಗ್ರಹ ಹೊಂದಿರಿ.

39. ನಮ್ಮ ಸಂಸ್ಥೆಗೆ ನೀವು ಯಾವ ಕಾಲದಲ್ಲಾದರೂ ಬರಬಹುದು. ನಿಮ್ಮ ಮಕ್ಕಳಿಗೆ ಸಕಾಲಕ್ಕೆ ಉಪನಯನ ಮಾಡಿ, ಸಂಧ್ಯಾವಂದನೆಗೆ ನಮ್ಮ ಸಂಸ್ಥೆಗೆ ಕಳುಹಿಸಿರಿ. ಮೂರು ಹೊತ್ತು ಸಂಧ್ಯಾವಂದನೆಯನ್ನು ಮಾಡಿಸಿ ಬ್ರಾಹ್ಮಣ್ಯ ಉಳಿಸಿ.

40. ಸ್ತ್ರೀಯರು ಸ್ತ್ರೀ ಧರ್ಮಗಳನ್ನು ತಿಳಿಯಿರಿ, ಆಚರಿಸಿ. ನಿಮ್ಮ ಮಕ್ಕಳಿಗೆ ತರಬೇತಿ ನೀಡಿರಿ, ಭಾರತದ ಸತ್ತ ಪ್ರಜೆಯನ್ನಾಗಿಸದೆ ಭಾರತದ ಸತ್ಪ್ರಜೆಯನ್ನಾಗಿ ತಯಾರಿಸಿ. ತಂದೆ, ತಾಯಿಗಳೇ ಮುಂದೆ ನಿಮ್ಮ ಮಕ್ಕಳೇ ನಿಮ್ಮನ್ನು ನಿಂದಿಸಬಹುದು. ಮಕ್ಕಳೊಂದಿಗೆ ಕಲಿಯಲೂ ನೀವು ಬನ್ನಿರಿ.

41. ಇಷ್ಟು ದಿವಸ ಹೋಗಾಯಿತು. ಇನ್ನಾದರೂ ಕಲಿತು ಏಕೋಭಾವದಿ ಶ್ರೀಹರಿಯನ್ನು ಪೂಜಿಸಿ, ಹೋದ ತಾಯಿ ತಂದೆ, ಹೋದ ಕಾಲ ಮರಳಿ ಎಂದಿಗೂ ಬಾರದು. ಇದಕ್ಕೆಲ್ಲ ನಮ್ಮ ಸಂಸ್ಥೆಯ ನಾಲ್ಕು ದ್ವಾರವೂ ತೆರೆದಿದೆ, ಬನ್ನಿರಿ. ನಮ್ಮ ಸಂಸ್ಥೆಯು ನೀವು ಕಲಿತ ವಿಷಯಕ್ಕೆ ಯಾವುದೇ ರೀತಿಯ ಫೀಸ್ ಕೇಳುವುದಿಲ್ಲ. ಧೈರ್ಯವಾಗಿ ಬನ್ನಿರಿ. ತ್ರಿಮತಸ್ಥರೂ ಬನ್ನಿರಿ. ನಾವೆಲ್ಲರೂ ಒಂದಾಗಿ ಧರ್ಮ ಕಾಪಾಡೋಣ. ಹಿಂದುತ್ವ ಉಳಿಸೋಣ.

* * * * * *

# ವಿಭಾಗ - 1
# ದೇವಪೂಜಾ ತತ್ವಮ್

## 1. ಗುರುವಂದನಮ್ :[1]

(ಗುರು ನಮಸ್ಕಾರದ ಬಗ್ಗೆ ವಿವರಕ್ಕೆ ಪರಿಶಿಷ್ಟ ನೋಡಿ)

**ಶ್ರೀ ಗುರುಭ್ಯೋ ನಮಃ । ಶ್ರೀ ಪರಮಗುರುಭ್ಯೋ ನಮಃ ।**

**ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯೇಭ್ಯೋ ನಮಃ ।**

**ಶ್ರೀ ವೇದವ್ಯಾಸಾಯ ನಮಃ । ಶ್ರೀ ಭಾರತ್ಯೈ ನಮಃ ।**

**ಶ್ರೀ ಸರಸ್ವತ್ಯೈ ನಮಃ । ಶ್ರೀ ವಾಯವೇ ನಮಃ ।**

**ಶ್ರೀ ಬ್ರಹ್ಮಣೇ ನಮಃ । ಶ್ರೀ ಮಹಾಲಕ್ಷ್ಮ್ಯೈ ನಮಃ ।**

**ಶ್ರೀ ನಾರಾಯಣಾಯ ನಮಃ । ಮಂತ್ರ ದೇವತಾ ಇಷ್ಟದೇವತಾತ್ಮಕ ।**

**ಶ್ರೀ ಮುಕ್ತಿ ಪ್ರದಾಯಕ ಶ್ರೀ ವಾಸುದೇವಾಯ ನಮಃ ।**

---

1. ಪ್ರಾತಃ ಸ್ನಾನಾನಂತರ ಸಂಧ್ಯಾವಂದನೆಯನ್ನು ಮಾಡಿ ತಾಮ್ರ ಪಾತ್ರೆಯಲ್ಲಿ ಮೂರು ಬಾರಿ ವಸ್ತ್ರಶೋಧಿತ ಅಗ್ರ್ಯೋದಕವನ್ನು ನೆರಳು ಬೀಳದಂತೆ ತಂದು ಏಳು, ಐದು, ಕನಿಷ್ಠಪಕ್ಷ ಒಂದಾದರೂ ಕಲಶದಲ್ಲಿ ನೀರನ್ನು ತುಂಬಿ ವಸ್ತ್ರದಿಂದ ಆಚ್ಛಾದಿಸಿ, ತುಳಸೀಕಾಷ್ಠ, ತುಲಸೀ, ಪುಷ್ಪಗಳನ್ನು ಸಂಗ್ರಹಿಸಿಕೊಂಡು, ಗಂಧಾಕ್ಷತೆಯನ್ನು ಸಿದ್ಧಪಡಿಸಿಕೊಂಡು ಪೂರ್ವ ಅಥವಾ ಉತ್ತರ ದಿಕ್ಕಿಗೆ ಅಭಿಮುಖವಾಗಿ ಕುಳಿತುಕೊಂಡು ಮಂತ್ರವನ್ನು ಬಹಳ ವೇಗದಿಂದಾಗಲೀ, ಅತಿ ನಿಧಾನದಿಂದಾಗಲೀ ಉಚ್ಚರಿಸದೆ ಪೂಜೆಯನ್ನು ಆರಂಭಿಸಬೇಕು.

**ತಾಳತ್ರಯಂ** : ದೇವಗೃಹವನ್ನು ಪ್ರವೇಶಿಸುವಾಗ ದ್ವಾರದ ಬಳಿ ಮೂರು ಬಾರಿ ಚಪ್ಪಾಳೆಯನ್ನು ತಟ್ಟುವುದೇ "ತಾಳತ್ರಯ". ತಾಳತ್ರಯವನ್ನು ಬಲಗೈಯಿಂದ ಎಡಗೈಯನ್ನು ಪುನಃ ಬಲಗೈಯಿಂದ ಎಡಗೈಯನ್ನು ಹೊಡೆಯಬೇಕು. ಇದನ್ನೇ ವಿಹಗೇಂದ್ರ ಸಂಹಿತಾದಲ್ಲಿ –

**ದಕ್ಷೇಣ ವಾಮಂ ಸಂತಾಡ್ಯ ವಾಮಹಸ್ತೇನ ದಕ್ಷಿಣಂ ।**
**ವಾಮಂ ದಕ್ಷಿಣ ಹಸ್ತೇನ ಕುರ್ಯಾತ್ ತಾಲತ್ರಯಂ ಬುಧಃ ॥**
**ಕೃತ್ವಾ ತಾಲತ್ರಯಂ ದ್ವಾರೇ ದೇಹಲೀಂ ಅಸ್ಪೃಶನ್ ವಿಶೇತ್ ।**

– ದಕ್ಷಿಣಾಂಘ್ರಿಂ ಪುರಸ್ಕೃತ್ಯ

## 2. ಹರಿಗುರು ಪ್ರಾರ್ಥನೆ :

**ನಾರಾಯಣಾಯ ಪರಿಪೂರ್ಣಗುಣಾರ್ಣವಾಯ**
**ವಿಶ್ವೋದಯಸ್ಥಿತಿಲಯೋನ್ನಿಯತಿ ಪ್ರದಾಯ ।**
**ಜ್ಞಾನಪ್ರದಾಯ ವಿಬುಧಾಸುರ ಸೌಖ್ಯದುಃಖ**
**ಸತ್ಕಾರಣಾಯ ವಿತತಾಯ ನಮೋ ನಮಸ್ತೇ ॥ 1 ॥**

---

2. **ಹರಿಗುರು ಪ್ರಾರ್ಥನೆಯ ಅರ್ಥ :**

**ಶ್ಲೋಕ 1 : ಪರಿಪೂರ್ಣಗುಣಾರ್ಣವಾಯ** = ಗುಣಗಳು ಪತ್ರೇಕವಾಗಿದ್ದು ನಿಸ್ಸೀಮತೆಯನ್ನು ಹೊಂದಿರುವ, ಗುಣಗಳಿಂದ ಸಮುದ್ರನಂತಿರುವ, **ವಿಶ್ವೋದಯ ಸ್ಥಿತಿಲಯೋನ್ನಿಯತಿ ಪ್ರದಾಯ** = ಜಗತ್ತಿನ ಉತ್ಪತ್ತಿ, ಸ್ಥಿತಿ, ಸಂಹಾರ ನಿಯಮನಾದಿಗಳನ್ನು ಮಾಡುವ, **ಜ್ಞಾನಪ್ರದಾಯ** = ಬ್ರಹ್ಮಾದಿಗಳಿಗೂ ಜ್ಞಾನ ಪ್ರದನಾದ, **ವಿಬುಧಾಸುರ ಸೌಖ್ಯದುಃಖ–ಸತ್ಕಾರಣಾಯ** = ದೇವತೆಗಳಿಗೆ ಸೌಖ್ಯವನ್ನು, ದೈತ್ಯರಿಗೆ ದುಃಖವನ್ನು ಕೊಡುವ, **ವಿತತಾಯ** = ಸರ್ವತ್ರ ವ್ಯಾಪ್ತನಾದ, **ನಾರಾಯಣಾಯ** = ಗುಣಗಳ ಖನಿಯಾದ ಶ್ರೀಹರಿಯೇ, **ತೇ** = (ನನಗೆ) – (ಮದ್ವರಿಗೆ) ಪ್ರತ್ಯಕ್ಷ ದೃಶ್ಯನಾದ ನಿನಗೆ, **ನಮೋ ನಮಃ** = ಭಕ್ತ್ಯಾದರ ಪೂರ್ವಕ ವಂದನೆಯು.

---

ಎಂದು ತಿಳಸಲಾಗಿದೆ. ದೇವರ ಮನೆಯನ್ನು ಪ್ರವೇಶಿಸುವಾಗ ಬಲಗಾಲನ್ನು ಮುಂದೆ ಇಟ್ಟು ಪ್ರವೇಶಿಸಬೇಕು. ಹೀಗೆ ತಾಲತ್ರಯದಿಂದ ಸೌಖ್ಯವನ್ನು ಪಡೆಯಬಹುದು. ಒಂದು ಹಾಗೂ ಎರಡು ತಾಳವು ನಿಷೇಧಿಸಲ್ಪಟ್ಟಿದೆ.

**ಏಕ ತಾಳೇನ ಮರಣಂ ದ್ವಿತಾಳೇ ವ್ಯಾಧಿಪೀಡನಂ ।**

**ತ್ರಿತಾಳೇನ ಸುಖಮಾಪ್ನೋತಿ ತಸ್ಮಾತ್ ತಾಳತ್ರಯಂ ಕುರು ॥**

**ದ್ವಾರದ ಎಡಭಾಗದಿಂದ ಪ್ರವೇಶಿಸಬೇಕು** : ದೇವರ ಮನೆಯನ್ನು ಪ್ರವೇಶಿಸುವಾಗ ಹೊಸ್ತಿಲನ್ನು ಮೂರು ಭಾಗಗಳಾಗಿ ಮನಸ್ಸಿನಲ್ಲಿ ಚಿಂತಿಸಿ, ಪುನಃ ಮಧ್ಯ ಭಾಗವನ್ನು ಎರಡಾಗಿ ವಿಭಾಗಿಸಿ, ಆ ಎರಡರಲ್ಲಿ ಎಡಭಾಗದಿಂದ ಬಲಗಾಲನ್ನು ಮುಂದೆ ಇರಿಸುತ್ತಾ ದೇವರ ಮನೆಯನ್ನು ಪ್ರವೇಶಿಸಬೇಕು.

**ತ್ರಿಭಾಗೀ ಕೃತ್ಯ ತನ್ಮಧ್ಯಂ ಭಾಗಮೇಕಂ ದ್ವಿಧಾ ಪುನಃ ।**
**ದ್ವಾರಸ್ಯ ವಾಮಭಾಗೇ ತು ದಕ್ಷಿಣೇನ ಪದಾ ವಿಶೇತ್ ॥**

ನಂತರ ದ್ವಾರಪಾಲಕರ ಅನುಮತಿ ಪಡೆದುಕೊಂಡು **"ವಾಯ ವಾಯಾ ಹಿ"** ಎಂದು ಮಂತ್ರದಿಂದ ದೇವರ ಮನೆಯ ಬಾಗಿಲನ್ನು ತೆರೆಯಬೇಕು.



**ಯೋ ವಿಪ್ರಲಂಬವಿಪರೀತಮತಿ ಪ್ರಭೂತವಾದಾನ್**

**ನಿರಸ್ಯ ಕೃತವಾನ್ ಭುವಿ ತತ್ವವಾದಂ।**

**ಸರ್ವೇಶ್ವರೋ ಹರಿರಿತಿ ಪ್ರತಿಪಾದಯಂತಂ**

**ಆನಂದತೀರ್ಥ ಮುನಿವರ್ಯಮಹಂ ನಮಾಮಿ ॥ 2 ॥**

## 3. ದ್ವಾರಪಾಲಕ ವಂದನಂ :

**ಪೂರ್ವದ್ವಾರೇ ದ್ವಾರಶ್ರಿಯೈ ನಮಃ ಜಯಾಯ ನಮಃ, ವಿಜಯಾಯ ನಮಃ।**

**ದಕ್ಷಿಣದ್ವಾರೇ ದ್ವಾರಶ್ರಿಯೈ ನಮಃ। ಬಲಾಯನಮಃ, ಪ್ರಬಲಾಯ ನಮಃ।**

**ಪಶ್ಚಿಮದ್ವಾರೇ ದ್ವಾರಶ್ರಿಯೈ ನಮಃ । ಕುಮುದಾಯ ನಮಃ ಕುಮುದಾಕ್ಷಾಯ ನಮಃ।**

**ಉತ್ತರದ್ವಾರೇ ದ್ವಾರಶ್ರಿಯೈ ನಮಃ। ನಂದಾಯ ನಮಃ । ಸುನಂದಾಯ ನಮಃ।**

**ನಂದಂ ಸುನಂದಂ ಗರುಡಂ ಪ್ರಚಂಡಂ ಚಂಡಮೇವ ಚ ॥**

**ಜಯಂ ಚ ವಿಜಯಂ ಚೈವ ಕುಮುದಂ ಕುಮುದೇಕ್ಷಣಂ ॥ ದ್ವಾರ ಪಾಲಕೇಭ್ಯೋ ನಮಃ ॥**

---

**ಶ್ಲೋಕ 2:** **ಯಃ**= ಯಾವ ಶ್ರೀಮದಾಚಾರ್ಯರು, **ವಿಪ್ರಲಂಬ ವಿಪರೀತಮತಿ ಪ್ರಭೂತ ವಾದಾನ್** = ಕಪಟ ಬುದ್ಧಿ ಹಾಗೂ ಅನ್ಯಥಾ ಜ್ಞಾನದಿಂದ ಕೂಡಿದ ಬುದ್ಧಿಯುಳ್ಳ 21 ಮತ ಪ್ರವರ್ತಕರಿಂದ ವಿಸ್ತರಿಸಲ್ಪಟ್ಟ ವಾದಗಳನ್ನು, **ನಿರಸ್ಯ** = ನಿರಾಸ ಮಾಡಿ, **ಭುವಿ** = ಭೂಮಿಯಲ್ಲಿ, **ತತ್ವವಾದಂ** = ಹರಿಯೇ ಸ್ವತಂತ್ರನೆಂಬ ವೈಷ್ಣವ ಸಿದ್ಧಾಂತವನ್ನು, **ಕೃತವಾನ್** =ವಿಸ್ತರಿಸಿ, **ಹರಿಃ** = ಶ್ರೀಹರಿಯು, **ಸರ್ವೇಶ್ವರಃ ಇತಿ** = ಹರಿಯೇ ಸರ್ವೋತ್ತಮ ಎಂದು, **ಪ್ರತಿಪಾದಯಂತಂ** = ಪ್ರತಿಪಾದಿಸಿದರೋ, **ಅಂತಹ ಆನಂದತೀರ್ಥಂ** = ವೇದಪ್ರಸಿದ್ಧರಾದ ಶ್ರೀಮಧ್ವರನ್ನು, **ಅಹಂ** = ನಾನು, **ನಮಸ್ಕರೋಮಿ** = ನಮಸ್ಕರಿಸುತ್ತೇನೆ.

---

3. **ದ್ವಾರಪಾಲಕ ದೇವತೆಗಳ ಪೂಜೆ ಅರ್ಥ** : ಪೂರ್ವದ್ವಾರದಲ್ಲಿರುವ ಲಕ್ಷ್ಮಿಗೆ ನಮಸ್ಕಾರ, ಹಾಗೆಯೆ ಜಯ ವಿಜಯರಿಗೂ ನಮಸ್ಕಾರ, ದಕ್ಷಿಣದಲ್ಲಿರುವ ಬಲಪ್ರಬಲರಿಗೂ, ಪಶ್ಚಿಮದಲ್ಲಿರುವ ಕುಮುದ ಕುಮುದೇಕ್ಷಣರಿಗೂ ಉತ್ತರದ ದ್ವಾರದಲ್ಲಿರುವ ನಂದ-ಸುನಂದರಿಗೂ ನಮಸ್ಕಾರ.

**4. ಕವಾಟೋದ್ಘಾಟನಮ್ :**[2] [ದೇವರ ಕೋಣೆಯ ಬಾಗಿಲು/ಸಂಪುಟ ತೆಗೆಯಬೇಕು]

**ವಾಯುವಾಯಾಹಿ ಇತ್ಯಸ್ಯ ಮಂತ್ರಸ್ಯ-ಮಧುಚ್ಛಂದಾ ವೈಶ್ವಾಮಿತ್ರಃ। ವಾಯುರ್ದೇವತಾ । ಗಾಯತ್ರೀ ಛಂದಃ । ಕವಾಟೋದ್ಘಾಟನೇ ವಿನಿಯೋಗಃ।**

**ಓಂ ವಾಯ ವಾಯಾಹಿ ದರ್ಶತೇಮೇ ಸೋಮಾ ಅರಂಕೃತಾಃ ತೇಷಾಂ ಪಾಹಿ ಶ್ರುಧೀ ಹವಮ್ ॥** -ಋ.-1/2/1

**5. ದೀಪ ಪ್ರಜ್ವಾಲನಮ್ :**

(ದೀಪವನ್ನು ಹಚ್ಚುವುದು ಅಥವಾ ಬತ್ತಿಯನ್ನು ಮುಂದೆ ಮಾಡುವುದು)

**ಅಗ್ನಿನಾಗ್ನಿರಿತ್ಯಸ್ಯ-ಮೇಧಾತಿಥಿಃ ಕಾಣ್ವಋಷಿಃ।**

**ಅಗ್ನಿರ್ದೇವತಾ ಗಾಯತ್ರೀಛಂದಃ। ದೀಪಪ್ರಜ್ವಾಲನೇ ವಿನಿಯೋಗಃ।**

---

4. **ಕವಾಟೋದ್ಘಾಟನ ಅರ್ಥ :**
**ಹೇ ವಾಯೋ** = ವಾಯುದೇವನೆ, **ತದಂತರ್ಯಾಮಿ** = ನಾರಾಯಣನೇ, **ಯಜ್ಞಂ** = ನಾವು ಮಾಡುತ್ತಿರುವ ದೇವ ಪೂಜಾರೂಪ ಯಜ್ಞವನ್ನು ಕುರಿತು, **ಆಯಾಹಿ** = ಬನ್ನಿ, **ಇಮೇ ಸೋಮಾಃ** = ಈ ಸೋಮರಸವು, **ಸೋಮರಸೋಪಲಕ್ಷಿತ** = ನೀರು, ತುಳಸಿ, ಗಂಧ ಮೊದಲಾದವು, **ಅರಂಕೃತಾಃ** = ಅಣಿಯಾಗಿ ಮಾಡಲ್ಪಟ್ಟಿದೆ, **ತೇಷಾಂ** = ಅವುಗಳನ್ನು, **ಪಾಹಿ** = ರಕ್ಷಿಸು ಹಾಗೂ ಸ್ವೀಕರಿಸು, **ಹವಂ** = ನನ್ನ ಪ್ರಾರ್ಥನೆಯನ್ನು, **ಶ್ರುಧೀ**= ಬರುವಿಕೆಯಿಂದ ಸಫಲಗೊಳಿಸು.

5. **ದೀಪ ಪ್ರಜ್ವಾಲನಮ್ ಅರ್ಥ :**
**ಜುಹ್ವಾಸ್ಯಃ** = ಹೋಮ ಮಾಡಲು ಆಶ್ರಯವಾದ ಮುಖವುಳ್ಳ, **ಕವಿಃ** =

---

2. ಈ ಕೆಳಗಿನ ಮಂತ್ರವನ್ನು ಹೇಳುತ್ತಾ ದೇವಕೋಣೆ ಪ್ರವೇಶಿಸಬೇಕೆಂದು ಪೂಜಾ-ಕಲ್ಪಲತಾದಲ್ಲಿ ಹೇಳಲಾಗಿದೆ. "ಯಚ್ಚ ಕಿಂಚಿತ್ ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿವಾ। ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ । ಇತಿ ಪಠನ್ನೇವ ದೇವಗೃಹಂ ಪ್ರವಿಶೇತ್ । - ಪೂಜಾಕಲ್ಪಲತಾ

**ಓಂ ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿ ರ್ಯುವಾ।**

**ಹವ್ಯವಾಡ್ ಜುಹ್ವಾಸ್ಯಃ।** – ಋ–1, ಮಂ–126ನೇ ಸೂಕ್ತ

## 6. ತಾರತಮ್ಯ ಸ್ತೋತ್ರಮ್ :

(ನಂತರ ತಾರತಮ್ಯ ಸ್ತೋತ್ರವನ್ನು ಪಠಿಸಬೇಕು)

**ವಂದೇ ವಿಷ್ಣುಂ ನಮಾಮಿ ಶ್ರಿಯಮಥ ಚ ಭುವಂ ಬ್ರಹ್ಮವಾಯೂ ಚ ವಂದೇ, ಗಾಯತ್ರೀಂ ಭಾರತೀಂ ತಾಮಪಿ ಗರುಡಮನಂತಂ ಭಜೇ ರುದ್ರದೇವಂ। ದೇವೀಂ ವಂದೇ ಸುಪರ್ಣೀಂ ಅಹಿಪತಿದಯಿತಾಂ ವಾರುಣೀಮಪ್ಯುಮಾಂ ತಾಂ, ಇಂದ್ರಾದೀನ್ ಕಾಮಮುಖ್ಯಾನ್ ಅಪಿ ಸಕಲಸುರಾನ್ ತದ್ಗುರೂನ್ ಮದ್ಗುರಂಶ್ಚ॥**

---

ಸರ್ವಜ್ಞನಾದ, **ಗೃಹಪತಿಃ** = ಮನೆಗೆ ಪತಿಯಂತಿರುವ, ಗಾರ್ಹಪತ್ಯವೆಂಬ, **ಯುವಾ** = ಯುವಕನಾದ, **ಹವ್ಯವಾಟ್** = ಅಗ್ನಿಯು, **ಅಗ್ನಿನಾ** = ಅಗ್ನಿನಾಮಕ ಭಗವಂತನಿಂದ, **ಸಮಿಧ್ಯತೆ** = ಚೆನ್ನಾಗಿ ಪ್ರಕಾಶಿಸುತ್ತಾನೆ.

6. **ತಾರತಮ್ಯ ಸ್ತೋತ್ರಮ್ ಅರ್ಥ :**

**ಅಹಂ** = ನಾನು, **ವಿಷ್ಣುಂ** = ಸರ್ವತ್ರ ವ್ಯಾಪ್ತನಾದ ವಿಷ್ಣುವನ್ನು, **ನಮಾಮಿ** = ಮೊದಲು ನಮಸ್ಕರಿಸುತ್ತೇನೆ, **ಅಥ** = ವಿಷ್ಣುವಿನ ನಂತರ, **ಶ್ರಿಯಂ ಭುವಂ ಚ** = ಶ್ರೀದೇವಿ ಭೂದೇವಿಯರನ್ನು, **ಚ** = ನಂತರ, **ಬ್ರಹ್ಮವಾಯೂ** = ಬ್ರಹ್ಮವಾಯು ದೇವರನ್ನು ನಮಸ್ಕರಿಸುವೆ. ನಂತರ ಗಾಯತ್ರೀಂ, **ಭಾರತೀಂ** = ಸರಸ್ವತಿ ಭಾರತಿದೇವಿಯರನ್ನು, **ಗರುಡಂ–ಅನಂತಂ–ರುದ್ರದೇವಂ** = ಗರುಡ ಶೇಷ ರುದ್ರ ದೇವರನ್ನು, **ಭಜೇ** = ವಂದಿಸುವೆನು, **ದೇವೀಂ ಸುಪರ್ಣೀಂ** = ಗರುಡ ಪತ್ನಿಯಾದ ಸೌಪರ್ಣಿಯನ್ನು, **ಅಹಿತಪಿದಯಿತಾಂ, ವಾರುಣೀಂ** = ಸರ್ಪಪತಿಶೇಷನ ಪತ್ನಿಯಾದ ವಾರುಣಿಯನ್ನು, **ತಾಂ** = ಉಮಾಂ, **ಅಪಿ** = ಆ ರುದ್ರಪತ್ನಿಯಾದ ಪಾರ್ವತಿಯನ್ನು, ನಮಿಸಿ, **ಇಂದ್ರಾದೀನ್** = ಇಂದ್ರನೇ ಮೊದಲಾದವರನ್ನು, **ಕಾಮಮುಖ್ಯಾನ್** = ಮನ್ಮಥ ಮುಖ್ಯರನ್ನು, **ಸಕಲ ಸುರಾನ್** = ಸಮಸ್ತ ದೇವತೆಗಳನ್ನು, **ತದ್ಗುರೂನ್** = ಪ್ರಸಿದ್ಧರಾದ ಗುರುಗಳನ್ನು, **ಮದ್ಗುರೂನ್** = ನನಗೆ ನೇರವಾಗಿ ಉಪದೇಶಿಸಿದ ಗುರುಗಳನ್ನು, **ವಂದೇ** = ನಮಸ್ಕರಿಸುವೆನು.

**7. ಭೂತೋಚ್ಚಾಟನಮ್ :**[3] (ಚಿಟಿಕೆ ಹಾಕಿ ಭೂತಗಳನ್ನು ಓಡಿಸುವುದು)

**ಅಪಸರ್ಪಂತ್ವಿತ್ಯಸ್ಯ ಮಂತ್ರಸ್ಯ–ಮಮ ಶರೀರಸ್ಯ ಅಂತರ್ಯಾಮೀ ಋಷಿಃ । ಪ್ರಕೃತಿ ಪುರುಷಶ್ಛಂದಃ । ಸತ್ಯೋ ದೇವತಾ । ಭೂತೋಚ್ಚಾಟನೇ ವಿನಿಯೋಗಃ॥**

**ಅಪಸರ್ಪಂತು ಯೇ ಭೂತಾಃ ಯೇ ಭೂತಾಃ ಭುವಿ ಸಂಸ್ಥಿತಾಃ ।**
**ಯೇ ಭೂತಾ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ ॥**

**ಅಪಕ್ರಾಮಂತು ಭೂತಾದ್ಯಾಃ ಕ್ರೂರಾಶ್ಚೈವ ತು ರಾಕ್ಷಸಾಃ ।**
**ಯೇ ಚಾತ್ರ ನಿವಸಂತ್ಯೇವ ದೇವತಾ ಭುವಿ ಸಂತತಮ್ ॥**

**ತೇಷಾಮಪ್ಯವಿರೋಧೇನ ಪೂಜಾ ಕರ್ಮ ಸಮಾರಭೇ ।**
**"ಅಸ್ತ್ರಾಯಫಟ್" ಇತಿ ನಾರಾಚಮುದ್ರಯಾ ದಿಗ್ಬಂಧನಂ ಕುರ್ಯಾತ್।**

---

7. **ಭೂತೋಚ್ಚಾಟನ ಮಂತ್ರದ ತಾತ್ಪರ್ಯ :** ಭೂಮಿಯಲ್ಲಿರುವ ಯಾವ ಭೂತಗಳಿವೆಯೋ ಅವೆಲ್ಲ ದೂರ ಹೋಗಲಿ, ನಮ್ಮ ಪೂಜೆಗೆ ವಿಘ್ನವಡ್ಡುವ ಭೂತಗಳೆಲ್ಲ ರುದ್ರದೇವರ ಅಣತಿಯಂತೆ ನಾಶ ಹೊಂದಲಿ, ಭೂತಗಳು ಮತ್ತು ಕ್ರೂರ ರಾಕ್ಷಸರೂ ದೂರ ಹೋಗಲಿ, ಭೂಮಿಯಲ್ಲಿರುವ ದೇವತೆಗಳ ಪೂಜೆಗೆ

---

3. **ಛೋಟಿಕಾ ಮುದ್ರೆ** : ಬಲಗೈಯ ಮಧ್ಯಾಂಗುಲೀ, ಹೆಬ್ಬೆರಳುಗಳನ್ನು ಸೇರಿಸಿ ಶಬ್ದ ಮಾಡುವುದಕ್ಕೆ "ಛೋಟಿಕಾ ಮುದ್ರೆ" ಎಂದು ಹೆಸರು. **"ಛೋಟಿಕಾ ಮುದ್ರಾನಾಮ ದಕ್ಷಿಣಮಧ್ಯಮಾಂಗುಲೇಃ ದಕ್ಷಿಣಾಂಗುಷ್ಠಯೋಗೇನ ಶಬ್ದಕರಣಂ"**–ಪೂಜಾಕಲ್ಪಲತಾ. ನಾರಾಚಮುದ್ರೆಯಿಂದ ದಿಗ್ಬಂಧನ ಮಾಡಿ ಸರ್ವವಿಘ್ನನಾಶಕ್ಕಾಗಿ "ಪಾಂತ್ವಸ್ಮಾನ್" ಎಂದು ಎರಡು ಶ್ಲೋಕಗಳನ್ನು ಪಠಿಸಬೇಕೆಂದು ಪೂಜಾಕಲ್ಪಲತಾದಲ್ಲಿದೆ. ಎರಡು ಕೈಯಲ್ಲಿ ಪುಷ್ಪಗಳನ್ನು ಶ್ರೀಹರಿಯ ಮೇಲೆ ಹಾಕುತ್ತಾ ಅಂತರಿಕ್ಷದಲ್ಲಿರುವ ಭೂತಗಳನ್ನು, ದೃಷ್ಟಿ ಹಾಯಿಸಿ ದ್ಯುಲೋಕಸ್ಥ ಭೂತಗಳನ್ನು, ಮೂರು ಬಾರಿ ಕರತಾಂಡನದಿಂದ ಭೂಲೋಕದಲ್ಲಿರುವ ಭೂತಗಳನ್ನು ಓಡಿಸುವುದು.

ನಿರೀಕ್ಷ್ಯ ಪುಷ್ಪಕ್ಷೇಪೇಣ ಪಾಣಿಘಾತತ್ರಯೇಣ ಚ ।
ದಿವ್ಯಾಂತರಿಕ್ಷ ಭೂಮಿಷ್ಠಾನ್ ವಿಘ್ನಾನ್ ಉತ್ಸಾದಯೇತ್ ಸುಧೀಃ ॥
ಈಕ್ಷಯಾ ದಿವಿಷ್ಠಾನ್, ಪುಷ್ಪಕ್ಷೇಪೇಣ ಅಂತರಿಕ್ಷಗಾನ್ ।
ಪಾರ್ಷ್ಣಿಘಾತತ್ರಯೇಣ ಭೂಮಿಸ್ಥಾನ್ ವಿಘ್ನಾನ್ ಉಚ್ಚಾಟಯೇತ್ ॥

**8. ಕ್ಷಮಾ ಪ್ರಾರ್ಥನೆ :** (ಪಾಪಗಳನ್ನು ಕ್ಷಮಿಸೆಂದು ಪ್ರಾರ್ಥನೆ)

**ಆಯತಾಭ್ಯಾಂ ವಿಶಾಲಾಭ್ಯಾಂ ಶೀತಲಾಭ್ಯಾಂ ದಯಾನಿಧೇ ।**
**ಕರುಣಾರಸಪೂರ್ಣಾಭ್ಯಾಂ ಲೋಚನಾಭ್ಯಾಂ ವಿಲೋಕಯ ॥**

**ನಮೋ ಬ್ರಹ್ಮಣ್ಯ ದೇವಾಯ ಗೋಬ್ರಾಹ್ಮಣಹಿತಾಯ ಚ ।**
**ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥**

**ಅಪರಾಧ ಸಹಸ್ರಾಣಿ ಕ್ರಿಯಂತೇಽಹರ್ನಿಶಂ ಮಯಾ ।**
**ತಾನಿ ಸರ್ವಾಣಿ ದೇವೇಶ ಕ್ಷಮಸ್ವ ಪುರುಷೋತ್ತಮ ॥**

**ಕಾಯಿಕಾನ್ ವಾಚಿಕಾನ್ ದೋಷಾನ್ ಮಾನಸಾನಪಿ ಸರ್ವದಾ ।**
**ವೈಷ್ಣವದ್ವೇಷಹೇತೂನ್ ಮೇ ಭಸ್ಮಸಾತ್ ಕುರು ಮಾಧವ ॥**

---

ಅನುವು ಮಾಡಿಕೊಡುವ ದೇವತೆಗಳಿರುವರೋ ಅವರೆಲ್ಲರಿಗೂ ವಿರೋಧವಾಗದಂತೆ ಪೂಜಾಕರ್ಮ ಪ್ರಾರಂಭಿಸುತ್ತೇನೆ. ಹೀಗೆ ಹೇಳಿ ಛೋಟಿಕಾಮುದ್ರೆಯಿಂದ ಚಿಟಿಕೆ ಹೊಡೆಯಬೇಕು. ನಾರಾಚ ಮುದ್ರೆಯಿಂದ ದಿಗ್ಬಂಧನ ಮಾಡುವುದು.

**8. ಕ್ಷಮಾ ಪ್ರಾರ್ಥನೆಯ ಅರ್ಥ :**

**ದಯಾನಿಧೇ** = ದಯಾನಿಧಿಯಾದ ಶ್ರೀಹರಿಯೇ, **ಆಯತಾಭ್ಯಾಂ ವಿಶಾಲಾಭ್ಯಾಂ** = ಅತ್ಯಂತ ದಯೆಯಿಂದ ಅರಳಿರುವ ಹಾಗೂ, **ಶೀತಲಾಭ್ಯಾಂ** = ತಂಪನ್ನುಂಟು ಮಾಡುವ, **ಕರುಣಾರಸ ಪೂರ್ಣಾಭ್ಯಾಂ** = ಕರುಣಾರಸ ಪೂರ್ಣಗಳಾದ, **ಲೋಚನಾಭ್ಯಾಂ** = ಕಣ್ಣುಗಳಿಂದ, ನನ್ನನ್ನು, **ವಿಲೋಕಯ** = ನೋಡಿ ಅನುಗ್ರಹಿಸು. **ಬ್ರಹ್ಮಣ್ಯ ದೇವಾಯ** = ಬ್ರಹ್ಮಜ್ಞಾನಿಗಳಿಗೆ ದೇವನೆನಿಸಿದ, **ಗೋಬ್ರಾಹ್ಮಣಹಿತಾಯ** = ಗೋವಿನಿಂದ ಹಿಡಿದು ಬ್ರಾಹ್ಮಣಪರ್ಯಂತ ಹಿತವನ್ನು ಬಯಸುವ, **ಜಗದ್ಧಿತಾಯ** = ಜಗತ್ತಿನ ಕಲ್ಯಾಣವನ್ನೆ ಇಚ್ಛಿಸುವ, **ಕೃಷ್ಣಾಯ** = ಜಗತ್ತನ್ನೇ ತನ್ನಡೆಗೆ ಆಕರ್ಷಿಸುವ, **ಗೋವಿಂದಾಯ** = ಗೋವಿಂದನಿಗೆ, **ನಮೋ ನಮಃ** = ನಮಸ್ಕಾರಗಳು, **ಹೇ ದೇವೇಶ** = ಭಗವಂತನೇ, **ಮಯಾ** = ನನ್ನಿಂದ, **ಅಹರ್ನಿಶಂ** = ಹಗಲೂ ರಾತ್ರಿಗಳಲ್ಲಿ, **ಅಪರಾಧ ಸಹಸ್ರಾಣಿ** = ಸಾವಿರಾರು ಪಾಪ ಕೆಲಸಗಳು, **ಕ್ರಿಯತೇ** = ಮಾಡಲ್ಪಡುತ್ತಿರುತ್ತದೆ, **ಪುರುಷೋತ್ತಮ** = ಕ್ಷರಾಕ್ಷರ ಶ್ರೇಷ್ಠನಾದ ಭಗವಂತನೇ,

## 9. ಮಾನುಷಗಂಧ ನಿವಾರಣಮ್ :

(ಮನುಷ್ಯನಲ್ಲಿರುವ ದುರ್ಗಂಧವನ್ನು ಹೋಗಲಾಡಿಸಿಕೊಳ್ಳುವುದು)

**ಯೇಭ್ಯೋ ಮಾತೇತ್ಯಸ್ಯ ಮಂತ್ರಸ್ಯ । ಗಯಪ್ಲಾತಋಷಿಃ । ವಿಶ್ವೇದೇವತಾಃ । ಜಗತೀ ಛಂದಃ । ಮನುಷ್ಯಗಂಧ ನಿಬರ್ಹರಣಾರ್ಥೇ ಜಪೇ ವಿನಿಯೋಗಃ ।**

**ಓಂ ಯೇಭ್ಯೋ ಮಾತಾ ಮಧುಮತ್ ಪಿನ್ವತೇ ಪಯಃ ಪೀಯೂಷಂ ದ್ಯೌರದಿತಿರದ್ರಿಬರ್ಹಾಃ । ಉಕ್ಥಶುಷ್ಮಾನ್ ವೃಷಭರಾಂತ್ ಸ್ವಪ್ನಸಸ್ತಾ ಆದಿತ್ಯಾ ಅನುಮದಾ ಸ್ವಸ್ತಯೇ ।** – ಋ–10/63/3

**ಏವ ಪಿತ್ರೇ ಇತ್ಯಸ್ಯ ವಾಮದೇವೋ ಗೌತಮಋಷಿಃ । ಬೃಹಸ್ಪತಿರ್ದೇವತಾಃ । ತ್ರಿಷ್ಟುಪ್ ಛಂದಃ । ಅಂತಃಪಟ ನಿಬರ್ಹರಣಾರ್ಥೇ ವಿನಿಯೋಗಃ ॥**

---

**ತಾನಿ ಸರ್ವಾಣಿ** = ಆ ಸಮಸ್ತ ಪಾಪಗಳನ್ನು, **ಕ್ಷಮಸ್ವ** = ಪೂಜೆ ಮಾಡಲು ಯೋಗ್ಯವಾಗುವಂತೆ ಕ್ಷಮಿಸು, **ಮಾಧವ** = ಲಕ್ಷ್ಮೀಪತಿಯೇ, **ವೈಷ್ಣವದ್ವೇಷಹೇತೂನ್** = ವಿಷ್ಣುಭಕ್ತರನ್ನು ದ್ವೇಷಿಸಲು ಕಾರಣವಾದ, **ಮೇ** = ನನ್ನ, **ಕಾಯಿಕಾನ್** = ದೈಹಿಕವಾದ, **ವಾಚಿಕಾನ್** = ವಾಚನಿಕವಾದ, **ಮಾನಸಾನ್** = ಮಾನಸಿಕವಾದ, **ದ್ವೇಷಾನ್** = ದ್ವೇಷಗಳನ್ನು, **ಸರ್ವದಾ** = ಯಾವಾಗಲೂ, **ಭಸ್ಮಸಾತ್ ಕುರು** = ಸುಟ್ಟು ಹಾಕು.

9. **ಮಾನುಷಗಂಧ ನಿವಾರಣಮ್ ಅರ್ಥ :**

ದೇಹದ ವಾಸನೆ ಸ್ನಾನ ಮಾಡಿದರೂ ಹೋಗಿರುವುದಿಲ್ಲ. ಈ ದುರ್ವಾಸನೆಯಿಂದ ಪೂಜೆಯನ್ನು ಮಾಡಲು ಬರುವುದಿಲ್ಲ. ಅದಕ್ಕಾಗಿ ಈ ಮಂತ್ರದಿಂದ ದುರ್ಗಂಧ ನಿವಾರಣೆಯಾಗುತ್ತದೆ.

**ಅದ್ರಿಬರ್ಹಾಃ** = ಚೆನ್ನಾಗಿ ಬೆಳೆದ ಕೂದಲುಗಳುಳ್ಳ, **ಅದಿತಿ –ಮಾತಾ** = ತಾಯಿಯಾದ ಅದಿತಿದೇವಿಯು, **ಮಧುಮತ್** = ಮಧುರವಾದ, **ಪೀಯೂಷಂ** = ಅಮೃತದಂತೆ ಇರುವ, **ಪಯಃ** = ಹಾಲನ್ನು, **ಯೇಭ್ಯೋ** = ಯಾವ ದೇವತೆಗಳಿಗೆ, **ಪಿನ್ವತೇ** = ಕುಡಿಸುವಳೋ, **ವೃಷಭರಾನ್** = ಇಷ್ಟಾರ್ಥ ನೀಡುವ, **ಉಕ್ಥಶುಷ್ಮಾನ್** = ಬಲಿಷ್ಠರಾದ, **ಸ್ವಪ್ನಸಃ** = ತಮಗೆ ನಿದ್ರೆ ಇಲ್ಲದೆ ಇತರರಿಗೆ ನಿದ್ರೆ

ಓಂ ಏವಾ ಪಿತ್ರೇ ವಿಶ್ವದೇವಾಯ ವೃಷ್ಣೇ ಯಜ್ಞೈರ್ವಿಧೇಮ

ನಮಸಾ ಹವಿರ್ಭಿಃ । ಬೃಹಸ್ಪತೇ ಸುಪ್ರಜಾ ವೀರವಂತೋ

ವಯಂ ಸ್ಯಾಮ ಪತಯೋ ರಯೀಣಾಮ್ ॥ – ಋ–4/50/6

ಮಾನುಷೋ ಗಂಧ ಆಯಾತಿ ದೇವ ತತ್ ಕ್ಷಮ್ಯತಾಂ ಪ್ರಭೋ[4]॥

---

ನೀಡುವ, **ಆದಿತ್ಯಾನ್** = ಅದಿತಿ ಪುತ್ರರಾದ ದೇವತೆಗಳನ್ನು, **ಸ್ವಸ್ತಯೇ** = ಮಂಗಳಕ್ಕಾಗಿ, **ಅನುಮದೇ** = ಸ್ತುತಿಸುತ್ತೇನೆ. (ಈ ಮಂತ್ರದಿಂದ ಶರೀರದ ದುರ್ಗಂಧವು ನೀಗುತ್ತದೆ).

**ವಿಶ್ವದೇವಾಯ** = ಸಮಸ್ತ ಪ್ರಪಂಚಕ್ಕೂ ದೇವನೆನಿಸಿದ, **ಪಿತ್ರೇ** = ತಂದೆ ಎನಿಸಿದ, **ವೃಷ್ಣೇ** = ಇಷ್ಟಾರ್ಥ ಸೇಚಕನಾದ, ಭಗವಂತನಿಗೆ, **ಹವಿರ್ಭಿಃ** = ಹವಿಸ್ಸಿನಿಂದ, **ಯಜ್ಞೈಃ** = ಯಜ್ಞಗಳಿಂದ, **ನಮಸಾ** = ನಮಸ್ಕಾರಗಳಿಂದಲೂ, **ವಿಧೇಮ ಏವ** = ಸೇವೆಯನ್ನು ಮಾಡುತ್ತಲೇ ಇರುತ್ತೇವೆ, **ಬೃಹಸ್ಪತೇ** = ಸಮಸ್ತ ಗುಣಪೂರ್ಣಳಾದ ಲಕ್ಷ್ಮಿಯ ಪತಿಯೇ, **ವಯಂ** = ನಾವು, **ಸುಪ್ರಜಾಃ** = ಒಳ್ಳೆಯ ಸಂತಾನವುಳ್ಳವರಾಗಿಯೂ, **ವೀರವಂತಃ** = ದೈಹಿಕ ಶಕ್ತಿಯುಳ್ಳವರಾಗಿ, **ರಯೀಣಾಂ ಪತಯಃ** = ಸಮಸ್ತ ಸಂಪತ್ತುಗಳಿಗೂ ಅಧಿಪತಿಗಳಾಗಿ, **ಸ್ಯಾಮ** = ಆಗುವಂತೆ ಅನುಗ್ರಹಿಸಿರಿ.

---

4. **ಅಪ್ಸೈವೇತ್ಯಾದಿ ಯೇಭ್ಯಶ್ಚ ಏವಾಪಿತ್ರಋಚೌ ಪಠೇತ್ ।**
**ನಿವಾರ್ಯಮಾನುಷಂ ಗಂಧಮೇಭಿಃ ಮಂತ್ರೈಸ್ತು ಪೂಜಕಃ** ॥ –ಪ.ಮಾ–14

## 10. ಬ್ರಹ್ಮಪಾರಸ್ತೋತ್ರಮ್ : (ಬ್ರಹ್ಮಹತ್ಯೆ ಪರಿಹರಿಸಿಕೊಳ್ಳಲು)[5]

**ಅಸ್ಯ ಶ್ರೀ ಬ್ರಹ್ಮಪಾರಸ್ತೋತ್ರಸ್ಯ ಕಂಡುಋಷಿಃ । ವಿಶ್ವೇದೇವಾಃ ದೇವತಾಃ । ತ್ರಿಷ್ಟುಪ್ ಛಂದಃ । ಪೂಜಾಧಿಕಾರ ಸಿದ್ಧ್ಯರ್ಥೇ ಜಪೇ ವಿನಿಯೋಗಃ ॥**

**ಪ್ರಚೇತಸಃ ಊಚುಃ –**

**ಬ್ರಹ್ಮಪಾರಂ ಮುನೇ ಶ್ರೋತುಂ ಇಚ್ಛಾಮಃ ಪರಮಂ ಸ್ತವಮ್ ।**
**ಜಪತಾ ಕಂಡುನಾ ದೇವೋ ಯೇನಾರಾಧ್ಯತ ಕೇಶವಃ ॥ 1 ॥**

**ಸೋಮ ಉವಾಚ –**

**ಪಾರಂ ಪರಂ ವಿಷ್ಣುರನಂತಪಾರಃ ಪರಃ ಪರಾಣಾಮಪಿ ಪಾರಪಾರಃ ।**
**ಸ ಬ್ರಹ್ಮಪಾರಃ ಪರಪಾರಭೂತಃ ಪರಃ ಪರೇಭ್ಯಃ ಪರಮಾರ್ಥರೂಪಿ ॥ 2 ॥**

---

10. ಬ್ರಹ್ಮಪಾರಸ್ತೋತ್ರದ ಅರ್ಥ :
**ಶ್ಲೋಕ 1** : ಪ್ರಚೇತಸರು ಚಂದ್ರನನ್ನು ಹೀಗೆ ಪ್ರಶ್ನಿಸಿದರು, **ಹೇ ಮುನೇ** = ಮನನಶೀಲನಾದ ಚಂದ್ರನೇ, **ಯೇನ** = ಯಾವ, **ಕಂಡುನಾ** = ಕಂಡು ಋಷಿಯಿಂದ, **ಪರಮಂ ಸ್ತವಂ** = ಪರಮಪುಣ್ಯಕರವಾದ ಸ್ತೋತ್ರವನ್ನು, **ಜಪತಾ** = ಜಪಿಸಿದ್ದರಿಂದ, **ದೇವಃಕೇಶವಃ** = ಕ್ರೀಡಾದಿ ವಿಶಿಷ್ಟನಾದ ದೇವನು, **ಆರಾಧ್ಯತ** = ಆರಾಧಿಸಲ್ಪಟ್ಟನೋ, ಅಂತಹ, **ಬ್ರಹ್ಮಪಾರಂಸ್ತವಂ** = ಬ್ರಹ್ಮಪಾರ ಸ್ತೋತ್ರವನ್ನು, **ಶ್ರೋತುಂ** = ಕೇಳಲು, **ಇಚ್ಛಾಮಃ** = ಇಚ್ಛಿಸುವೆವು.
**ಸೋಮ ಉವಾಚ ಅರ್ಥ :**
**ಶ್ಲೋಕ 2**: ಸೋಮನು ಹೇಳಿದನು – **ಸಃ ವಿಷ್ಣುಃ** = ಆ ವ್ಯಾಪ್ತನಾದ ಭಗವಂತನು, **ಪಾರಂ** = ಸರ್ವತ್ರ ವ್ಯಾಪ್ತನಾದವನು ('ಪೃ' ಪಾಲನ

---

5. ಇದು ದೇವರ ಹಾಗೂ ಪೂಜಕನ ಮಧ್ಯೆ ಅಂತರಪಟವನ್ನು ಕಲ್ಪಿಸಿಕೊಂಡು ಅದನ್ನು ಸರಿಸುವಾಗ ಈ ಮಂತ್ರವನ್ನು ಹೇಳಬೇಕೆಂದು ಗ್ರಂಥಗಳಲ್ಲಿವೆ. ಇದಕ್ಕೆ ಪದ್ಮಮಾಲಾದಲ್ಲಿ –
**ಕಲ್ಪಯಿತ್ವಾ ಜವನಿಕಾಂ ದೇವಮಾತ್ಮಾನಮಂತರಾ ।**
**ಆರುಹ್ಯ ವೇದಿಕಾಂ ಪಶ್ಚಾತ್ ಬ್ರಹ್ಮಪಾರಸ್ತವಂ ಪಠೇತ್ ॥**
ನಮ್ಮಲ್ಲಿರುವ ಪಾಪಪುರುಷ ಅಳಿಯುವವರೆಗೂ ಪೂಜಾಧಿಕಾರ ಸಿದ್ಧಿಸುವುದಿಲ್ಲ. ಬ್ರಹ್ಮಪಾರಸ್ತೋತ್ರದಿಂದ ಅವುಗಳು ನಾಶ ಹೊಂದಿ ಪೂಜೆಗೆ ಯೋಗ್ಯತೆ ಸಿದ್ಧಿಸುತ್ತದೆ.

**ಸ ಕಾರಣಂ ಕಾರಣತಸ್ತತೋಽಪಿ ತಸ್ಯಾಪಿ ಹೇತುಃ ಪರಹೇತುಹೇತುಃ।**
**ಕಾರ್ಯೇಷು ಚೈವಂ ಸ ಹಿ ಕರ್ಮಕರ್ತೃರೂಪೈರಶೇಷೈರವತೀಹ**
**ಸರ್ವಂ ॥ 3 ॥**

**ಬ್ರಹ್ಮಪ್ರಭುರ್ಬ್ರಹ್ಮ ಸ ಸರ್ವಭೂತೋ ಬ್ರಹ್ಮ ಪ್ರಜಾನಾಂ**
**ಪತಿರಚ್ಯುತೋಽಸೌ।**
**ಬ್ರಹ್ಮಾವ್ಯಯಂ ನಿತ್ಯಮಜಂ ಸ ವಿಷ್ಣುಃ ಅಪಕ್ಷಯಾದ್ಯೈಃ ಅಖಿಲೈಃ**
**ಅಸಂಗೀ ॥ 4 ॥**

---

ಪೂರಣಯೋಃ ಧಾತು) **ಪರಂ** = ಲೋಕವಿಲಕ್ಷಣನು, **ಅನಂತಪಾರಃ** = ಅನಂತಬ್ರಹ್ಮಾಂಡ ಪಾಲಕನು, **ಪರೇಭ್ಯಃ** = ಉತ್ತಮರಾದ ರಮಾ ಬ್ರಹ್ಮಾದಿಗಳಿಗಿಂತ, **ಪರಃ** = ಉತ್ತಮನು, **ಪರಮಾರ್ಥರೂಪೀ** = ಯಥಾರ್ಥವಾದ ಅವತಾರ ರೂಪವುಳ್ಳವನು, **ಬ್ರಹ್ಮಪಾರಃ** = ವೇದಗಳಲ್ಲಿ ಪ್ರತಿಪಾದ್ಯನು, **ಪರಪಾರಭೂತಃ** = ಉತ್ತಮರಾದ ಬ್ರಹ್ಮಾದಿಗಳಿಗೂ ಸಂಸಾರ–ತಾರಕನು, **ಪರಃ** = ರಮಾದಿಗಳಿಗಿಂತಲೂ ಸರ್ವೋತ್ತಮನು, **ಪರಾಣಾಮಪಿ** = ಶತ್ರುಗಳಿಗೂ ಕೂಡ, ಪಾರಪಾರಃ = ಅತಿ ದೂರದಲ್ಲಿರುವವನು

**ಶ್ಲೋಕ 3 :**

**ಸಃ** = ನಾರಾಯಣನು, **ಕಾರಣತಃ** = ಜಗತ್ತಿಗೆ ಕಾರಣಗಳಾದ ಪಂಚಭೂತ, ತನ್ಮಾತ್ರೆಗಳಿಗೂ, **ಕಾರಣಃ** = ಕಾರಣನಾದವನು, **ತಸ್ಯಾಪಿ** = ಈ ಪ್ರತ್ಯಕ್ಷ ಕಾಣುವ ಜಗತ್ತಿಗೂ, **ಹೇತುಃ** = ಸೃಷ್ಟ್ಯಾದಿಗಳಿಗೆ ಮುಖ್ಯ ಕಾರಣನು, **ಪರಹೇತುಃ** = ಜಗತ್ತಿಗೆ ಕಾರಣರಾದ ರಮಾಬ್ರಹ್ಮಾದಿಗಳಿಗೂ, **ಹೇತುಃ** = ಜ್ಞಾನಶಕ್ತಿಪ್ರದನು, **ಕಾರ್ಯೇಷು ಚ** = ಜಗತ್ತಿನ ಸೃಷ್ಟ್ಯಾದಿ ಸಕಲ ಕಾರ್ಯಗಳಲ್ಲೂ, ಏವಂ = ಹಿಂದೆ ಹೇಳಿದಂತೆ ಮುಖ್ಯಕಾರಣನು, **ಹಿ** = ತದಧೀನತ್ವಾತ್ ಅರ್ಥವತ್ ಎಂಬ ಸೂತ್ರದಲ್ಲಿ ಪ್ರಸಿದ್ಧವಾಗಿದೆ, **ಸಃ** = ಭಗವಂತನು, **ಕರ್ಮಕರ್ತೃರೂಪೈಃ** = ಕರ್ತೃ – ಕರ್ಮ ಕರಣ ರೂಪಗಳಿಂದ, **ಅಶೇಷೈಃ** = ತನ್ನ ಎಲ್ಲಾ ರೂಪಗಳಿಂದ, **ಸರ್ವಂ** = ಸಮಸ್ತ ಪ್ರಪಂಚವನ್ನು, **ಇಹ** = ಲೋಕದಲ್ಲಿ, **ಅವತಿ** = ರಕ್ಷಿಸುತ್ತಾನೆ.

**ಶ್ಲೋಕ 4 :**

**ಅಸೌ** = ಇಚ್ಛಾರೂಪಿಯಾದ ವಿಷ್ಣುವು, **ಬ್ರಹ್ಮಪ್ರಭುಃ ಬ್ರಹ್ಮ** = ವೇದಾಭಿಮಾನಿಯಾದ ಲಕ್ಷ್ಮೀದೇವಿಗೂ, **ಪ್ರಭುಃ** = ಪತಿಯು, **ಬ್ರಹ್ಮ** = ಗುಣಪೂರ್ಣನು, **ಸರ್ವಭೂತಃ** = ಸರ್ವತ್ರ ವ್ಯಾಪ್ತನು, **ಪ್ರಜಾನಾಂಪತಿಃ** = ಪ್ರಜೆಗಳಿಗೂ ಸ್ವಾಮಿಯು, **ಬ್ರಹ್ಮ** = ಅನಂತ ಕಲ್ಯಾಣಗುಣ ಪರಿಪೂರ್ಣನು, **ಅಸೌ ಅಚ್ಯುತಃ** = ಆದ್ದರಿಂದಲೇ ಸರ್ವಥಾ ನಾಶರಹಿತನು, **ಬ್ರಹ್ಮ** =

**ಬ್ರಹ್ಮಾಕ್ಷರಮಜಂ ನಿತ್ಯಂ ಯಥಾऽಸೌ ಪುರುಷೋತ್ತಮಃ ।**
**ತಥಾ ರಾಗಾದಯೋ ದೋಷಾಃ ಪ್ರಯಾಂತು ಪ್ರಶಮಂ ಮಮ ॥ 5 ॥**

**ಏತದ್ವೈ ಬ್ರಹ್ಮಪಾರಾಖ್ಯಂ ಸಂಸ್ತವಂ ಪರಮಂ ಜಪನ್ ।**
**ಅವಾಪ ಪರಮಾಂ ಸಿದ್ಧಿಂ ಸ ಸಮಾರಾಧ್ಯ ಕೇಶವಮ್ ॥ 6 ॥**

॥ ಇತಿ ಶ್ರೀ ವಿಷ್ಣುಪುರಾಣೇ ಬ್ರಹ್ಮಪಾರಸ್ತೋತ್ರಮ್ ॥

– 'ವಿಷ್ಣುಪುರಾಣೆ (ಅ1/15/54–59)

---

ಪರಬ್ರಹ್ಮನು, **ಅವ್ಯಯಂ** = ವಿಕಾರವಿಲ್ಲದವನು, **ನಿತ್ಯಂ** = ಸ್ವರೂಪನಾಶರಹಿತನು, **ಅಜಂ** = ಉತ್ಪತ್ತಿರಹಿತನು, **ಸವಿಷ್ಣುಃ** = ಇಂತಹ ವಿಷ್ಣುವು, **ಅಪಕ್ಷಯಾದ್ಯೈಃ** = ದೇಹನಾಶ, ಅನಿತ್ಯತ್ವಂ, ದುಃಖಪ್ರಾಪ್ತಿ ಮೊದಲಾದ, **ಅಖಿಲೈಃ** = ಎಲ್ಲ ದೋಷಗಳಿಂದಲೂ, **ಅಸಂಗೀ** = ಸಂಗರಹಿತನು

**ಶ್ಲೋಕ 5 :**

**ಪುರುಷೋತ್ತಮಃ** = ಕ್ಷರಾಕ್ಷರಗಳಿಂದ ಉತ್ತಮನಾದ, **ಅಸೌ** = ಈ ಬ್ರಹ್ಮನು, **ಯಥಾ** = ಹೇಗೆ, **ಬ್ರಹ್ಮ** = ಗುಣಪೂರ್ಣನೋ, **ಅಕ್ಷರಂ** = ನಾಶರಹಿತನೋ, **ಅಜಂ** = ಜನನರಹಿತನೋ, **ನಿತ್ಯಂ** = ಶಶ್ವದೇಕ ಪ್ರಕಾರನೋ, **ತಥಾ** = ಹಾಗೆಯೇ, **ಮಮ** = ನನ್ನ, **ರಾಗಾದಯಃ** = ಕಾಮಕ್ರೋಧಾದಿ ಪಾಪಗಳು, **ಪ್ರಶಮಂಯಾಂತು** = ನಾಶವಾಗಲಿ

**ಶ್ಲೋಕ 6 :**

**ಸೋಮನು** ಪ್ರಚೇತಸರಿಗೆ ಹೀಗೆ ಹೇಳಿದನು, **ಯಃ** = ಯಾವ ಕಂಡುವಿನ ಕಥೆಯನ್ನು ನಿಮಗೆ ಬಿತ್ತರಿಸಿದೆನೋ, **ಸಃ** = ಆ ಕಂಡು ಋಷಿಯು, **ಏತತ್** = ಈ, **ಪರಮಂ** = ಅತ್ಯುತ್ಕೃಷ್ಟವಾದ, **ಬ್ರಹ್ಮಪಾರಾಖ್ಯಂ ಸಂಸ್ತವಂ** = ಬ್ರಹ್ಮನ ಪಾರಮ್ಯ ಸಾರುವ, ಸ್ತೋತ್ರವನ್ನು, **ಜಪನ್** = ಜಪಿಸುತ್ತಾ, **ಕೇಶವಂ** = ಶ್ರೀಹರಿಯನ್ನು, **ಸಮಾರಾಧ್ಯ** = ಸಂತೋಷಗೊಳಿಸಿ, **ಪರಮಾಂ ಸಿದ್ಧಿಂ** = ಉತ್ತಮ ಸಿದ್ಧಿಯನ್ನು, **ಅವಾಪ** = ಹೊಂದಿದನು.

**ಇಮಂ ಸ್ತವಂ, ಯಃ ನಿತ್ಯಶಃ, ಪಠತಿ** = ಇದನ್ನು ಯಾರು ನಿತ್ಯವೂ ಪಠಿಸುವರೋ, **ಶೃಣುಯಾದ್ ವಾ** = ಕೇಳುವರೂ, **ಸಃ ಅಖಿಲೈಃ** = ಎಲ್ಲಾ ರೀತಿಯಾದ, **ಕಾಮದೋಷೈಃ** = ಕಾಮಕ್ರೋಧಾದಿ ದೋಷಗಳಿಂದ, **ಮುಕ್ತಃ** = ಬಿಡಲ್ಪಟ್ಟು, **ವಾಂಛಿತಃ** = ಸಮಸ್ತ ಇಷ್ಟಾರ್ಥಗಳನ್ನು, **ಪ್ರಾಪ್ನೋತಿ** = ಹೊಂದವವನು (ರು).

**11. ಘಂಟನಾದ :** (ಘಂಟೆಯನ್ನು ಬಾರಿಸುವುದು)

**ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಂ।**
**ಕುರು (ಕುರ್ವೇ) ಘಂಟಾರವಂ ತತ್ರ ದೇವತಾಽಽಹ್ವಾನಲಾಂಛನಂ ॥**

**ಅಜ್ಞಾನಾತ್ ಜ್ಞಾನತೋ ವಾಽಪಿ ಕಾಂಸ್ಯಘಂಟಾಂ ನ ವಾದಯೇತ್।**
**ರಾಕ್ಷಸಾನಾಂ ಪಿಶಾಚಾನಾಂ ತದ್ದೇಶೇ ವಸತಿರ್ಭವೇತ್ ॥**

**ತಸ್ಮಾತ್ ಸರ್ವಪ್ರಯತ್ನೇನ ಘಂಟಾಮಾವಾದಯೇತ್ ತತಃ ॥**

**ಘಂಟಾಭಿಮಾನಿ ದೇವತಾ ಧ್ಯಾನ :**

**ಪಾದೇ–ಅರ್ಕಾಯ ನಮಃ। ದಂಡೇ–ವಾಸುಕಯೇ ನಮಃ। ಸ್ವರೇ–ಸರಸ್ವತ್ಯೈ ನಮಃ। ನಾದೇ–ಬ್ರಹ್ಮಣೇ ನಮಃ। ಜಿಹ್ವಾಯಾಂ–ವಾಯವೇ ನಮಃ।**

---

11. **ಘಂಟನಾದ ಅರ್ಥ : ದೇವಾನಾಂ** = ದೇವತೆಗಳ, **ಆಗಮಾರ್ಥಂ** = ಆಗಮನಕ್ಕಾಗಿ, **ರಕ್ಷಸಾಂ** = ರಾಕ್ಷಸರ, **ಗಮನಾರ್ಥಂ** = ನಿರ್ಗಮನಕ್ಕಾಗಿ, **ತತ್ರ** = ದೇವತಾಪೂಜಾ ಸ್ಥಳದಲ್ಲಿ, **ದೇವತಾಹ್ವಾನ ಲಾಂಛನಂ** = ದೇವತೆಗಳನ್ನು ಕರೆಯುವುದಕ್ಕೆ ಗುರುತೆನಿಸಿದ, **ಘಂಟಾರವಂ** = ಘಂಟನಾದವನ್ನು, **ಕುರ್ವೇ** = ಮಾಡುತ್ತೇನೆ (ಕುರು = ಮಾಡು).

**ಅಜ್ಞಾನಾತ್ ಜ್ಞಾನತೋ ವಾಽಪಿ** = ತಿಳಿದೆ ಆಗಲಿ, ತಿಳಿಯದೆ ಆಗಲಿ, **ಕಾಂಸ್ಯಘಂಟಾಂ** = ಕಾಂಚಿನ ಘಂಟೆಯನ್ನು, **ನ ವಾದಯೇತ್**ಯದಿ = ಬಾರಿಸದಿದ್ದ ಪಕ್ಷದಲ್ಲಿ, **ರಾಕ್ಷಸಾನಾಂ, ಪಿಶಾಚಾನಾಂ** = ರಾಕ್ಷಸರು, ಪಿಶಾಚಿಗಳು, **ತದ್ದೇಶೇ** = ಆ ಪೂಜಾಗೃಹದಲ್ಲಿ, **ರತಿಃರ್ಭವೇತ್** = ವಾಸ ಮಾಡುವಂತೆ ಆಗುತ್ತದೆ, **ತಸ್ಮಾತ್** = ಇವರನ್ನು ಓಡಿಸಿ, ದೇವತೆಗಳನ್ನು ಆಹ್ವಾನ ಮಾಡುವುದಕ್ಕೋಸ್ಕರ, **ಘಂಟಾ** = ಘಂಟೆಯನ್ನು, **ಆಚಾಲ್ಯ** = ಜೋರಾಗಿ ಘಂಟೆಯನ್ನು ಅಲ್ಲಾಡಿಸುತ್ತಾ, **ವಾದಯೇತ್** = ಬಾರಿಸಬೇಕು.

**ಘಂಟಾಭಿಮಾನಿ ದೇವತಾ ಧ್ಯಾನ ಅರ್ಥ : ಪಾದೇ** = ಘಂಟೆಯ ಬುಡದಲ್ಲಿ, **ಅಕಾರ್ಯನಮಃ** = ಸನ್ನಿಹಿತನಾಗಿರುವ ಸೂರ್ಯನಿಗೆ ನಮಸ್ಕಾರವು, **ದಂಡೇ** = ಪ್ರಾಣದೇವರು ಇರುವ ದಂಡಭಾಗದಲ್ಲಿ, **ವಾಸುಕಯೇ ನಮಃ** = ಸನ್ನಿಹಿತನಾಗಿರುವ ವಾಸುಕಿಯೆಂಬ ಸರ್ಪಕ್ಕೆ ನಮನವು, **ನಾದೇಸ್ವರೇ** = ಘಂಟೆಯ ನಾದ ಹಾಗೂ ಸ್ವರದಲ್ಲಿರುವ, **ಸರಸ್ವತ್ಯೈ ಬ್ರಹ್ಮಣೇ ನಮಃ** = ಸರಸ್ವತಿ ಬ್ರಹ್ಮರಿಗೆ ನಮಸ್ಕಾರವು, **ಜಿಹ್ವಾಯಾಂ** = ಘಂಟೆಯ ನಾಲಿಗೆಯಲ್ಲಿರುವ, **ವಾಯವೇ** = ವಾಯುದೇವನಿಗೆ, **ನಮಃ** = ನಮಸ್ಕಾರವು.

## 12. ಭಗವಂತನನ್ನು ಪೂಜೆಗಾಗಿ ಎಬ್ಬಿಸುವ ಮಂತ್ರ :

**ಉತ್ತಿಷ್ಠ ಬ್ರಹ್ಮಣಸ್ಪತೇ ದೇವಯಂತಸ್ತ್ವೇಮಹೇ ।**

**ಉಪಪ್ರಯಂತು ಮರುತಃ ಸುದಾನವ ಇಂದ್ರ ಪ್ರಾಶೂರ್ಭವಾ ಸಚಾ ॥** – ಋ–1/40/1

**ಹಿರಣ್ಯವರ್ಣಾಂ ಹರಿಣೀಂ ಸುವರ್ಣರಜತಸ್ರಜಾಂ । ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮ ಆವಹ ॥** – ಶ್ರೀಸೂಕ್ತ

---

12. **ಭಗವಂತನನನ್ನು ಪೂಜೆಗಾಗಿ ಎಬ್ಬಿಸುವ ಮಂತ್ರಾರ್ಥದ ಅರ್ಥ :**
**ಹೇ ಬ್ರಹ್ಮಣಸ್ಪತೇ** = ವೇದಗಳಿಗೆ ಒಡೆಯನಾದ ನಾರಾಯಣನೇ, **ಉತ್ತಿಷ್ಠ** = ಏಳು, **ದೇವಯಂತಃ** = ನಿಮ್ಮನ್ನು ಪೂಜಿಸುತ್ತಾ, **ತ್ವಾ** = ನಿನ್ನನ್ನು, **ಈ ಮಹೇ** = ಶರಣು ಹೊಂದುವೆವು, **ಸುದಾನವಃ** = ಮಹಾದಾನಿಗಳಾದ, **ಮರುತಃ** = ಮರುತ್ತುಗಳು, **ಉಪಪ್ರಯಂತು** = ನಮ್ಮ ಸಮೀಪ ಬರಲಿ, **ಇಂದ್ರ** = ಪರಮೈಶ್ವರ್ಯಶಾಲಿಯೇ (ನೀನೂ ಕೂಡ) **ಸಚಾ** = ಸುಖವಾಗಿ, **ಪ್ರಾಶೂಃ** = ನಾವು ಮಾಡುವ ಯಜ್ಞಗಳಲ್ಲಿ ಭೋಜನ ಮಾಡುವವನಾಗಿ, **ಭವ** = ಆಗು,
**ಜಾತವೇದಃ** = ಸೃಷ್ಟಿಯಾದ ಸಮಸ್ತವನ್ನು ತಿಳಿದಿರುವ, ಭಗವಂತನೇ, **ಹಿರಣ್ಯವರ್ಣಾಂ** = ಬಂಗಾರದಂತೆ ಬಣ್ಣವುಳ್ಳ, **ಹರಿಣೀಂ** = ಜಿಂಕೆಯಂತೆ ಕಣ್ಣಿರುವ, **ಸುವರ್ಣರತಜಸ್ರಜಾಂ** = ಸುವರ್ಣದ ಹಾಗೂ ಬೆಳ್ಳಿಯ ಪುಷ್ಪಗಳ ಹಾರಗಳನ್ನು ಧರಿಸಿರುವ, **ಚಂದ್ರಾಂ** = ಆಹ್ಲಾದಕರಳಾದ, **ಹಿರಣ್ಮಯೀಂ** = ಸುಖಸ್ವರೂಪಳಾದ, **ಲಕ್ಷ್ಮೀಂ** = ಭಾಗ್ಯದೇವತೆಯಾದ ಶ್ರೀದೇವಿಯನ್ನು, **ಮ** = ನನ್ನ ಸಮೀಪಕ್ಕೆ, **ಆವಹ** = ಬರುವಂತೆ ಅನುಗ್ರಹಿಸು.**

---

** 1. **ಶ್ರೀಃ ಧೃತ್ವಾ ಹರಿಣೀರೂಪಂ ಅರಣ್ಯೇ ಸಂಚಚಾರ ಹ ।**
ಲಕ್ಷ್ಮೀದೇವಿಯು ಜಿಂಕೆಯ ರೂಪಧರಿಸಿ ಅರಣ್ಯದಲ್ಲಿ ಸಂಚರಿಸಿದ್ದಕ್ಕಾಗಿ ಹರಿಣೀ ಎಂದು ಹೆಸರು ಬಂತು.

2. **ವೇದಾಃ ತ್ವದರ್ಥಂ ಜಾತತ್ವಾದ್ ಜಾತವೇದಾ ತತೋ ಹ್ಯಸಿ ॥**
ವೇದಗಳು ಭಗವಂತನನ್ನು ಪ್ರತಿಪಾದಿಸುತ್ತಾ ಭಗವಂತನಿಗಾಗಿಯೇ ಇದ್ದದ್ದರಿಂದ ಜಾತವೇದ ಎಂದು ಹೆಸರು.

## 13. ಸಂಪುಟೋದ್ಘಾಟನಮ್ :

(ದೇವರ ಸಂಪುಟವನ್ನು ತೆಗೆಯುವುದು)[6]

**ಓಂ ಸಕ್ತುಮಿವ ತಿತಉನಾ ಪುನಂತೋ ಯತ್ರ ಧೀರಾ ಮನಸಾ ವಾಚಮಕ್ರತ । ಅತ್ರಾ ಸಖಾಯಃ ಸಖ್ಯಾನಿ ಜಾನತೇ ಭದ್ರೈಷಾಂ ಲಕ್ಷ್ಮೀಃ ನಿಹಿತಾಧಿ ವಾಚಿ ॥** – ಋ–10–71–3

---

13. **ಸಂಪುಟೋದ್ಘಾಟನದ ಅರ್ಥ : ಧೀರಾಃ** = ಬುದ್ಧಿಯಿಂದ ರಮಿಸುವ ಜ್ಞಾನಿಗಳು, **ಮನಸಾ** = ಜ್ಞಾನದಿಂದ (ಮನು ಅವಭೋದನೇ), **ವಾಚಂ** = ಸಮಸ್ತ ವೇದ ವಾಙ್ಮಯಗಳನ್ನು, **ತಿತಉನಾ** = ಜರಡಿಯಿಂದ, **ಸಕ್ತುಂಇವ** = ಹಿಟ್ಟನ್ನ ಧಾನ್ಯವನ್ನು ಶೋಧಿಸುವಂತೆ, **ಪುನಂತಃ** = ಸಮನ್ವಯದಿಂದ ಶುದ್ಧೀಕರಿಸುತ್ತಾ, **ಯತ್ರ** = ಯಾವ ಪರಮಾತ್ಮನಲ್ಲಿಯೇ, **ಅಕ್ರತ** = ಸಮನ್ವಯ ಮಾಡಿದರೋ, **ಅತ್ರ** = ಅಲ್ಲಿಯೇ, **ಸಖಾಯಃ** = ಸಾರರೂಪ ಹಾಗೂ ಜ್ಞಾನರೂಪಳಾದ ಭಗವಂತನ ರೂಪಗಳು, **ಸಖ್ಯಾನಿ** = ಸುಖಪ್ರದಗಳಾಗಿ ಪ್ರಕಟವಾಗುತ್ತವೆ. **ಏಷಾಂ** = ಈ ರೂಪಗಳ, **ಅಧಿವಾಚಿ**= ವಾಚ್ಯತ್ವ ವಿಷಯದಲ್ಲಿ, **ಭದ್ರಾ** = ಮಂಗಳಕರವಾದ, **ಲಕ್ಷ್ಮೀಃ** = ಲಕ್ಷ್ಮೀದೇವಿಯು, **ನಿಹಿತಾ**= ಪ್ರಸನ್ನಳಾಗಿರುತ್ತಾಳೆ. (ಈ ಮಂತ್ರದಿಂದ ಸಂಪುಟ ತೆಗೆದು "ಹಿರಣ್ಯವರ್ಣಾಂ" ಮಂತ್ರದಿಂದ ದೇವರನ್ನು ನಿರೀಕ್ಷಿಸುವುದು).

---

6. ಸಕ್ತುಮಿವ ಎಂಬ ಲಕ್ಷ್ಮೀದೇವತಾಕವಾದ ಮಂತ್ರದಿಂದ ಸಂಪುಟ ತೆಗೆದು, ಸಾಲಿಗ್ರಾಮಾದಿಗಳನ್ನು ತಟ್ಟೆಯಲ್ಲಿಡಬೇಕು. ವಿಷ್ಣು ಗಾಯತ್ರೀಯಿಂದ ಸಂಪುಟ ತೆಗೆಯಬೇಕು. *ಲಕ್ಷ್ಮೀ ಸೂಕ್ತದಿಂದ ನಿರ್ಮಾಲ್ಯವನ್ನು ವಿಸರ್ಜಿಸಿ, ಅಭಿಷೇಕ ಮಾಡುವ ತಟ್ಟೆಯಲ್ಲಿ ಸಾಲಿಗ್ರಾಮಗಳನ್ನು ಇಟ್ಟು, ಪೀಠವನ್ನು ಶುದ್ಧೀಕರಿಸಿ, ಪ್ರತಿಮೆಗಳನ್ನು ಅಲ್ಲಿಡಬೇಕೆಂದು ಸ್ಮೃತಿ ಮುಕ್ತಾವಲಿಯಲ್ಲಿದೆ.

---

* ಜ್ಞಾನೈಶ್ವರ್ಯ ಸುಖಾರೋಗ್ಯ ಧನಧಾನ್ಯ ಜಯಾದಿಕಂ ।
ಲಕ್ಷ್ಮ ಯಸ್ಯಾಃ ಸಮುದ್ದಿಷ್ಟಂ ಸಾ ಲಕ್ಷ್ಮೀತಿ ನಿಗದ್ಯತೇ ॥
ಜ್ಞಾನ, ಐಶ್ವರ್ಯ, ಸುಖ, ಆರೋಗ್ಯಾದಿಗಳು ಲಕ್ಷ್ಮೀಯ ಚಿಹ್ನೆಯಂತಿರು–ವುದರಿಂದ ಲಕ್ಷ್ಮೀ ಎನಿಸಿರುವಳು.

## 14. ಮಂಟಪಧ್ಯಾನಮ್ :[7]

**ಉತ್ತಪ್ತೋಜ್ವಲ ಕಾಂಚನೇನ ರಚಿತಂ ತುಂಗಾಂಗರಂಗಸ್ಥಲಂ।**
**ಶುದ್ಧ ಸ್ಪಾಟಿಕ ಭಿತ್ತಿಕಾ ವಿಲಸಿತೈಃ ಸ್ತಂಭೈಶ್ಚ ಹೇಮೈಃ ಶುಭೈಃ ॥ 1 ॥**

**ಮುಕ್ತಾಜಾಲ ವಿಲಂಬಿ ಮಂಟಪಯುತಂ ವಜ್ರೈಶ್ಚ ಸೋಪಾನಕೈಃ।**
**ನಾನಾರತ್ನ ವಿನಿರ್ಮಿತೈಶ್ಚ ಕಲಶೈಃ ಅತ್ಯಂತ ಶೋಭಾವಹಮ್ ॥ 2 ॥**

---

14. **ಮಂಟಪಧ್ಯಾನಮ್ ಅರ್ಥ : ಉತ್ತಪ್ತೋಜ್ವಲಂ** = ಉತ್ತಪ್ತ = ಚೆನ್ನಾಗಿ ಕಾಸಿದ್ದರಿಂದ, (ಪುಟವಿಡಿದಿದ್ದರಿಂದ), **ಉಜ್ವಲ** = ಉಜ್ವಲವಾದ, **ಕಾಂಚನೇನ** = ಸುವರ್ಣದಿಂದ, **ರಚಿತಂ** = ತಯಾರಿಸಿದ, **ತುಂಗಾಂಗ ರಂಗಸ್ಥಳಂ** = ಎತ್ತರವಾದ ಅಂಗಳಗಳು ಹಾಗೂ ರಂಗ ಸ್ಥಳವಿರಬೇಕು ಅಥವಾ ಎತ್ತರವಾದ ವೇದಿಕೆಯಲ್ಲಿ ಭಕ್ತರಿಗೆ ಇಷ್ಟಾರ್ಥ ನೀಡುತ್ತಾ ಕುಳಿತಿರುವ, **ಶುದ್ಧಸ್ಫಾಟಿಕ ಭಿತ್ತಿಕಾ ವಿಲಸಿತೈಃ** = ಸ್ವಚ್ಛವಾದ ಸ್ಫಟಿಕವಾದ ನಿರ್ಮಿತವಾದ, ಗೋಡೆಗಳಿಂದ ಶೋಭಿಸುತ್ತಿರುವ, **ಶುಭೈಃಹೇಮೈಃ** = ಶುದ್ಧವಾದ ಸುವರ್ಣಗಳಿಂದ ರಚಿತವಾದ, **ಸ್ತಂಭೈಶ್ಚ** = ಸ್ತಂಬಗಳಿಂದ ಕೂಡಿರುವ ॥ 1 ॥

**ಮುಕ್ತಾಜಲ** = ಮುತ್ತಿನ ಗೊಂಚಲುಗಳಿಂದ, **ವಿಲಂಬಿ** = ಜೋತು ಹಾಕಿರುವ, **ಮಂಟಪಯುತಂ** = ಮಂಟಪದಿಂದ ಕೂಡಿರುವ, **ವಜ್ರೈಃ** = ವಜ್ರನಿರ್ಮಿತಗಳಾದ, **ಸೋಪಾನಕೈಃ** = ಮೆಟ್ಟಿಲುಗಳುಳ್ಳ, **ನಾನಾರತ್ನ ವಿನಿರ್ಮಿತೈಶ್ಚ** = ದೇವತೆಗಳು ಧರಿಸಿರುವ ನಾನಾರತ್ನಗಳಿಂದ ರಚಿತವಾದ, **ಕಲಶೈಃ** = ಕಲಶಗಳಿಂದ, **ಶೋಭಾವಹಂ** = ಶೋಭಾಯಮಾನವಾದ ॥ 2 ॥

---

**ಸಂಪುಟೋದ್ಘಾಟನಂ ಕೃತ್ವಾ ಗಾಯತ್ರ್ಯಾ ವಿಷ್ಣುಸಂಜ್ಞಯಾ।**
**ಲಕ್ಷ್ಮೀ ಸೂಕ್ತೇನ ನಿರ್ಮಾಲ್ಯಂ ವಿಸೃಜ್ಯ, ಸ್ನಾನ ಪಾತ್ರಕೇ ॥**
**ಸಾಲಿಗ್ರಾಮಾನ್ ವಿನಿಕ್ಷಿಪ್ಯ ಪೀಠಂ ಸಂಶೋಧ್ಯ ಭಕ್ತಿತಃ।**
**ಪ್ರತಿಮಾಃ ಸ್ಥಾಪಯೇತ್ ತತಃ ॥ –ಸ್ಮೃತಿಮುಕ್ತಾವಲಿ**

(ಹಿಂದಿನ ದಿನ ದೇವರಿಗೆ ಪೂಜಿಸಿದ ಪುಷ್ಪಾದಿಗಳನ್ನು ನಿರ್ಮಾಲ್ಯವೆನ್ನುವರು. ಇದನ್ನು ಅಂಗುಷ್ಠ ಹಾಗೂ ತೋರು ಬೆರಳುಗಳಿಂದ (ಜ್ಞಾನಮುದ್ರೆ) ತೆಗೆದು, ದೇವರ ಎಡಭಾಗದಲ್ಲಿರುವ ರುದ್ರದೇವನ ಶಿರಸ್ಸಿನಲ್ಲಿ ಹಾಕುತ್ತಿರುವೆವು ಎಂಬ ಅನುಸಂಧಾನದಿಂದ ಎಡಗಡೆ ಇರುವ ತಟ್ಟೆಯಲ್ಲಿ ಹಾಕಬೇಕು.

7. ಮಂಟಪಧ್ಯಾನದಿಂದ ಭಗವಂತನ ವಿಶೇಷಾನುಗ್ರ ಪ್ರಾಪ್ತಿಯಾಗುತ್ತದೆ-ಯಾದ್ದರಿಂದ ಮಂಟಪಧ್ಯಾನ ಅವಶ್ಯವಾಗಿದೆ.

**ದ್ವಾರೈಃ ಚಾಮರ ರತ್ನರಾಜ ಖಚಿತೈಃ ಶೋಭಾವಹಂ ಮಂಟಪಂ।**
**ರತ್ನಾಗ್ರೈರಪಿ ಶಂಖ ಪದ್ಮಧವಳೈಃ ಪ್ರಭ್ರಾಜಿತಂ ಸ್ವಸ್ತಿಕೈಃ ॥ 3 ॥**

**ಮಾಣಿಕ್ಯೋಜ್ವಲದೀಪ ದೀಪ್ತಿವಿಲಸತ್ ಲಕ್ಷ್ಮೀವಿಲಾಸಾಸ್ಪದಂ।**
**ಧ್ಯಾಯೇನ್ ಮಂಟಪಮರ್ಚನೇಷು ಸಕಲೈಃ ಏವಂ ವಿಧೈಃ ಸಾಧಕೈಃ ॥ 4 ॥**

**ಸಮ್ಮಾರ್ಜನೈಃ ರಂಗವಲ್ಲೀ ಧ್ವಜಕೇತಕತೋರಣೈಃ।**
**ವಿತಾನೈರಿಕ್ಷುಕದಲೀ ಪೂರ್ಣಕುಂಭಾಂಕುರಾದಿಭಿಃ ॥ 5 ॥**

**ಗೀತವಾದಿತ್ರ ನೃತ್ಯೈಶ್ಚ ಪುರಾಣಪಠನೈಃ ಶುಭೈಃ।**
**ಶೋಭಮಾನಂ ಮಹಾಪುಣ್ಯಂ ವರ್ಧಮಾನಂ ಮನೋಹರಂ ॥ 6 ॥**

(ಇತಿ ಮಂಟಪಂ ಧ್ಯಾತ್ವಾ)

---

**ಚಾಮರರತ್ನ ರಾಜಖಚಿತೈಃ** = ಚಾಮರಗಳು ಹಾಗೂ ಶ್ರೇಷ್ಠಮಟ್ಟದ ರತ್ನಗಳಿಂದ ಅಲಂಕೃತವಾದ, **ದ್ವಾರೈಃ** = ದ್ವಾರಗಳಿಂದ, **ಶೋಭಾವಹಂ** = ಶೋಭಿಸುವ, **ಶಂಖ–ಪದ್ಮ ಧವಳೈಃ** = ಶಂಖ ಹಾಗೂ ಬಿಳಿ ಪದ್ಮದಂತೆ ಸ್ವಚ್ಛವಾದ, **ಸ್ವಸ್ತಿಕೈಃ** = ಸ್ವಸ್ತಿಕ ಚಿಹ್ನೆಗಳಿಂದ, **ಪ್ರಭಾಜಿತಂ** = ಫಳ ಫಳ ಹೊಳೆಯುವ ॥ 3 ॥

**ಮಾಣಿಕ್ಯ** = ಮಾಣಿಕ್ಯವೆಂಬ ಮಣಿಯಂತೆ, **ಉಜ್ವಲದೀಪ** = ಹೊಳೆಯುತ್ತಿರುವ ದೀಪಗಳ, **ದೀಪ್ತಿವಿಲಸತ್** = ಪ್ರಕಾಶದಿಂದ ಶೋಭಿಸುತ್ತಿರುವ, **ಲಕ್ಷ್ಮೀವಿಲಾಸಾಸ್ಪದಂ** = ಲಕ್ಷ್ಮೀದೇವಿಯ ವಿಲಾಸಕ್ಕೆ ಮೀಸಲಾಗಿರುವ, **ಮಂಟಪಂ** = ಮಂಟಪವನ್ನು, **ಏವಂ ವಿಧೈಃ ಸಾಧಕೈಃ** = ಭಗವದ್ಭಕ್ತರಾದ ಸಾಧಕರು, **ಅರ್ಚನೇಷು** = ಪೂಜ ಕಾಲದಲ್ಲಿ, **ಧ್ಯಾಯೇತ್** = ಧ್ಯಾನಿಸಬೇಕು ॥4॥

**ಸಮ್ಮಾರ್ಜನಂ** = ಸಾರಿಸಿ, **ರಂಗವಲ್ಯಾ** = ರಂಗೋಲೆಯಿಂದ ಅಲಂಕರಿಸಿ, **ಧ್ವಜಕೇತಕ ತೋರಣೈಃ** = ಧ್ವಜಗಳು, ಪತಾಕೆಗಳು, ತೋರಣಗಳಿಂದಲೂ, **ಇಕ್ಷುಕದಲೀ ವಿತಾನೈಃ** = ಕಬ್ಬಿನ ಜಲ್ಲೇ, ಬಾಳೆಕಂದು ಇವುಗಳ, **ವಿತಾನೈಃ** = ಸಾಲುಸಾಲಾಗಿ, **ಪೂರ್ಣಕುಂಭಾಂಕುರಾದಿಭಿಃ** = ಮಾವಿನ ಚಿಗುರಿನಿಂದ ಕೂಡಿರುವ ಪೂರ್ಣಕುಂಭ ಮೊದಲಾದ ಮಂಗಳ ವಸ್ತುಗಳಿಂದ ಅಲಂಕೃತವಾದ ॥ 5 ॥

**ಗೀತವಾದಿತ್ರ ನೃತ್ಯೈಶ್ಚ** = ದೇವರ ಹಾಡುಗಳನ್ನು ಹಾಡುವ, **ವಾದಿತ್ರ** = ನಗಾರಿ ಮೊದಲಾದ ವಾದ್ಯಗಳನ್ನು ನುಡಿಸುವ, **ನೃತ್ಯಶ್ಚ** = ನೃತ್ಯ ಮಾಡುವವರಿಂದ,

**15. ಆಸನಮ್ :** (ಪರಿಶಿಷ್ಟ ನೋಡಿ)

**ಅಥ ಆಸನಂ ಉಪಸ್ಪೃಶ್ಯ,** (ಆಸನವನ್ನು ಮುಟ್ಟಿ)[8]

**ಓಂ ಮಂ ಮಂಡೂಕಾಯ ನಮಃ।**

**ಓಂ ಕುಂ ಕೂರ್ಮಾಯ ನಮಃ।**

**ಓಂ ವಂ ವರಾಹಾಯ ನಮಃ।**

**ಓಂ ಶೇಂ ಶೇಷಾಯ ನಮಃ।**

**ಓಂ ಕಂ ಕಾಲಾಗ್ನಿರುದ್ರಾಯ ನಮಃ।**

**ಓಂ ವಂ ವಜ್ರಾಯ ನಮಃ।**

(ಆಸನವನ್ನು ಮುಟ್ಟಿ, ಈ ಮೇಲಿನ ಆರೂ ಮಂತ್ರಗಳಿಂದ ಆಸನ ದೇವತೆಗಳಿಗೆ ನಮಸ್ಕಾರ ಮಾಡಬೇಕು)

**16. ದಿಗ್ಬಂಧನಮ್ :** [9] (ಬಾಣ ಮುದ್ರೆಯಿಂದ ದಿಗ್ಬಂಧನ ಮಾಡಬೇಕು)

**ಓಂ ಅಸ್ತ್ರಾಯಫಟ್, ನಮಃ ಚಕ್ರಾಯ ಸ್ವಾಹಾ।**

**ಇತಿ ಸುದರ್ಶನಮುದ್ರಯಾ ಇಂದ್ರಾದಿದಿಕ್ಷು ಬಧ್ನೀಯಾತ್ ॥**

(ಬಾಣ ಮುದ್ರೆಯಿಂದ ದಿಗ್ಬಂಧನ ಮಾಡಿ ಪ್ರಾಕಾರಾವಸ್ಥಿತ ವಹ್ನಿಯನ್ನು ಧ್ಯಾನಿಸುತ್ತಾ ಸುದರ್ಶನ ಮುದ್ರೆಯನ್ನು ತನ್ನ ಶಿರಸ್ಸಿನ ಸುತ್ತಲೂ ಎಂಟು ದಿಕ್ಕಿನಲ್ಲಿ ತೋರಿಸಬೇಕು)

---

ಪುರಾಣ, **ಪಠನ್ಯೈಃ** = ಪುರಾಣ ಪಾರಾಯಣ ಮಾಡುವವರಿಂದಲೂ, **ಶೋಭಮಾನಂ** = ಶೋಭಿಸುವ, **ಮನೋಹರಂ** = ಮನೋಹರವಾದ, **ವರ್ಧಮಾನಂ** = ಪುಣ್ಯಕರವಾದ, **ಮಂಟಪಂ** = ಮಂಟಪವನ್ನು, **ಧ್ಯಾಯೇತ್** = ಧ್ಯಾನ ಮಾಡಬೇಕು ॥ 6 ॥

---

8. **ಕೂರ್ಮಾಯಾಽಥ ವರಾಹಾಯ ಶೇಷಾಯಾಽಥ ನಮಸ್ತತಃ।**
**ನಮಃ ಕಾಲಾಗ್ನಿರುದ್ರಾಯ ವಜ್ರಾಯ ಚ ನಮೋ ನಮಃ ॥** – ಪದ್ಮಮಾಲಾ/22
9. **ನಮಃ ಚಕ್ರಾಯ ಸ್ವಾಹೇತಿ ಚಕ್ರಮುದ್ರಾಂ ಪ್ರದರ್ಶಯೇತ್।**
**ಐಂದ್ರಾದಿದಿಕ್ಷು ಬಧ್ನಂ ಚ ಮಂತ್ರೇಣಾನೇನ ಕಾರಯೇತ್ ॥** –ಪೂ.ಕ.

**17. ನಾರಾಯಣಾಷ್ಟಾಕ್ಷರ ಮಂತ್ರ ಜಪ :** (ಪರಿಶಿಷ್ಟ ನೋಡಿ)

ಓಂ ನಮೋ ನಾರಾಯಣಾಯ ಓಂ (ಅಷ್ಟವಾರಂ)

ಅಸ್ಯ ಶ್ರೀನಾರಾಯಣಾಷ್ಟಾಕ್ಷರಂ ಮಹಾಮಂತ್ರಸ್ಯ।

ಅಂತರ್ಯಾಮಿ ಋಷಿಃ। ದೈವೀ ಗಾಯತ್ರೀಛಂದಃ।

ಶ್ರೀನಾರಾಯಣೋದೇವತಾ ॥

ಓಂ ಕೃದ್ಧೋಲ್ಕಾಯ ಹೃದಯಾಯ ನಮಃ।
ಓಂ ಮಹೋಲ್ಕಾಯ ಶಿರಸೇ ಸ್ವಾಹಾ।
ಓಂ ವೀರೋಲ್ಕಾಯ ಶಿಖಾಯೈ ವೌಷಟ್।
ಓಂ ದ್ಯೂಲ್ಕಾಯ ಕವಚಾಯ ಹುಂ।
ಓಂ ಜ್ಞಾನೋಲ್ಕಾಯ ನೇತ್ರಾಭ್ಯಾಂ ವಷಟ್।
ಓಂ ಸಹಸ್ರೋಲ್ಕಾಯ ಅಸ್ತ್ರಾಯ ಫಟ್। ಇತಿ ದಿಗ್ಬಂಧಃ।

ಉದ್ಯದ್ ಭಾಸ್ವತ್ ಸಮಾಭಾಸಶ್ಚಿದಾನಂದೈಕ ದೇಹವಾನ್।
ಚಕ್ರಶಂಖ ಗದಾ ಪದ್ಮಧರೋ ಧ್ಯೇಯೋಽಹಮೀಶ್ವರಃ।
ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ ಸ್ವಮೂರ್ತಿಗಣಮಧ್ಯಗಃ।
ಬ್ರಹ್ಮವಾಯುಶಿವಾಹೀಶವಿಪೈಃ ಶಕ್ರಾದಿಕೈರಪಿ ॥

ಸೇವ್ಯ ಮಾನೋಽಧಿಕಂ ಭಕ್ತ್ಯಾ ನಿತ್ಯ ನಿಶ್ಶೇಷ ಶಕ್ತಿಮಾನ್।
ಮೂರ್ತಯೋ ಅಷ್ಟಾವಪಿ ಧ್ಯೇಯಾಃ ಚಕ್ರಶಂಖವರಾಭಯೈಃ।
ಯುಕ್ತಾಃ ಪ್ರದೀಪವರ್ಣಾಶ್ಚ ಸರ್ವಾಭರಣಭೂಷಿತಾಃ ॥

ಬಿಂಬೋಽಸಿ ಪ್ರತಿಬಿಂಬೋಽಸ್ಮಿ ತವ ಯದ್ಯಪಿ ಚಾಂತರಂ।
ಸ್ವಾಮಿನ್ ನಿರ್ದೋಷ ಮದ್ದೋಷಂ ವಿರೇಚಯ ನಮೋಽಸ್ತು ತೇ ॥

ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣ ಪ್ರೇರಣಯಾ ತತ್ಪ್ರೀತ್ಯರ್ಥಂ ನಾರಾಯಣಾಷ್ಟಾಕ್ಷರ ಮಂತ್ರ ಜಪತರ್ಪಣಾಖ್ಯಂ ಕರ್ಮ ಕರಿಷ್ಯೇ ॥

ಓಂ ನಮೋ ನಾರಾಯಣಾಯ ಓಂ (108 ಬಾರಿ ಯಥಾಶಕ್ತಿ ಜಪಿಸುವುದು)[10]

ಪುನಃ ಧ್ಯಾನ –

ಉದ್ಯದ್ ಭಾಸ್ವತ್ ಸಮಾಭಾಸಃ ಚಿದಾನಂದೈಕ ದೇಹವಾನ್ ।
ಚಕ್ರ–ಶಂಖ–ಗದಾ–ಪದ್ಮಧರೋ ಧ್ಯೇಯೋಽಹಮೀಶ್ವರಃ ।
ಲಕ್ಷ್ಮೀಧರಾಭ್ಯಾಂ ಆಶ್ಲಿಷ್ಟಃ ಸ್ವಮೂರ್ತಿಗಣ ಮಧ್ಯಗಃ ।
ಬ್ರಹ್ಮ–ವಾಯು–ಶಿವಾಹೀಶ–ವಿಪೈಃ ಶಕ್ರಾದಿಕೈರಪಿ ।
ಸೇವ್ಯಮನೋಽಧಿಕಂ ಭಕ್ತ್ಯಾ ನಿತ್ಯ ನಿಶ್ಶೇಷಶಕ್ತಿಮಾನ್ ॥

1. ಓಂ ಕೃದ್ಧೋಲ್ಕಾಯ ಹೃದಯಾಯ ನಮಃ ।
2. ಓಂ ಮಹೋಲ್ಕಾಯ ಶಿರಸೇ ಸ್ವಾಹಾ ।
3. ಓಂ ವೀರೋಲ್ಕಾಯ ಶಿಖಾಯೈ ವಷಟ್
4. ದ್ಯೂಲ್ಕಾಯ ಕವಚಾಯ ಹುಂ
5. ಜ್ಞಾನೋಲ್ಕಾಯ ನೇತ್ರಾಭ್ಯಾಂ ವೌಷಟ್
6. ಸಹಸ್ರೋಲ್ಕಾಯ ಅಸ್ತ್ರಾಯ ಫಟ್ । – ಇತಿ ದಿಙ್ಮುಖಃ

---

10. ನಾರಾಯಣ ಅಷ್ಟಾಕ್ಷರ ಮಂತ್ರವು ಎಲ್ಲಾ ಮಂತ್ರಗಳಿಗೂ ಮೂಲವಾದ್ದರಿಂದ ಮೂಲಮಂತ್ರವೆನಿಸಿದೆ. ಪೂಜೆಯಲ್ಲಿ ಅರ್ಹತೆ ಸಿದ್ಧಿಸಲು ಪೂಜಾಂಗವಾಗಿ ನೂರೆಂಟು ಬಾರಿ ಮೂಲಮಂತ್ರವನ್ನು ಜಪಿಸಬೇಕು. ಇದನ್ನೇ ಪದ್ಯಮಾಲಾದಲ್ಲಿ ಹೀಗೆ ಹೇಳಲಾಗಿದೆ.

ಪೂಜಾಂಗಮಿತಿ ಮೂಲಂ ಚ ಜಪೇದ್ ಅಷ್ಟೋತ್ತರಂ ಶತಂ ।

ಓಂ ನಮೋ ನಾರಾಯಣಾಯೇತಿ ಮೂಲಮಂತ್ರ ಉದಾಹೃತಃ ॥ –ಇತಿ ಸ್ಕಾಂದೇ

ಮೂಲ ಮಂತ್ರವೆಂದರೆ ಓಂ ನಮೋ ನಾರಾಯಣಾಯ ಎಂದು ಸ್ಕಾಂದ ಪುರಾಣದಲ್ಲಿ ಬರುವ ಮಾರ್ಗಶೀರ್ಷ ಮಹಾತ್ಮೆಯಲ್ಲಿ ಹೇಳಿದೆ. ಯಾವುದೇ ಉಪಚಾರ ಪೂಜೆಯನ್ನು ಮಾಡುವಾಗ ಆ ವಸ್ತುವೂ ಇಲ್ಲದಿದ್ದಾಗ ಮೂಲಮಂತ್ರ ಜಪದಿಂದ ಆ ವಸ್ತುವಿದ್ದರೆ ಯಾವ ಫಲವು ಲಭಿಸುತ್ತದೆಯೋ ಆ ಫಲವು ಲಭಿಸುತ್ತವೆ.

ಉಪಚಾರಾಣಾಮಭಾವೇ ತು ಮೂಲಮಂತ್ರಂ ಜಪೇತ್ ಸುಧೀಃ ।

ತತ್ತದೇವ ಫಲಂ ವಿಂದೇತ್ ಸಾಧಕಃ ಸ್ಥಿರಮಾನಸಃ ॥

## ನಾರಾಯಣಾಷ್ಟಾಕ್ಷರ ಮಂತ್ರ ಜಪ

ಶ್ರೀ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಲಕ್ಷ್ಮೀನಾರಾಯಣ ಪ್ರೇರಣಯಾ ಶ್ರೀ ಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ಯಥಾಶಕ್ತಿ ನಾರಾಯಣಾಷ್ಟಾಕ್ಷರ ಜಪತರ್ಪಣಾಖ್ಯಂ ಕರಿಷ್ಯೆ।

ಓಂ ನಮೋ ನಾರಾಯಣಾಯ ಓಂ ನಾರಾಯಣಂ ತರ್ಪಯಾಮಿ । ಉದ್ಯದ್ ಭಾಸ್ವತ್ – ಇತ್ಯಾದಿಯಾಗಿ (ಪುನಃ ಧ್ಯಾನ ಮಾಡಬೇಕು)

ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ಲಕ್ಷ್ಮೀನಾರಾಯಣ ಪ್ರೇರಣಯಾ । ಶ್ರೀ ಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ಯಥಾಶಕ್ತಿ ನಾರಾಯಣಾಷ್ಟಾಕ್ಷರ ಜಪತರ್ಪಣಾಖ್ಯಂ ಕರ್ಮ ಸಂಪೂರ್ಣಂ।

॥ ಶ್ರೀಕೃಷ್ಣಾರ್ಪಣಮಸ್ತು ॥

## 18. ದೇವಪೂಜಾ ಸಂಕಲ್ಪ- ಪ್ರಾರ್ಥನೆ :[11]

ಓಂ ನಿಷುಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಮ್ । ನ ಋತೇ ತ್ವತ್ ಕ್ರಿಯತೇ ಕಿಂಚನಾರೇ ಮಹಾಮರ್ಕಂ ಮಘವನ್ ಚಿತ್ರಮರ್ಚ ॥ -ಋ1-10/112/9

1. ಆರಾಧ್ಯಸೇ ಪ್ರಾಣಭೃತಾಂ ಪ್ರಣೇತ್ರಾ ಪ್ರಾಣಾಧಿನಾಥೇನ ಸಮೀರಣೇನ। ನಾರಾಯಣ ಜ್ಞಾನಸುಖೈಕಪೂರ್ಣ ಸ್ವಾಮಿನ್ ಮಮ ಶ್ರೀರಮಣ ಪ್ರಸೀದ ॥

19. ದೇವಪೂಜಾ ಸಂಕಲ್ಪ ಪ್ರಾರ್ಥನೆಯ ಅರ್ಥ :

**ಹೇ ಗಣಪತೇ** = ಇಂದ್ರಿಯಗಣಗಳಿಗೆ ಸ್ವಾಮಿಯೇ, **ಮಘವನ್** = ಧನವಂತನೇ, ಯಜ್ಞಸ್ವಾಮಿಯಾದ ಭಗವಂತನೇ, (ತ್ವಂ = ನೀನು) **ಗಣೇಷು** = ಪೂಜಕನ ಇಂದ್ರಿಯಗಳಲ್ಲಿ, **ನಿಷು ಸೀದ** = ಚೆನ್ನಾಗಿ ಸನ್ನಿಹಿತನಾಗಿರು (ಹಾಗೆಯೇ ಸನ್ನಿಹಿತನಾಗಿದ್ದು), **ಮಹಾಂ** = ಮಹಾಮಹಿಮನಾದ, **ಅರ್ಕಂ** = ಪರಮಾನಂದರೂಪಿಯಾದ, **ಚಿತ್ರಂ** = ಜ್ಞಾನಮಯನಾದ, ಆಶ್ಚರ್ಯನಾದ, **ತ್ವಾಂ** = ನಿನ್ನನ್ನು ನೀನೇ, **ಅರ್ಚ** = ಪೂಜಿಸಿಕೊ, (ಹಿ = ಏಕೆಂದರೆ) **ತ್ವಾಂ** = ನಿನ್ನನ್ನೇ, **ಕವೀನಾಂ** = ಜ್ಞಾನಿಗಳ ಮಧ್ಯದಲ್ಲಿ, **ವಿಪ್ರತಮಂ** = ಶ್ರೇಷ್ಠತಮನೆಂದು, **ಆಹುಃ** = ಹೇಳುವರು, ಇದಲ್ಲದೆ, **ತ್ವತ್ ಋತೇ** = ನಿನ್ನ ಅನುಗ್ರಹವಿಲ್ಲದೆ, **ಆರೇ** = ದೂರದಲ್ಲಾಗಲೀ, ಸಮೀಪದಲ್ಲಾಗಲಿ ಇರುವ, **ಕಿಂಚನ** = ತೃಣಾದಿಗಳ ಚಲನೆಯೂ, **ನಕ್ರಿಯತೇ** = ಮಾಡಲ್ಪಡುವುದಿಲ್ಲ. (ಆದ್ದರಿಂದ ನಿನ್ನ ಪೂಜೆಗೆ ನೀನೇ ಸಮರ್ಥ, ನಾನೇನು ಮಾಡಬಲ್ಲೆ ಎಂದಭಿಪ್ರಾಯ)

**ಶ್ಲೋಕ 1 : ಪ್ರಾಣಭೃತಾಂ** = ಪ್ರಾಣಗಳನ್ನು ಧರಿಸಿರುವ ಜೀವರಿಗೆಲ್ಲ, **ಪ್ರಣೇತಾ** = ಅಧಿಪತಿಯಾದ, **ಪ್ರಾಣಾಧಿನಾಥೇನ** = ಇಂದ್ರಿಯ ಪ್ರೇರಕರಿಗೂ ಸ್ವಾಮಿಯಾದ,

---

11. ಬೆರಳುಗಳನ್ನು ವಿಸ್ತಾರಗೊಳಸಿ, ಎಡ-ಬಲಗೈಗಳು ಪರಸ್ಪರ ಒಂದಕ್ಕೊಂದು ಅಭಿಮುಖವಾಗಿರುವಂತೆ ಜೋಡಿಸಿ, ಹೃದಯದಲ್ಲಿ ಇಟ್ಟರೆ "ಪ್ರಾರ್ಥನೆ" ಮುದ್ರೆಯೆನಿಸುತ್ತದೆ.
ಪ್ರಸೃತಾಂಗುಲಿಕೌ ಹಸ್ತೌ ಮಿಥಃ ಶಿಷ್ಟೌ ಚ ಸಮ್ಮುಖೌ।
ಕುರ್ಯಾತ್ ಸ್ವದಯೇ ಸೇಯಂ ಮುದ್ರಾ ಪ್ರಾರ್ಥನ ಸಂಜ್ಞಿಕಾ ॥



2. ಬಿಂಬೋಽಸಿ ಪ್ರತಿಬಿಂಬೋಽಸ್ಮಿ ತವ ಯದ್ಯಪಿ ಚಾಂತರಂ।
ಸ್ವಾಮಿನ್ ನಿರ್ದೋಷ ಮದ್ದೋಷಂ ವಿವೇಚಯ ನಮೋಽಸ್ತು ತೇ ॥

3. ಭಗವಾನ್ ಯನ್ಮಯಾ ಕರ್ಮ ಶುಭಂ ಕಾರಯಸೇ ಪ್ರಭೋ।
ತತ್ಸರ್ವಂ ವಿಷ್ಣುಪೂಜಾಸ್ತು ತವ ದೇವ ಪ್ರಸಾದತಃ ॥

4. ಜಯಾಚ್ಯುತ ಜಯಾನಂತ ಜಯಕೃಷ್ಣಹರೇ ಪ್ರಭೋ।
ಜಯ ಕೇಶವ ಲಕ್ಷ್ಮೀಶ ಇತ್ಯೇವಂ ಕೃಷ್ಣಂ ಪ್ರಪೂಜಯೇತ್ ॥

ಇತಿ ಪ್ರಾರ್ಥ್ಯ ಪೂಜಾಸಂಕಲ್ಪಂ ಕುರ್ಯಾತ್।

---

**ಸಮೀರಣೇನ** = ಮುಖ್ಯಪ್ರಾಣನಿಂದ, **ಹೇ ನಾರಾಯಣ** = ನಾರಾಯಣನೆ, **ಆರಾಧ್ಯಸೇ** = ಪೂಜಿಸಲ್ಪಡುವವನು ನೀನು. (ಆದ್ದರಿಂದ ನಾವು ಮಾಡುವ ಪೂಜೆ ಗಣನೆಗೂ ಬರುವುದಿಲ್ಲ) ಆದರೂ, **ಜ್ಞಾನಸುಖೈಕಪೂರ್ಣ** = ಜ್ಞಾನ ಹಾಗೂ ಸುಖಗಳಿಂದ ಪೂರ್ಣನಾದ, **ಶ್ರೀರಮಣ** = ಲಕ್ಷ್ಮೀಪತಿಯಾದ, ಸ್ವಾಮಿನ್ ಭಗವಂತನೇ, **ಮಮ** = ನನ್ನ ಈ ಅಲ್ಪ ಪೂಜೆಗೆ, **ಪ್ರಸೀದ** = ಸಂತುಷ್ಟನಾಗು.

**ಶ್ಲೋಕ 2 :**

**ಸ್ವಾಮಿನ್** = ಸರ್ವಸ್ವಾಮಿಯಾದ, ಭಗವಂತನೇ, **ತ್ವಂ** = ನೀನು, **ಬಿಂಬಃ ಅಸಿ** = ಬಿಂಬನಾಗಿರುವೆ, **ಅಹಂ** = ನಾನಾದರೂ, **ಪ್ರತಿಬಿಂಬಃ ಅಸ್ಮಿ** = ಪ್ರತಿಬಿಂಬನಾಗಿ ನಿನ್ನ ಅಧೀನನಾಗಿರುವೆ, **ತವ** = ನಿನಗೂ, **ಮಮ** = ನನಗೂ, **ಅಂತರಂ** = ವ್ಯತ್ಯಾಸವಾದರೂ, **ಯದ್ಯಪಿ ಅಧಿಕಂ** = ಅಪಾರವಾಗಿದೆ, ಆದರೂ, **ನಿರ್ದೋಷ** = ದೋಷಲೇಶವಿಲ್ಲದ, ನೀನು, **ಮದ್ದೋಷಂ** = ಮಹಾದೋಷಿಯಾದ ನನ್ನ ದೋಷಗಳನ್ನು, **ವಿವೇಚಯ** = ದೂರ ಓಡಿಸು, **ತೇ** = ಈ ನಿನ್ನ ಉಪಕಾರಕ್ಕೆ ಪ್ರತ್ಯುತ್ತರವಾಗಿ, **ನಮೋಽಸ್ತು** = ನಮಸ್ಕಾರ ಮಾತ್ರ ಮಾಡುವೆನು.

**ಶ್ಲೋಕ 3 :**

**ಭಗವಾನ್** = ಭಗವಂತನೇ, **ಪ್ರಭೋ** = ಸರ್ವಸಮರ್ಥನೆ, **ಮಯಾ** = ನನ್ನಿಂದ, **ಯತ್ ಶುಭಂ** = ಕರ್ಮಗಳನ್ನು, **ಕಾರಯಸೇ** = ಮಾಡಿಸುವೆಯೋ, **ತತ್ಸರ್ವಂ** = ಅವೆಲ್ಲವೂ, **ದೇವ, ತವ ಪ್ರಸಾದತಃ** =ಕ್ರೀಡಾದಿಗುಣಯುಕ್ತನಾದ ನಿನ್ನ ಅನುಗ್ರಹದಿಂದ, **ವಿಷ್ಣುಪೂಜಾ** = ವಿಷ್ಣುಪೂಜೆಯಾಗಿ, **ಅಸ್ತು** = ಆಗಲಿ.

## 19. ಪೂಜಾಸಂಕಲ್ಪಃ :

ಆಚಮ್ಯ-ಪ್ರಾಣಾನಾಯಮ್ಯ-ದೇಶಕಾಲಾದೀನ್ ಉಚ್ಚಾರ್ಯ – ಶುಭತಿಥೌ ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣ ಪ್ರೇರಣಯಾ, ಶ್ರೀಲಕ್ಷ್ಮೀನಾರಾಯಣ ಪ್ರೀತ್ಯರ್ಥಂ, ಭಗವತೋ ಬಲೇನ, ಭಗವತಃ ವೀರ್ಯೇಣ ಭಗವತಃ ತೇಜಸ, ಭಗವತಃ ಕರ್ಮಣಾ, ಭಗವತಾ ಸಂಜೀವಿತ ಸ್ವಾಂತವಪುಃ ಚಿದಿಂದ್ರಿಯೋಽಹಂ, ಅನಂತಾವತಾರರೂಪ ಗುಣಕ್ರಿಯಾತ್ಮಕ, ಶ್ರೀಲಕ್ಷ್ಮೀನಾರಾಯಣಸ್ಯ ಧ್ಯಾನಾವಾಹನಾದಿ ಷೋಡಶೋಪಚಾರ ಪೂಜಾಂ, ತಂತ್ರಾಸಾರೋಕ್ತ – ವಿಧಾನೇನ ಕರಿಷ್ಯೇ ॥

## 20. ನಿರ್ಮಾಲ್ಯ ವಿಸರ್ಜನಮ್ :

ದೇವಸ್ಯ ವಾಮಭಾಗೇ ಕೃತಾಂಜಲಿ ಪುಟಾಯ ಸಸ್ತ್ರೀಕಾಯ ಸಲ್ಲಕ್ಷಣಾಯ ಶಂಕರಾಯ ನಮಃ । ತನ್ಮಸ್ತಕೇ ಭೂಂ ಭುವೇ ನಮಃ । ಸುವರ್ಣಪಾತ್ರಂ ವಿಚಿಂತ್ಯ । ತತ್ರ ನಿರ್ಮಾಲ್ಯಂ ವಿಸೃಜೇತ್ ।

---

20. ನಿರ್ಮಾಲ್ಯ ವಿಸರ್ಜನೆಯ ಅರ್ಥ : **ದೇವಸ್ಯ** = ಭಗವಂತನ, **ವಾಮಭಾಗೇ** = ಎಡಭಾಗದಲ್ಲಿ, **ಸಸ್ತ್ರೀಕಾಯ** = ತನ್ನ ಪತ್ನಿ ಪಾರ್ವತಿ ಸಹಿತನಾಗಿ, ನಿಂತಿರುವ, **ಸಲ್ಲಸ್ತಕೆ** = ಆ ಶಿವನ ತಲೆಯ ಮೇಲೆ, **ಭೂಂ ಭುವೇ ನಮಃ** = ಭೂಮಿಗೆ ನಮಸ್ಕಾರ, **ತತ್ರ** = ಆ ಶಿವನ ತಲೆಯ ಮೇಲೆ, **ಸುವರ್ಣಪಾತ್ರಂ** = ಸುವರ್ಣದ ಪಾತ್ರೆಯಲ್ಲಿ ದಿನಪೂಜಿಸಿದ ತುಲಸೀ, ಪುಷ್ಪಗಳನ್ನು, **ವಿಸೃಜೇತ್** = ತೆಗೆದುಹಾಕಬೇಕು.**

---

** ಈ ನಿರ್ಮಾಲ್ಯಕ್ಕೆ ಅಭಿಮಾನಿಯು ಶ್ರೀಲಕ್ಷ್ಮೀದೇವಿ. ಇವಳು ಉಷಃಕಾಲಕ್ಕೆ ಅಭಿಮಾನಿಯೂ ಕೂಡ ಆದ್ದರಿಂದ ನಿರ್ಮಾಲ್ಯ ವಿಸರ್ಜನೆಯ ಕಾಲದಲ್ಲಿ ಅಂಭ್ರಣೀಸೂಕ್ತವನ್ನು ಹೇಳಲಾಗುತ್ತದೆ ಹಾಗೂ ಉಷಃ ಕಾಲದಲ್ಲಿಯೇ ನಿರ್ಮಾಲ್ಯ ವಿಸರ್ಜನೆಯಾಗಬೇಕು. ತಡವಾದರೆ ದೋಷ ಹೇಳಲಾಗಿದೆ. (ಪರಿಶಿಷ್ಟ ನೋಡಿ)

**ದ್ರೌಪದೀರಮಣ ಭೀಮಸೇನ – ಸ್ಮರಣೆ :**

**ಶಾಲಿಗ್ರಾಮ ಶಿಲಾಯಾಂ ತು ವಸಂತಂ ಕಲಿಮೋಜಸಾ।**

**ಭೀಮಸೇನ ಮಹಾಬಾಹೋ ಉಚ್ಚಾಟಯ ನಮೋಽಸ್ತು ತೇ ॥ ಇತಿ ಮಂತ್ರೇಣ ಸಾಲಿಗ್ರಾಮಂ ಪ್ರಕ್ಷಾಲ್ಯಂ ಜಲಂ ವಿಸೃಜ್ಯ, ಪೃಥಗುದಕೇನ ಅಂಭ್ರಣೀಸೂಕ್ತೇನ ಅಭಿಷೇಕಂ ಕುರ್ಯಾತ್ ॥**

**ಅಂಭೃಣೀ ಸೂಕ್ತ :** (ನಿರ್ಮಾಲ್ಯಾಭಿಷೇಕ ಮಾಡಬೇಕು)

**ಅಸ್ಯ ಶ್ರೀ ಅಂಭೃಣೀ ಸೂಕ್ತಸ್ಯ–ವಾಗಂಭೃಣೀ ತ್ರಿಷ್ಟುಪ್ ಜಗತೀವಾ ಛಂದಃ– ಆತ್ಮಾದೇವತಾ ನಿರ್ಮಾಲ್ಯಾಭಿಷೇಕೇ ವಿನಿಯೋಗಃ**

**ಅಹಂ ರುದ್ರೇಭಿರ್ವಸುಭಿಶ್ಚ ರಾಮ್ಯಹಮಾದಿತ್ಯೈರುತ ವಿಶ್ವದೇವೈಃ। ಅಹಂ ಮಿತ್ರಾವರುಣೋಭಾ ಬಿಭರ್ಮ್ಯಹಮಿಂದ್ರಾಗ್ನೀ ಅಹಮಶ್ವಿನೋಭಾ ॥ ೧ ॥**

---

**ದ್ರೌಪದೀರಮಣ ಭೀಮಸೇನ** = ದ್ರೌಪದಿಯ ಪತಿಯಾದ ಭಿಮಸೇನನೇ, **ಶಾಲಿಗ್ರಾಮಶಿಲಾಯಾಂ ತುಂ** = ಶಾಲಿಗ್ರಾಮ ಶಿಲೆಯ ಸಮೀಪದಲ್ಲಿ, **ವಸಂತಂ** = ವಾಸಿಸುತ್ತಿರುವ, **ಕಲಿಂ** = ಕಲಿಯನ್ನು, **ಹೇ ಮಹಾಬಾಹೋ** = ಮಹಾಭುಜವುಳ್ಳ ಭೀಮಸೇನನೇ, **ಓಜಸಾ** = ನಿನ್ನ ಸಾಮರ್ಥ್ಯದಿಂದ, **ಉಚ್ಚಾಟಯ** = ಓಡಿಸು, ಇದಕ್ಕಾಗಿ, **ತೇ** = ನಿನಗೆ, **ನಮೋಸ್ತು** = ನನ್ನ ಈ ನಮಸ್ಕಾರವು, **ಇತಿ ಮಂತ್ರೇಣ** = ಈ ಶ್ಲೋಕವನ್ನು ಉಚ್ಚರಿಸಿ, **ಶಾಲಿಗ್ರಾಮಂ** = ಶಾಲಿಗ್ರಾಮವನ್ನು, **ಪ್ರಕ್ಷಾಲ್ಯ** = ತೊಳೆದು, **ಜಲಂ** = ಆ ತೊಳೆದ ನೀರನ್ನು ಉಪಯೋಗಿಸದೆ, **ವಿಸೃಜ್ಯ** = ಅರ್ಘ್ಯ ಪಾತ್ರೆಗೆ ಚೆಲ್ಲಿ, **ಪೃಥುಗುದಕೇನ** = ಬೇರೆ ನೀರನ್ನು ಕಲಶದಿಂದ ತೆಗೆದುಕೊಂಡು, **ಅಂಭೃಣೀಸೂಕ್ತೇನ** = ಅಂಭೃಣೀಸೂಕ್ತದಿಂದ, **ಅಭಿಷೇಕಂ** = ನಿರ್ಮಾಲ್ಯಾಭಿಷೇಕವನ್ನು, **ಕುರ್ಯಾತ್** = ಮಾಡಬೇಕು.

---

**ಅಂಭೃಣೀ ಸೂಕ್ತ ಅರ್ಥ :**

1. **ಅಹಂ** = ಲಕ್ಷ್ಮೀದೇವಿಯಾದ ನಾನು, **ರುದ್ರೇಭಿ** = *ಹನ್ನೊಂದು ರುದ್ರರಿಂದ, **ವಸುಭಿಃ** = *ಎಂಟು ವಸುಗಳಿಂದ ಕೂಡಿಯೇ, **ಚರಾಮಿ** = ಸಂಚರಿಸುತ್ತೇನೆ,

**ಅಹಂ ಸೋಮಮಾಹನಸಂ ಬಿಭರ್ಮ್ಯಹಂ ತ್ವಷ್ಟಾರಮುತ ಪೂಷಣಂ ಭಗಮ್ । ಅಹಂ ದಧಾಮಿ ದ್ರವಿಣಂ ಹವಿಷ್ಮತೇ ಸುಪ್ರಾವ್ಯೇ (ಏ) ಽ ಯಜಮಾನಾಯ ಸುನ್ವತೇ ॥ ೨ ॥**

---

**ಉತ** = ಹಾಗೆಯೇ, **ಅಹಂ** = ನಾನು, **ಆದಿತ್ಯೈ** = *ಹನ್ನೆರಡು ಮಂದಿ ಆದಿತ್ಯರಿಂದಲೂ, **ವಿಶ್ವೇದೇವ್ಯ** = *ಹತ್ತು ವಿಶ್ವೇದೇವತೆಗಳಿಂದಲೂ, ಕೂಡಿಯೇ, **ಚರಾಮಿ** = ಸಂಚರಿಸುತ್ತೇನೆ, **ಅಹಂ** = ನಾನು ಉಭಾ, **ಮಿತ್ರಾವರುಣಾ** = ಮಿತ್ರಾವರುಣರೆಂಬ ಇಬ್ಬರನ್ನು ಹಾಗೆಯೇ, **ಉಭಾ** = ಇಬ್ಬರಾದ, **ಇಂದ್ರಾಗ್ನೀ** = ಇಂದ್ರ ಮತ್ತು ಅಗ್ನಿಗಳನ್ನು, **ಅಶ್ವಿನಾ** = ಅಶ್ವಿನೀದೇವತೆಗಳನ್ನು ಕೂಡ, **ಬಿಭರ್ಮಿ** = ಪೋಷಣೆ ಮಾಡುತ್ತೇನೆ,

2. **ಅಹಂ** = ನಾನು, **ಆಹನಸಂ** = ಸೋಮಯಾಗದಲ್ಲಿ ಹಿಂಡುವ ಸೋಮಲತಾಭಿಮಾನಿಯಾದ, **ಸೋಮಂ** = ಚಂದ್ರನನ್ನು, **ತ್ವಷ್ಟಾರಂ** = ತ್ವಷ್ಟೃನಾಮಕ ಸೂರ್ಯನನ್ನು, **ಉತ** = ಮತ್ತು, **ಪೂಷಣಂ** = ಪೂಷನ್ ಎಂಬ ಸೂರ್ಯನನ್ನು, **ಭಗಂ** = ಭಗನನ್ನು, **ಬಿಭರ್ಮಿ** = ಧರಿಸಿ ಪೋಷಿಸುತ್ತೇನೆ.
**ಅಹಂ** = ನಾನು, **ಸುಪ್ರಾವ್ಯೇ** = ರಾಜಾದಿಗಳಿಕ್ಕಿಂತಲೂ ಚೆನ್ನಾಗಿ ರಕ್ಷಿಸಲು ಆಯಾಯ ಲೋಕಗಳಲ್ಲಿ ನೆಲೆಸಿರುವ, **ಸುನ್ವತೇ** = ಶ್ರೀಲಕ್ಷ್ಮೀ ನಾರಾಯಣರನ್ನು ಕುರಿತು ಹೋಮ ಮಾಡಲು ಸಿದ್ಧರಾಗಿ, **ಹವಿಷ್ಮತೇ** = ಯಜ್ಞ ಯೋಗ್ಯವಾದ ಚರು ಮೊದಲಾದ ಹೋಮೀಯ ವಸ್ತುಗಳನ್ನು ಹೊಂದಿರುವ, **ಯಜಮಾನಾಯ** = ಬ್ರಹ್ಮರುದ್ರ ಇಂದ್ರಾದಿ ಯಜನ ಶೀಲರಿಗೆ, **ದ್ರವಿಣಂ** = ಧನ ಧಾನ್ಯಾದಿಗಳನ್ನು, **ಸಹ ದಧಾಮಿ** = ಕೊಡುವಳು ನಾನೆ.

---

* **ಏಕಾದಶರುದ್ರರು** : ರೈವತ, ಅಜ, ಭವ, ಭೀಮ ವಾಮ ಉಗ್ರ, ವೃಷಾಕಪಿ, ಅಜೈಕಪಾತ್, ಅಹಿರ್ಬುಧ್ನಿ, ಬಹುರೂಪ, ಮಹಾನ್
* **ಅಷ್ಟವಸುಗಳು** : ದ್ರೋಣ, ಪ್ರಾಣ, ಧ್ರುವ, ಅರ್ಕ, ಅಗ್ನಿ, ದೋಷ, ದ್ಯು(ವಸು), ವಿಭಾವಸು
* **ದ್ವಾದಶಾದಿತ್ಯರು** : ವಿವಸ್ವಾನ್, ಆರ್ಯಮಾ, ಪೂಷನ್, ತ್ವಷ್ಟೃ, ಸವಿತ್ರ, ಭಗ, ಧಾತೃ, ಪರ್ಜನ್ಯ, ವರುಣ, ಮಿತ್ರ, ಶಕ್ರ, ಉರುಕ್ರಮ, ಉರುಕ್ರಮನೆಂದರೆ ತ್ರಿವಿಕ್ರಮ, ವಿಷ್ಣುವನ್ನು ಬಿಟ್ಟು ಉಳಿದ 11 ಮಂದಿ ಲಕ್ಷ್ಮೀಯ ಹಿಂದೆ ಸಂಚರಿಸುತ್ತಾರೆ. ಎಂದರೆ ಅವಳ ಅಧೀನರು ಎಂದರ್ಥ.
* ಹತ್ತು ವಿಶ್ವೇದೇವತೆಗಳು : ಕ್ರತು, ದಕ್ಷ, ಸತ್ಯ, ವಸು, ಧೂರಿ, ಲೋಚನ, ಪುರೂರವ, ಆರ್ದ್ರವ, ಕಾಮ, ಕಾಲರು.

ಅಹಂ ರಾಷ್ಟ್ರೀ ಸಂಗಮನೀ ವಸೂನಾಂ ಚಿಕಿತುಷೀ ಪ್ರಥಮಾ ಯಜ್ಞಿಯಾನಾಮ್ । ತಾಂ ಮಾ ದೇವಾ ವ್ಯದಧುಃ ಪುರುತ್ರಾ ಭೂರಿಸ್ಥಾತ್ರಾಂ ಭೂರ್ಯಾವೇಶಯಂತೀಮ್ ॥ ೩ ॥

ಮಯಾ ಸೋ ಅನ್ನಮತ್ತಿ ಯೋ ವಿಪಶ್ಯತಿ ಯಃ ಪ್ರಾಣಿತಿ ಯ ಈಂ ಶೃಣೋತ್ಯುಕ್ತಮ್ । ಅಮಂತವೋ ಮಾಂ ತ ಉಪ ಕ್ಷಿಯಂತಿ ಶ್ರುಧಿ ಶ್ರುತ ಶ್ರದ್ಧಿವಂ ತೇ ವದಾಮಿ ॥ ೪ ॥

---

3. **ಅಹಂ** = ನಾನು, **ರಾಷ್ಟ್ರೀ** = ಭೂರೂಪದಿಂದ ಸಕಲ ರಾಷ್ಟ್ರಗಳಿಗೂ ನಿಯಾಮಕಳಾಗಿರುವೆನು, **ವಸೂನಾಂ** = ಧನಧಾನ್ಯಾದಿ ಸಂಪತ್ತುಗಳನ್ನು, **ಸಂಗಮನೀ** = ಆಯಾಯ ರಾಷ್ಟ್ರಗಳಿಗೆ ಕೊಡುವವಳೂ, **ಯಜ್ಞಿಯಾನಾಂ** = ಯಜ್ಞಕ್ಕೆ ಬೇಕಾದ ಸಂಪತ್ತುಗಳಿಗೆ, **ಪ್ರಥಮಾ ಚಿಕಿತುಷೀ** = ಪ್ರಥಮ ಕರ್ತೃವಾಗಿದ್ದೇನೆ.

   **ಪುರುತ್ರಾ** = ಉತ್ಕೃಷ್ಟರಾದ ಬ್ರಹ್ಮಾದಿ ಜಗತ್ತನ್ನೇ ರಕ್ಷಿಸುವ, **ತಾಂ** = ಅಂತಹ, **ಮಾ** = ನನನ್ನು, **ಭೂರಿಸ್ಥಾತ್ರಾಂ** = ಬಹಳ ವಿಧವಾದ ದ್ರವ್ಯಗಳನ್ನು, ಆವೇಶಯಂತೀಂ ನೀಡುವವಳೆಂದು ತಿಳಿದ ದೇವತೆಗಳು, **ವ್ಯದಧುಃ** = ಹಾಗೆಯೇ ಸ್ತುತಿಸುತ್ತಾರೆ.

4. **ಯ** = ಯಾವನು, **ವಿಪಶ್ಯತಿ** = ನಾನು ಹೇಳಿದ ರೀತಿಗಿಂತ ಬೇರೆಯಾಗಿ ತಿಳಿಯವನೋ, **ಯಃ** = ಯಾವನು, **ಪ್ರಾಣಿತಿ** = ಕೇವಲ ಬದುಕುವುದನ್ನು ಮಾತ್ರ ಕಲಿತು ನನ್ನ ತತ್ವದಲ್ಲಿ ಉದಾಸೀನನೋ, **ಯ** = ಯಾವನು, **ಈಂ** = ಈ ರೀತಿಯಾಗಿ, **ಉಕ್ತಂ** = ಹಿಂದೆ ಹೇಳಲ್ಪಟ್ಟ ತತ್ವಗಳನ್ನು, **ಶೃಣೋತಿ** = ಶಿಷ್ಯನಂತೆ ಕೇಳುವನೋ, **ಸಃ** = ಅವರೆಲ್ಲರೂ ಕೂಡ, **ಮಯಾ** = ನನ್ನಿಂದಲೇ, **ಅನ್ನಂ ಅತ್ತಿ** = ಅನ್ನಾದಿಗಳನ್ನು ತಿನ್ನುತ್ತಾರೆ, **ಮಾಂ** = ನನ್ನನ್ನು, **ಅಮಂತವಃ** = ಅಪರಾಧವನ್ನೇ ಮಾಡದ ನಿರಪರಾಧಿಗಳು, **ಮಾಂ** = ನನ್ನ, **ಉಪಕ್ಷಿಯಂತಿ** = ಸಮೀಪ ವಾಸ ಮಾಡುತ್ತಾರೆ. (ಯಾರು **ಅಮಂತವಃ** = ಅವಮಾನ ಮಾಡುವರೋ, **ತೇ** = ಅವರು, **ಉಪ** = ಕೂಡಲೇ, **ಕ್ಷಿಯಂತಿ** = ನಾಶ ಹೊಂದುತ್ತಾರೆ). **ಅಹಂ** = ನಾನಾದರೂ, **ಶ್ರದ್ಧಿವಂ** = ಶ್ರದ್ಧಾಳುಗಳು ಮಾತ್ರವೆ

**ಅಹಮೇವ ಸ್ವಯಮಿದಂ ವದಾಮಿ ಜುಷ್ಟಂ ದೇವೇಭಿರುತ ಮಾನುಷೇಭಿಃ । ಯಂ ಕಾಮಯೇ ತಂತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಮ್ ॥ ೫ ॥**

**ಅಹಂ ರುದ್ರಾಯ ಧನುರಾ ತನೋಮಿ ಬ್ರಹ್ಮದ್ವಿಷೇ ಶರವೇ ಹಂತವಾ ಉ । ಅಹಂ ಜನಾಯ ಸಮದಂ ಕೃಣೋಮ್ಯಹಂ ದ್ಯಾವಾಪೃಥಿವೀ ಆ ವಿವೇಶ ॥ ೬ ॥**

---

ಕೇಳಬಹುದಾದ, ಮಾತನ್ನು, **ತೇ** = ನಿನಗೆ, ವದಾಮಿ = ಹೇಳುತ್ತಿದ್ದೇನೆ, **ಶ್ರುಧಿ** = ಕೇಳು, **ಶ್ರುತ** = ಇತರರಾದ ತಟಸ್ಥರೂ ಸಹ ಕೇಳಿರಿ.

5. **ದೇವೇಭಿಃ** = ದೇವತೆಗಳಿಂದ, **ಉತ** = ಹಾಗೂ, **ಮಾನುಷೇಭಿಃ** = ಉತ್ತಮ ಮನುಷ್ಯರಿಂದಲೂ, **ಜುಷ್ಟಂ** = ಸೇರಿಸಲ್ಪಟ್ಟ, **ಇದಂ** = ಈ ನನ್ನ ಮಾತನ್ನು, ಏವ ವದಾಮಿ = ನಾನೇ ಹೇಳುತ್ತಿದ್ದೇನೆ, **ಯಂ ಯಂ** = ಯಾವ ಯಾವ ವ್ಯಕ್ತಿಯನ್ನು, **ಉಗ್ರಂ** = ರುದ್ರನ ಪದವಿಗೆ, **ಕರ್ತುಂ** = ಯೋಗ್ಯನನ್ನಾಗಿಸಲು, **ಕಾಮಯೇ** = ಇಚ್ಛಿಸುವೆನೋ, **ತಂ ತಂ** = ಆಯಾಯ ಯೋಗ್ಯನಾದವನನ್ನು, **ಉಗ್ರಂ** = ರುದ್ರನನ್ನಾಗಿ, **ಕೃಣೋಮಿ** = ಮಾಡುವೆನು. ಹಾಗೆಯೇ, **ಯಂ** = ಯಾರನ್ನು, **ಬ್ರಹ್ಮಾಣಂ** = ಬ್ರಹ್ಮಪದವಿಗೇ-ರಿಸಲಿಚ್ಛಿಸುವೆನೋ, **ಋಷಿಂ** = ಋಷಿ ಪದವಿಗೆ ಏರಿಸಲು ಇಚ್ಛಿಸುವನೋ, **ಯಂ** = ಯಾರನ್ನು, **ಸುಮೇಧಸಂ** = ಮೇಧಾವಿಯನ್ನಾಗಿಸಲು ಇಚ್ಛಿಸುವೆನೋ, **ತಂ ತಂ** = ಅವರನ್ನೆಲ್ಲ, **ಬ್ರಹ್ಮಾಣಂ** = ಬ್ರಹ್ಮನನ್ನಾಗಿಯೂ, **ಋಷಿಂ** = ಋಷಿಯನ್ನಾಗಿ, **ಸುಮೇಧಾಂ** = ಮೇಧಾವಿಯನ್ನಾಗಿಯೂ, **ಕೃಣೋಮಿ** = ಮಾಡುತ್ತೇನೆ.

6. **ಅಹಂ** = ನಾನು, **ಬ್ರಹ್ಮದ್ವಿಷೇ** = ಚತುರ್ಮುಖ ಬ್ರಹ್ಮನ ಐದನೇ ಶಿರಸ್ಸನ್ನೆ ಕಡಿದು, **ಶರವೇ** = ಹಿಂಸಕನಾದ, **ಶರವೇ** = ಜಗತ್ತನ್ನೇ ಸಂಹರಿಸುವ, **ರುದ್ರಾಯ** = ರುದ್ರನನ್ನು, **ಹಂತ ವಾ ಉ** = ಕೊಲ್ಲಲೆಂದೇ, **ಧನುಃ** = ಧನಸ್ಸಿನ – ದಾರವನ್ನು, **ಆ ತನೋಮಿ** = ಎಳೆಯುತ್ತೇನೆ. **ಅಹಂ** = ನಾನು, **ದ್ಯಾವಾಪೃಥಿವೀ** = ಭೂ ಸ್ವರ್ಗಗಳನ್ನು, **ಆ ವಿವೇಶ** = ರಕ್ಷಿಸಲೆಂದು ಅಭಿಮಾನಿಯಾಗಿ ಪ್ರವೇಶಿಸಿದ್ದೇನೆ.

**ಅಹಂ ಸುವೇ ಪಿತರಮಸ್ಯ ಮೂರ್ಧನ್ಮಮ ಯೋನಿರಪ್ಸ್ವ (ಅ) ಂ ತಃ ಸಮುದ್ರೇ । ತತೋ ವಿ ತಿಷ್ಠೇ ಭುವನಾನು ವಿಶ್ವೋತಮೂಂ ದ್ಯಾಂ ವರ್ಷ್ಮಣೋಪ ಸ್ಪೃಶಾಮಿ ॥ ೭ ॥**

**ಅಹಮೇವ ವಾತ ಇವ ಪ್ರ ವಾಮ್ಯಾರಭಮಾಣಾ ಭುವನಾನಿ ವಿಶ್ವಾ । ಪರೋ ದಿವಾ ಪರ ಏನಾ ಪೃಥಿವ್ಯೈತಾವತೀ ಮಹಿನಾ ಸಂ ಬಭೂವ ॥ ೮ ॥**

---

7. **ಅಹಂ** = ನಾನು, **ಅಸ್ಯ** = ಈ ಜಗತ್ತಿನ, **ಪಿತರಂ** = ತಂದೆಯಂತಿರುವ, ಬ್ರಹ್ಮನನ್ನು, **ಮೂರ್ಧನ್** = ಜಗತ್ತಿಗೆ ಶ್ರೇಷ್ಠನನ್ನಾಗಿಯೇ, **ಸುವೇ** = ಹಡೆಯುತ್ತೇನೆ, **ಮಮ** = ಇಷ್ಟು ಸಾಮರ್ಥ್ಯವಿರುವ ನನಗಾದರೂ, **ಯೋನಿ** = ಕಾರಣನು, **ಸಮುದ್ರೇ ಅಂತಃ** = ಸಮುದ್ರದ ಮಧ್ಯದಲ್ಲಿರುವ ನಾರಾಯಣನೇ ಆಗಿರುವನು, **ತತಃ** = ಆ ಭಗವಂತನಿಂದಲೇ, **ವಿಶ್ವಾ ಭುವನಾ** = ಸಮಸ್ತ ಲೋಕಗಳೂ ಸಹ, (ನನ್ನನ್ನೂ ಸೇರಿಸಿ) **ವಿತಿಷ್ಠೇ** = ವಿಶೇಷವಾಗಿ ಧರಿಸಲ್ಪಟ್ಟಿದೆ, **ಅಹಂ ಚ** = ನಾನಾದರೂ, **ಅನು** = ಅವನ ಅನಂತರದಲ್ಲಿ, **ಅಮೂಂ** = ಈ ಪೃಥಿವಿಯನ್ನು, **ದ್ಯಾಂ** = ದ್ಯುಲೋಕಾದಿಗಳನ್ನೂ, **ವರ್ಷ್ಮಣಾ** = ಕೇವಲ ದೇಹದಿಂದ ಮಾತ್ರ, **ಉಪಸ್ಪೃಶಾಮಿ** = ನಿಮಿತ್ತಳಾಗಿ ಮುಟ್ಟುತ್ತಾ ನಿಂತಿರುವೆನು. ಅವನೇ ಮುಖ್ಯವಾಗಿ ಸರ್ವಜಗತ್ಕರ್ತನಾಗಿರುವನು.
8. **ಅಹಂ** = ನಾನೇ, **ವಿಶ್ವಾ ಭುವನಾನಿ** = ಸಮಸ್ತಲೋಕಗಳನ್ನೇ, **ಆರಭಮಾಣಾ** = ಸೃಷ್ಟಿಸಲು, ರಕ್ಷಿಸಲು ನಾಶ ಮಾಡಲು, **ವಾತ ಇವ** = ಮುಖ್ಯಪ್ರಾಣನಂತೆ, **ಪ್ರವಾಮಿ** = ಭಗವಂತನ ಅನುಗ್ರಹದಿಂದ ಸುವಾಸಿತಗೊಳಿಸುತ್ತೇನೆ. ಭಗವಂತನಾದರೂ, **ಏನಾ** = ಈ, **ಪೃಥವ್ಯಾ** = ಪೃಥಿವ್ಯಭಿಮಾನಿನಿಯಾದ ಭೂರೂಪಕ್ಕಿಂತಲೂ, **ದಿವಾ** = ಅಂತರಿಕ್ಷ ಲೋಕಾಭಿಮಾನಿನಿಯಾದ ಶ್ರೀರೂಪಕ್ಕಿಂತಲೂ, **ಪರಃ** = ಉತ್ತಮನಾಗಿ ಸರ್ವೋತ್ತಮನೆನಿಸಿರುವನು. **ಅಹಂ ತು** = ನಾನಾದರೂ, **ಮಹಿನಾ** = ಅವನನುಗ್ರಹದಿಂದಲೇ, **ಏತಾವತೀ** = ಈ ಹಿಂದೆ ಹೇಳಿದ ರೀತಿಯಲ್ಲಿ, **ಮಹಿನಾ** = ಮಹಿಮೆಯಿಂದ, **ಏತಾವತೀ** = ಪರಿಮಿತವಾದ ಶಕ್ತಿಯನ್ನು, **ಸಂಬಭೂವ** = ಹೊಂದಿ, ಇಷ್ಟು ಸಾಮರ್ಥ್ಯವುಳ್ಳವನಾಗಿದ್ದೇನೆ ಎಂದ ಮೇಲೆ ಅಪರಿಮಿತ ಶಕ್ತಿಯುಳ್ಳ ಅವನ ಮಹಿಮೆಯನ್ನು ಹೇಳುವದೇನು? ಎಂದರ್ಥ.

## 21.ಮುಖ್ಯಪ್ರಾಣಾಭಿಷೇಕಃ :

(ಮುಖ್ಯಪ್ರಾಣ ಪ್ರತಿಮೆಗೆ ನಿರ್ಮಾಲ್ಯಾಭಿಷೇಕ)

**ಕಲಶಸ್ಥಶೇಷೋದಕೇನ ಮುಖ್ಯ ಪ್ರಾಣಾಭಿಷೇಕಂ ಕುರ್ಯಾತ್ ।**[12]

**ತಥಾ ಗರುಡಶೇಷ–ಬೃಂದಾವನಾನಾಂ ಅಭಿಷೇಕಂ ಕುರ್ಯಾತ್ ।**

---

**21. ಮುಖ್ಯಪ್ರಾಣಾಭಿಷೇಕ ಅರ್ಥ :**
**ಕಲಶಸ್ಥ** = ಕಲಶದಲ್ಲಿರುವ, **ಶೇಷೋದಕೇನ** = ದೇವರಿಗೆ ಅಭಿಷೇಕಿಸಿ ಉಳಿದಿರುವ ನೀರಿನಿಂದ, **ಮುಖ್ಯಪ್ರಾಣಾಭಿಷೇಕಂ** = ಮುಖ್ಯಪ್ರಾಣನ ಪ್ರತಿಮೆಗೆ ಅಭಿಷೇಕ ಮಾಡಬೇಕು. (ಆವಾಹಿಸುವಾಗ ಇವರೆಲ್ಲರೂ ಕಲಶದಲ್ಲಿ ಸನ್ನಿಹಿತರಾಗಿರುವವರೆಂದು ಅನುಸಂಧಾನ ಮಾಡಬೇಕು)

---

**12. ಮುಖ್ಯಪ್ರಾಣಾಭಿಷೇಕ:**
ಮುಖ್ಯ ಪ್ರಾಣನಿಗೆ ನಿರ್ಮಾಲ್ಯ ಅಭಿಷೇಕವು. ಮುಖ್ಯ ಪ್ರಾಣಾಭಿಷೇಕವನ್ನು ಮಾಡುವಾಗ ಬಳಿತ್ಥಾಸೂಕ್ತ, ವಾಯುಸ್ತುತಿಗಳಿಂದ ಮಾಡಬಹುದು. ನಂತರ ಗರುಡಶೇಷರಿಗೂ ನಿರ್ಮಾಲ್ಯಾಭಿಷೇಕ ಮಾಡಬೇಕು. ಬೃಂದಾವನಗಳಿದ್ದರೆ ಅವುಗಳಿಗೂ ಅಭಿಷೇಕಿಸಬೇಕು. ಸಾಲಿಗ್ರಾಮಗಳಿಗೆ ನಿರ್ಮಾಲ್ಯಾಭಿಷೇಕ-ವನ್ನು ಮಾಡಿ, ನಂತರ ಆ ಉಳಿದಿರುವ ಕಲಶೋದಕದಿಂದ ವಾಯುಸ್ತುತಿ ಮೊದಲಾದವುಗಳಿಂದ ಮುಖ್ಯಪ್ರಾಣನಿಗೂ, ಗರುಡ, ಶೇಷರಿಗೂ ಅಭಿಷೇಕಿಸಿ, ಗುರುಗಳ ಬೃಂದಾವನಗಳಿಗೂ ಅಭಿಷೇಕ ಮಾಡಬೇಕು. ಈ ನಿರ್ಮಾಲ್ಯ ತೀರ್ಥವನ್ನು ಎರಡು ಭಾಗ ಮಾಡಿ ಒಂದು ಭಾಗವನ್ನು "ಬ್ರಹ್ಮಯಜ್ಞ"ಕ್ಕಾಗಿ ತೆಗೆದಿಟ್ಟು, ಇನ್ನೊಂದು ಭಾಗವನ್ನು ಮುಖ್ಯಪ್ರಾಣಾದಿಗಳಿಗೆ ತಾರತಮ್ಯಾನುಸಾರವಾಗಿ ಕೊಡಬೇಕು. ಕಡೆಯಲ್ಲಿ ದೇಹಶುದ್ಧಿಗಾಗಿ ಪೂಜಕನೂ ಸ್ವೀಕರಿಸಬೇಕು. ಏಕಾದಶಿಯಂದು ಮಾತ್ರ ಒಂದೆ ಬಾರಿ ನಿರ್ಮಾಲ್ಯ ತೀರ್ಥಪ್ರಾಶನವು ಮೂರು ಬಾರಿಯಲ್ಲ.
ನಿರ್ಮಾಲ್ಯಾಭಿಷೇಕ ಮಾಡಿದ ಮೇಲೆ ತತ್ವನ್ಯಾಸ-ಮಾತೃಕಾನ್ಯಾಸಗಳನ್ನೂ ಮೂಲಮಂತ್ರಗಳನ್ನು ಜಪಿಸಿ ನಂತರ ಕಲಶಪೂಜಾದಿಗಳನ್ನು ಮಾಡುವುದು.

## 22. ಕಲಶಪೂಜಾ : [13] (ವಿವರಗಳಿಗೆ ಪರಿಶಿಷ್ಟ ನೋಡಿ)

**ಭಗವತ್ಪೂಜಾಂಗತ್ವೇನ ಕಲಶಾರಾಧನಂ ಕರಿಷ್ಯೇ ।**
**ಇತಿ ಸಂಕಲ್ಪ್ಯ ಕಲಶಂ ಗಂಧಾಕ್ಷತಾದಿಭಿಃ ಅಲಂಕೃತ್ಯ ।**
**ಶ್ರೀಬೀಜಂ ವಿಲಿಖ್ಯ । ಷಟ್ಕೋಣ ಪದ್ಮಂ ವಿಲಿಖ್ಯ ।**
**ತುಲಸೀದಲಾನಿ ನಿಕ್ಷಿಪ್ಯ । ಕಲಶಂ ಸ್ಪೃಷ್ಟ್ವಾ ।**
**ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ ।**
**ಮೂಲೇ ತತ್ರ ಸ್ಥಿತೋ ಬ್ರಹ್ಮ ಮಧ್ಯೇ ಮಾತೃಗಣಾಃ ಸ್ಮೃತಾಃ ॥ 1 ॥**

**ಕುಕ್ಷೌ ತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ ।**
**ಋಗ್ವೇದೋಽಥ ಯಜುರ್ವೇದಃ ಸಾಮವೇದೋ ಹ್ಯಥರ್ವಣಃ ॥ 2 ॥**

---

22. **ಕಲಶಪೂಜಾ ಅರ್ಥ : ಕಲಶಸ್ಯ ಮುಖೇ** = ಕಲಶದ ಮೇಲ್ಭಾಗದಲ್ಲಿ, **ವಿಷ್ಣುಃ** = ವಿಷ್ಣುವು, **ಕಂಠೇ** = ಕಂಠದಲ್ಲಿ, **ರುದ್ರಃ** = ರುದ್ರದೇವನು, **ಸಮಾಶ್ರಿತಃ** = ಸನ್ನಿಹಿತರಾಗಿ ಇದ್ದಾರೆ, **ತತ್ರ ಮೂಲೇ** = ಕಲಶದ ಬುಡದಲ್ಲಿ, **ಬ್ರಹ್ಮಾ** = ಚತುರ್ಮುಖನು, **ಸ್ಥಿತಃ** = ಇರುವನು, **ಮಧ್ಯೇ** = ಕಲಶದ ಹೊಟ್ಟೆಯಂತಿರುವ ಮಧ್ಯಭಾಗದಲ್ಲಿ, **ಮಾತೃಗಣಾ** = ಐವತ್ತೊಂದು ಮಾತೃಕೆಗಳ (ವರ್ಣಗಳ) ಅಭಿಮಾನಿಗಳು, **ಸ್ಮೃತಾಃ** = ಸನ್ನಿಹಿತರಾಗಿರುವರೆಂದು ಹೇಳಲ್ಪಟ್ಟಿದೆ ॥ 1 ॥
**ಕುಕ್ಷೌತು** = ಅದೇ ಹೊಟ್ಟೆಯ ಭಾಗದಲ್ಲಿ, **ಸರ್ವೇಸಾಗರಾಃ** = ಸಪ್ತಸಮುದ್ರಗಳು, **ಸಪ್ತದ್ವೀಪಾ** = ಜಂಬೂ, ಪಕ್ಷ, ಕುಶ, ಕ್ರೌಂಚ, ಶಾಲ್ಮಲೀ, ಶಾಕ, ಪುಷ್ಕರಗಳೆಂಬ ಏಳು ದ್ವೀಪಗಳ ಸಹಿತಳಾದ, **ವಸುಂಧರಾ** = ಭೂದೇವಿಯು, **ಸ್ಮೃತಾಃ, ಅಥ** = ಇವರಲ್ಲದೆ, **ಋಗ್ವೇದ** = ಋಗ್ವೇದಾಭಿಮಾನಿಯೂ, **ಯಜುರ್ವೇದಃ** = ಯಜುರ್ವೇದಾಭಿಮಾನಿಯು, **ಸಾಮವೇದಃ** = ಸಾಮವೇದಾಭಿಮಾನಿಯು, **ಅಥರ್ವಣಃ** = ಅಥರ್ವಣವೇದಾಭಿಮಾನಿಯೂ ಈ ನಾಲ್ಕು ವೇದಾಭಿಮಾನಿಗಳು, **ಚ** = ಮತ್ತು, **ಅಂಗೈಶ್ಚ** = ಶಿಕ್ಷಾ, ವ್ಯಾಕರಣ, ಛಂದಸ್ಸು ನಿರುಕ್ತ, ಜ್ಯೋತಿಷ, ಕಲ್ಪಗಳೆಂಬ ಷಡಂಗಾಭಿಮಾನಿಗಳು, **ಕಲಶಾಂಬು** = ಕಲಶದಲ್ಲಿರುವ ನೀರಿನಲ್ಲಿ, **ಸಮಾಶ್ರಿತಾ ಹಿ** = ಸನ್ನಿಹಿತರಾಗಿರುವರು ॥ 2 ॥

---

13. ಕಲಶಗಳು 7 ಉತ್ತಮಪಕ್ಷ. ಎರಡಾದರೂ ಸರಿ. ತಟ್ಟೆಯಲ್ಲಿಟ್ಟು. ಗಂಧಪುಷ್ಪಾಕ್ಷತೆಗಳನ್ನು ಹಚ್ಚಿ. ತುಲಸಿಯಿಂದ "ಶ್ರೀಂ" ಬೀಜ ಬರೆದು. ಕಲಶಗಳಲ್ಲಿ ಗಂಧೋದಕ –ತುಲಸಿ–ಪುಷ್ಪಗಳನ್ನು ಹಾಕಿ. ನಂತರ ಕಲಶದ ಮೇಲೆ ಹಸ್ತವನ್ನಿಟ್ಟುಕೊಂಡು ಬುಧ ಹಾಗೂ ವರುಣಾಂತರ್ಯಾಮಿ ಶ್ರೀ ಲಕ್ಷ್ಮೀನಾರಾಯಣರನ್ನು ಆವಾಹಿಸಬೇಕು (ವಿವರಣೆಗಾಗಿ ಪರಿಶಿಷ್ಟ ನೋಡಿ)

## 21.ಮುಖ್ಯಪ್ರಾಣಾಭಿಷೇಕಃ :

(ಮುಖ್ಯಪ್ರಾಣ ಪ್ರತಿಮೆಗೆ ನಿರ್ಮಾಲ್ಯಾಭಿಷೇಕ)

**ಕಲಶಸ್ಥಶೇಷೋದಕೇನ ಮುಖ್ಯ ಪ್ರಾಣಾಭಿಷೇಕಂ ಕುರ್ಯಾತ್ ।**[12]

**ತಥಾ ಗರುಡಶೇಷ-ಬೃಂದಾವನಾನಾಂ ಅಭಿಷೇಕಂ ಕುರ್ಯಾತ್ ।**

---

21. ಮುಖ್ಯಪ್ರಾಣಾಭಿಷೇಕ ಅರ್ಥ :
**ಕಲಶಸ್ಥ** = ಕಲಶದಲ್ಲಿರುವ, **ಶೇಷೋದಕೇನ** = ದೇವರಿಗೆ ಅಭಿಷೇಕಿಸಿ ಉಳಿದಿರುವ ನೀರಿನಿಂದ, **ಮುಖ್ಯಪ್ರಾಣಾಭಿಷೇಕಂ** = ಮುಖ್ಯಪ್ರಾಣನ ಪ್ರತಿಮೆಗೆ ಅಭಿಷೇಕ ಮಾಡಬೇಕು. (ಆವಾಹಿಸುವಾಗ ಇವರೆಲ್ಲರೂ ಕಲಶದಲ್ಲಿ ಸನ್ನಿಹಿತರಾಗಿರುವವರೆಂದು ಅನುಸಂಧಾನ ಮಾಡಬೇಕು)

---

12. **ಮುಖ್ಯಪ್ರಾಣಾಭಿಷೇಕ**:
ಮುಖ್ಯ ಪ್ರಾಣನಿಗೆ ನಿರ್ಮಾಲ್ಯ ಅಭಿಷೇಕವು. ಮುಖ್ಯ ಪ್ರಾಣಾಭಿಷೇಕವನ್ನು ಮಾಡುವಾಗ ಬಳಿತ್ಥಾಸೂಕ್ತ, ವಾಯುಸ್ತುತಿಗಳಿಂದ ಮಾಡಬಹುದು. ನಂತರ ಗರುಡಶೇಷರಿಗೂ ನಿರ್ಮಾಲ್ಯಾಭಿಷೇಕ ಮಾಡಬೇಕು. ಬೃಂದಾವನಗಳಿದ್ದರೆ ಅವುಗಳಿಗೂ ಅಭಿಷೇಕಿಸಬೇಕು. ಸಾಲಿಗ್ರಾಮಗಳಿಗೆ ನಿರ್ಮಾಲ್ಯಾಭಿಷೇಕ-ವನ್ನು ಮಾಡಿ, ನಂತರ ಆ ಉಳಿದಿರುವ ಕಲಶೋದಕದಿಂದ ವಾಯುಸ್ತುತಿ ಮೊದಲಾದವುಗಳಿಂದ ಮುಖ್ಯಪ್ರಾಣನಿಗೂ, ಗರುಡ, ಶೇಷರಿಗೂ ಅಭಿಷೇಕಿಸಿ, ಗುರುಗಳ ಬೃಂದಾವನಗಳಿಗೂ ಅಭಿಷೇಕ ಮಾಡಬೇಕು. ಈ ನಿರ್ಮಾಲ್ಯ ತೀರ್ಥವನ್ನು ಎರಡು ಭಾಗ ಮಾಡಿ ಒಂದು ಭಾಗವನ್ನು "ಬ್ರಹ್ಮಯಜ್ಞ"ಕ್ಕಾಗಿ ತೆಗೆದಿಟ್ಟು, ಇನ್ನೊಂದು ಭಾಗವನ್ನು ಮುಖ್ಯಪ್ರಾಣಾದಿಗಳಿಗೆ ತಾರತಮ್ಯಾನುಸಾರವಾಗಿ ಕೊಡಬೇಕು. ಕಡೆಯಲ್ಲಿ ದೇಹಶುದ್ಧಿಗಾಗಿ ಪೂಜಕನೂ ಸ್ವೀಕರಿಸಬೇಕು. ಏಕಾದಶಿಯಂದು ಮಾತ್ರ ಒಂದೆ ಬಾರಿ ನಿರ್ಮಾಲ್ಯ ತೀರ್ಥಪ್ರಾಶನವು ಮೂರು ಬಾರಿಯಲ್ಲ.
ನಿರ್ಮಾಲ್ಯಾಭಿಷೇಕ ಮಾಡಿದ ಮೇಲೆ ತತ್ತ್ವನ್ಯಾಸ-ಮಾತೃಕಾನ್ಯಾಸಗಳನ್ನೂ ಮೂಲಮಂತ್ರಗಳನ್ನು ಜಪಿಸಿ ನಂತರ ಕಲಶಪೂಜಾದಿಗಳನ್ನು ಮಾಡುವುದು.

## 22. ಕಲಶಪೂಜಾ : [13] (ವಿವರಗಳಿಗೆ ಪರಿಶಿಷ್ಟ ನೋಡಿ)

**ಭಗವತ್ಪೂಜಾಂಗತ್ವೇನ ಕಲಶಾರಾಧನಂ ಕರಿಷ್ಯೇ ।**
**ಇತಿ ಸಂಕಲ್ಪ್ಯ ಕಲಶಂ ಗಂಧಾಕ್ಷತಾದಿಭಿಃ ಅಲಂಕೃತ್ಯ ।**
**ಶ್ರೀಬೀಜಂ ವಿಲಿಖ್ಯ । ಷಟ್ಕೋಣ ಪದ್ಮಂ ವಿಲಿಖ್ಯ ।**
**ತುಲಸೀದಲಾನಿ ನಿಕ್ಷಿಪ್ಯ । ಕಲಶಂ ಸ್ಪೃಷ್ಟ್ವಾ ।**
**ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ ।**
**ಮೂಲೇ ತತ್ರ ಸ್ಥಿತೋ ಬ್ರಹ್ಮ ಮಧ್ಯೇ ಮಾತೃಗಣಾಃ ಸ್ಮೃತಾಃ ॥ 1 ॥**

**ಕುಕ್ಷೌ ತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ ।**
**ಋಗ್ವೇದೋಽಥ ಯಜುರ್ವೇದಃ ಸಾಮವೇದೋ ಹ್ಯಥರ್ವಣಃ ॥ 2 ॥**

---

22. **ಕಲಶಪೂಜಾ ಅರ್ಥ : ಕಲಶಸ್ಯ ಮುಖೇ** = ಕಲಶದ ಮೇಲ್ಭಾಗದಲ್ಲಿ, **ವಿಷ್ಣುಃ** = ವಿಷ್ಣುವು, **ಕಂಠೇ** = ಕಂಠದಲ್ಲಿ, **ರುದ್ರಃ** = ರುದ್ರದೇವನು, **ಸಮಾಶ್ರಿತಃ** = ಸನ್ನಿಹಿತರಾಗಿ ಇದ್ದಾರೆ, **ತತ್ರ ಮೂಲೇ** = ಕಲಶದ ಬುಡದಲ್ಲಿ, **ಬ್ರಹ್ಮಾ** = ಚತುರ್ಮುಖನು, **ಸ್ಥಿತಃ** = ಇರುವನು, **ಮಧ್ಯೇ** = ಕಲಶದ ಹೊಟ್ಟೆಯಂತಿರುವ ಮಧ್ಯಭಾಗದಲ್ಲಿ, **ಮಾತೃಗಣಾ** = ಐವತ್ತೊಂದು ಮಾತೃಕೆಗಳ (ವರ್ಣಗಳ) ಅಭಿಮಾನಿಗಳು, **ಸ್ಮೃತಾಃ** = ಸನ್ನಿಹಿತರಾಗಿರುವರೆಂದು ಹೇಳಲ್ಪಟ್ಟಿದೆ ॥ 1 ॥
**ಕುಕ್ಷೌತು** = ಅದೇ ಹೊಟ್ಟೆಯ ಭಾಗದಲ್ಲಿ, **ಸರ್ವೇಸಾಗರಾಃ** = ಸಪ್ತಸಮುದ್ರಗಳು, **ಸಪ್ತದ್ವೀಪಾ** = ಜಂಬೂ, ಪಕ್ಷ, ಕುಶ, ಕ್ರೌಂಚ, ಶಾಲ್ಮಲೀ, ಶಾಕ, ಪುಷ್ಕರಗಳೆಂಬ ಏಳು ದ್ವೀಪಗಳ ಸಹಿತಳಾದ, **ವಸುಂಧರಾ** = ಭೂದೇವಿಯು, **ಸ್ಮೃತಾಃ, ಅಥ** = ಇವರಲ್ಲದೆ, **ಋಗ್ವೇದ** = ಋಗ್ವೇದಾಭಿಮಾನಿಯೂ, **ಯಜುರ್ವೇದಃ** = ಯಜುರ್ವೇದಾಭಿಮಾನಿಯು, **ಸಾಮವೇದಃ** = ಸಾಮವೇದಾಭಿಮಾನಿಯು, **ಅಥರ್ವಣಃ** = ಅಥರ್ವಣವೇದಾಭಿಮಾನಿಯೂ ಈ ನಾಲ್ಕು ವೇದಾಭಿಮಾನಿಗಳು, **ಚ** = ಮತ್ತು, **ಅಂಗೈಶ್ಚ** = ಶಿಕ್ಷಾ, ವ್ಯಾಕರಣ, ಛಂದಸ್ಸು ನಿರುಕ್ತ, ಜ್ಯೋತಿಷ, ಕಲ್ಪಗಳೆಂಬ ಷಡಂಗಾಭಿಮಾನಿಗಳು, **ಕಲಶಾಂಬು** = ಕಲಶದಲ್ಲಿರುವ ನೀರಿನಲ್ಲಿ, **ಸಮಾಶ್ರಿತಾ ಹಿ** = ಸನ್ನಿಹಿತರಾಗಿರುವರು ॥ 2 ॥

---

13. ಕಲಶಗಳು 7 ಉತ್ತಮಪಕ್ಷ. ಎರಡಾದರೂ ಸರಿ. ತಟ್ಟೆಯಲ್ಲಿಟ್ಟು. ಗಂಧಪುಷ್ಪಾಕ್ಷತೆಗಳನ್ನು ಹಚ್ಚಿ. ತುಲಸಿಯಿಂದ "ಶ್ರೀಂ" ಬೀಜ ಬರೆದು. ಕಲಶಗಳಲ್ಲಿ ಗಂಧೋದಕ –ತುಲಸಿ–ಪುಷ್ಪಗಳನ್ನು ಹಾಕಿ. ನಂತರ ಕಲಶದ ಮೇಲೆ ಹಸ್ತವನ್ನಿಟ್ಟುಕೊಂಡು ಬುಧ ಹಾಗೂ ವರುಣಾಂತರ್ಯಾಮಿ ಶ್ರೀ ಲಕ್ಷ್ಮೀನಾರಾಯಣರನ್ನು ಆವಾಹಿಸಬೇಕು (ವಿವರಣೆಗಾಗಿ ಪರಿಶಿಷ್ಟ ನೋಡಿ)

ಅಂಗೈಶ್ಚ ಸಹಿತಾಸ್ಸರ್ವೇ ಕಲಶಾಂಬು ಸಮಾಶ್ರಿತಾಃ ।
ಅತ್ರ ಗಾಯತ್ರೀ ಸಾವಿತ್ರೀ ಶಾಂತಿಃ ಪುಷ್ಟೀಕರೀ ತಥಾ ।
ಆಯಾಂತು ದೇವಪೂಜಾರ್ಥಂ ಅಭಿಷೇಕಾರ್ಥಮಾದರಾತ್ ॥ 3 ॥

ಗಂಗೆ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ॥ 4 ॥

**ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಂ**

**ಸಚತಾ ಪರುಷ್ಣ್ಯಾ। ಅಸಿಕ್ನ್ಯಾ ಮರುಧ್ವೃಧೇ ವಿತಸ್ತಯಾಽಽ-**

**ರ್ಜೀಕೀಯೇ ಶೃಣುಹ್ಯಾ ಸುಷೋಮಯಾ ।** –ಋಗ್ವೇದ 10–65–5

ಕಲಶದೇವತಾಭ್ಯೋ ನಮಃ । ಗಂಧ ಪುಷ್ಪಾಕ್ಷತಾನಿ ಸಮರ್ಪಯಾಮಿ ॥

–ಬೃಹತ್ಕಲಶಂ ಸ್ಪೃಷ್ಟ್ವಾ

---

**ಅತ್ರ** = ಈ ಕಲಶದಲ್ಲಿ ಗಾಯತ್ರೀ, ಸಾವಿತ್ರೀ, ಶಾಂತಿ, **ಪುಷ್ಟೀಕರಿ** = ಗಾಯತ್ರೀ, ಸಾವಿತ್ರೀ, ಶಾಂತಿ, ಪುಷ್ಟಿ ದೇವತೆಗಳು, **ತಥಾ** = ಹಾಗೆಯೇ, ಸರಸ್ವತಿಯೂ, **ದೇವಪೂಜಾರ್ಥಂ** = ಭಗವಂತನ ಪೂಜೆಗಾಗಿಯೂ, **ಅಭಿಷೇಕಾರ್ಥಂ** = ಅಭಿಷೇಕಕ್ಕೂ, **ಆದರಾತ್** = ಭಗವಂತನ ಮೇಲಿನ ಭಕ್ತಿಯಿಂದ, **ಆಯಾಂತು** = ಇಲ್ಲಿ ಸನ್ನಿಹಿತರಾಗಲೀ ॥ 3 ॥

ಹೇ ಗಂಗೇ, ಹೇ ಯಮುನೇ, ಹೇ ಗೋದಾವರಿ, ಹೇ ಸರಸ್ವತಿ, ಹೇ ನರ್ಮದೇ, ಹೇ ಸಿಂಧು, ಹೇ ಕಾವೇರಿ, **ಅಸ್ಮಿನ್** = ಈ ಕಲಶ ಜಲದಲ್ಲಿ, **ಸನ್ನಿಧಿಂ ಕುರುಂ** = ಸನ್ನಿಹಿತರಾಗಿರಿ (ಕುರುತ) ॥ 4 ॥

**ಹೇ ಗಂಗೇ** = ಗಂಗೆಯೇ, ಹೇ ಯಮುನೆ, ಹೇ ಸರಸ್ವತಿ, ಹೇ ಶುತುದ್ರಿಯೇ, **ಅಸಿಕ್ನಯಾ** = ಅಸಿಕ್ನೀ ನದಿಯಿಂದ, **ಪರುಷ್ಣಿಯಾ**= ಪರುಷ್ಣೀ ನದಿಯಿಂದ ಕೂಡಿರುವ, **ಮರುದ್ವೃಧೇ** = ಮರುದ್ವೃಧಾ ನದಿಯೇ ಅಥವಾ ಅಸಿಕ್ನಿಯಾ, **ಪರುಷ್ಣಿಯಾ** = ತುಂಗೆ ಹಾಗೂ ಭದ್ರಾ ನದಿಯಿಂದ ಕೂಡಿರುವ ಕೃಷ್ಣಾ ನದಿಯೇ, ಮರುದ್ವದೇ ಕಾವೇರಿ ನದಿಯೇ, **ಹೇ ಆರ್ಜೀಕೀಯೇ** = ಆರ್ಜೀಕಾ ನದಿಯೇ, **ವಿತಸ್ತಯಾ** = ವಿತಸ್ತಾ ನದಿಯಿಂದ ಕೂಡಿದ, **ಸುಷೋಮಯಾ** = ಸೋಮಲತೆಯನ್ನು ಬೆಳೆಸುವ ಗುಣವುಳ್ಳ ಸಿಂಧೂನದಿಯೇ, **ಮೇ** = ಈ ನನ್ನ, **ಸ್ತೋಮಂ** = ಸ್ತೋತ್ರವನ್ನು, **ಆ ಶೃಣುಹಿ**=ಕೇಳಿರಿ ಹಾಗೂ, **ಸಚತ**=ಭಗವಂತನ ಅಭಿಷೇಕಕ್ಕೆ ಅನುಕೂಲರಾಗಿರಿ.

ನಿರ್ವಿಷೀಕರಣಾರ್ಥಮ್ – ತಾರ್ಕ್ಷ್ಯಮುದ್ರಾಂ ಪ್ರದರ್ಶಯಾಮಿ ।



ಅಮೃತೀಕರಣಾರ್ಥಮ್ – ಧೇನುಮುದ್ರಾಂ ಪ್ರದರ್ಶಯಾಮಿ ।



ಪವಿತ್ರೀಕರಣಾರ್ಥಮ್ – ಶಂಖಮುದ್ರಾಂ ಪ್ರದರ್ಶಯಾಮಿ ।



ದಿಗ್ಬಂಧನಾರ್ಥಂ – ಗದಾಮುದ್ರಾಂ ಪ್ರದರ್ಶಯಾಮಿ ।



ಸಂರಕ್ಷಣಾರ್ಥಂ – ಚಕ್ರಮುದ್ರಾಂ ಪ್ರದರ್ಶಯಾಮಿ ।



ಅಂಗೈಶ್ಚ ಸಹಿತಾಸ್ಸರ್ವೇ ಕಲಶಾಂಬು ಸಮಾಶ್ರಿತಾಃ ।
ಅತ್ರ ಗಾಯತ್ರೀ ಸಾವಿತ್ರೀ ಶಾಂತಿಃ ಪುಷ್ಟೀಕರೀ ತಥಾ ।
ಆಯಾಂತು ದೇವಪೂಜಾರ್ಥಂ ಅಭಿಷೇಕಾರ್ಥಮಾದರಾತ್ ॥ 3 ॥

ಗಂಗೆ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ॥ 4 ॥

**ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಂ ಸಚತಾ ಪರುಷ್ಣ್ಯಾ। ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾಽಽ- ರ್ಜೀಕೀಯೇ ಶೃಣುಹ್ಯಾ ಸುಷೋಮಯಾ ।** –ಋಗ್ವೇದ 10–65–5

ಕಲಶದೇವತಾಭ್ಯೋ ನಮಃ । ಗಂಧ ಪುಷ್ಪಾಕ್ಷತಾನಿ ಸಮರ್ಪಯಾಮಿ ॥

–ಬೃಹತ್ಕಲಶಂ ಸ್ಪೃಷ್ಟ್ವಾ

---

**ಅತ್ರ** = ಈ ಕಲಶದಲ್ಲಿ ಗಾಯತ್ರೀ, ಸಾವಿತ್ರೀ, ಶಾಂತಿ, **ಪುಷ್ಟೀಕರಿ** = ಗಾಯತ್ರೀ, ಸಾವಿತ್ರೀ, ಶಾಂತಿ, ಪುಷ್ಟಿ ದೇವತೆಗಳು, **ತಥಾ** = ಹಾಗೆಯೇ, ಸರಸ್ವತಿಯೂ, **ದೇವಪೂಜಾರ್ಥಂ** = ಭಗವಂತನ ಪೂಜೆಗಾಗಿಯೂ, **ಅಭಿಷೇಕಾರ್ಥಂ** = ಅಭಿಷೇಕಕ್ಕೂ, **ಆದರಾತ್** = ಭಗವಂತನ ಮೇಲಿನ ಭಕ್ತಿಯಿಂದ, **ಆಯಾಂತು** = ಇಲ್ಲಿ ಸನ್ನಿಹಿತರಾಗಲೀ ॥ 3 ॥

ಹೇ ಗಂಗೇ, ಹೇ ಯಮುನೇ, ಹೇ ಗೋದಾವರಿ, ಹೇ ಸರಸ್ವತಿ, ಹೇ ನರ್ಮದೇ, ಹೇ ಸಿಂಧು, ಹೇ ಕಾವೇರಿ, **ಅಸ್ಮಿನ್** = ಈ ಕಲಶ ಜಲದಲ್ಲಿ, **ಸನ್ನಿಧಿಂ ಕುರುಂ** = ಸನ್ನಿಹಿತರಾಗಿರಿ (ಕುರುತ) ॥ 4 ॥

**ಹೇ ಗಂಗೇ** = ಗಂಗೆಯೇ, ಹೇ ಯಮುನೆ, ಹೇ ಸರಸ್ವತಿ, ಹೇ ಶುತುದ್ರಿಯೇ, **ಅಸಿಕ್ನಯಾ** = ಅಸಿಕ್ನೀ ನದಿಯಿಂದ, **ಪರುಷ್ಣಿಯಾ**= ಪರುಷ್ಣೀ ನದಿಯಿಂದ ಕೂಡಿರುವ, **ಮರುದ್ವೃಧೇ** = ಮರುದ್ವೃಧಾ ನದಿಯೇ ಅಥವಾ ಅಸಿಕ್ನಿಯಾ, **ಪರುಷ್ಣಿಯಾ** = ತುಂಗೆ ಹಾಗೂ ಭದ್ರಾ ನದಿಯಿಂದ ಕೂಡಿರುವ ಕೃಷ್ಣಾ ನದಿಯೇ, ಮರುದ್ವೃದೇ ಕಾವೇರಿ ನದಿಯೇ, **ಹೇ ಆರ್ಜೀಕೀಯೇ** = ಆರ್ಜೀಕಾ ನದಿಯೇ, **ವಿತಸ್ತಯಾ** = ವಿತಸ್ತಾ ನದಿಯಿಂದ ಕೂಡಿದ, **ಸುಷೋಮಯಾ** = ಸೋಮಲತೆಯನ್ನು ಬೆಳೆಸುವ ಗುಣವುಳ್ಳ ಸಿಂಧೂನದಿಯೇ, **ಮೇ** = ಈ ನನ್ನ, **ಸ್ತೋಮಂ** = ಸ್ತೋತ್ರವನ್ನು, ಆ **ಶೃಣುಹಿ**=ಕೇಳಿರಿ ಹಾಗೂ, **ಸಚತ**=ಭಗವಂತನ ಅಭಿಷೇಕಕ್ಕೆ ಅನುಕೂಲರಾಗಿರಿ.

ನಿರ್ವಿಷೀಕರಣಾರ್ಥಮ್ – ತಾರ್ಕ್ಷ್ಯಮುದ್ರಾಂ ಪ್ರದರ್ಶಯಾಮಿ ।



ಅಮೃತೀಕರಣಾರ್ಥಮ್ – ಧೇನುಮುದ್ರಾಂ ಪ್ರದರ್ಶಯಾಮಿ ।



ಪವಿತ್ರೀಕರಣಾರ್ಥಮ್ – ಶಂಖಮುದ್ರಾಂ ಪ್ರದರ್ಶಯಾಮಿ ।



ದಿಗ್ಬಂಧನಾರ್ಥಂ – ಗದಾಮುದ್ರಾಂ ಪ್ರದರ್ಶಯಾಮಿ ।



ಸಂರಕ್ಷಣಾರ್ಥಂ – ಚಕ್ರಮುದ್ರಾಂ ಪ್ರದರ್ಶಯಾಮಿ ।



**ಜಲಸಂಶೋಧನಾರ್ಥಂ – ಪದ್ಮಮುದ್ರಾಂ ಪ್ರದರ್ಶಯಾಮಿ।**



**ಕಲಶಗಳನ್ನು ಮುಟ್ಟಿಕೊಂಡು ಓಂ ಓಂ ನಮೋ ನಾರಾಯಣಾಯ ಓಂ** ಎಂದು 12 ಬಾರಿ ಜಪಿಸಿ,

**ಏಕ ಪಂಚಾಶದ್ ವರ್ಣಾನಾಂ ಚತುರ್ವಿಂಶತಿ ಮೂರ್ತಯಃ।**

**ಆತ್ಮಾದ್ಯಾಃ ವಾಸುದೇವಾದ್ಯಾಃ ವಿಶ್ವಾದ್ಯಾಃ ಮತ್ಸ್ಯಕಚ್ಛಪೌ ॥**

**ಕೋಲೋ ನೃಸಿಂಹಸ್ಸಬಟುರ್ಜಾಮದಗ್ನ್ಯರಘೂದ್ವಹೌ।**

**ವಾಸಿಷ್ಠಯಾದವೌ ಕೃಷ್ಣೌ ಆತ್ರೇಯೋ ಬುದ್ಧ ಕಲ್ಕಿನೌ ॥**

**ಶಿಂಶುಮಾರಶ್ಚೇತಿ ಶತಂ ಕಲಾಃ ಕಲಶದೇವತಾಃ।**

**ಏತಾಭಿಃ ಸಹಿತಂ ಮೂಲಮೂರ್ತಿಮಾವಾಹಯೇದ್ ಸುಧೀಃ ॥**

---

**ಏಕಪಂಚಾಶದ್ ವರ್ಣಾನಾಂ** = ಅಕಾರಾದಿ ಕ್ಷಕಾರದವರೆಗೆ ವರ್ಣ ಪ್ರತಿಪಾದ್ಯವಾದ 51 ಮೂರ್ತಿಗಳನ್ನು, ಚತುರ್ವಿಂಶತಿ, **ಮೂರ್ತಯಃ** = ಕೇಶವಾದಿ 24 ರೂಪಗಳನ್ನು, **ಆತ್ಮಾದ್ಯಾಃ** = ಆತ್ಮಾಂತರಾತ್ಮ ಪರಮಾತ್ಮ, ಜ್ಞಾನಾತ್ಮನೆಂಬ ನಾಲ್ಕು ರೂಪಗಳನ್ನು, **ವಾಸುದೇವಾದ್ಯಾಃ** = ವಾಸುದೇವ, ಸಂಕರ್ಷಣ, ಪ್ರದ್ಯುಮ್ನ–ಅನಿರುದ್ಧ ಎಂಬ ನಾಲ್ಕು ಮೂರ್ತಿಗಳನ್ನು, **ವಿಶ್ವಾದ್ಯಾಃ** = ವಿಶ್ವ–ತೈಜಸ–ಪ್ರಾಜ್ಞ–ತುರೀಯಗಳೆಂಬ ನಾಲ್ಕು ರೂಪಗಳನ್ನು, **ಮತ್ಸ್ಯಕಚ್ಛಪೌ** = ಮತ್ಸ್ಯ ಹಾಗೂ ಕೂರ್ಮ, ರೂಪಗಳು,

**ಕೋಲಃ** = ವರಾಹನು, **ನೃಸಿಂಹಃ** = ನರಸಿಂಹ ರೂಪವು, **ವಟುಃ** = ವಾಮನನು, **ಜಾಮದಗ್ನಿ** = ಪರಶುರಾಮನು, **ರಘೂದ್ವಹೌ** = ಸೀತಾರಾಮನು, ವಾಸಿಷ್ಠಯಾದವೌ, **ಕೃಷ್ಣೌ** = ವಸಿಷ್ಠರ ಮರಿಮಗನಾದ ವೇದವ್ಯಾಸ ದೇವರು, ಯಾದವರಾಗಿ ಜನಿಸಿದ ಶ್ರೀಕೃಷ್ಣನೆಂಬ ಎರಡು ಕೃಷ್ಣಗಳು, **ಆತ್ರೇಯಃ** = ಅತ್ರಿಪುತ್ರ ದತ್ತಾತ್ರೇಯನು, **ಬುದ್ಧ ಕಲ್ಕಿನೌ** = ಬುದ್ಧ ಹಾಗೂ ಕಲ್ಕಿ ರೂಪಗಳು,

**ಶಿಂಶುಮಾರಶ್ಚ** = ಚೇಳಿನಾಕಾರವುಳ್ಳ ಭಗವಂತನು, **ಇತಿ** = ಈ ರೀತಿಯಾಗಿ, **ಶತಂ ಕಲಾಃ** = ನೂರು ರೂಪಗಳಿಂದ ಕೂಡಿದ, **ಕಲಶನಾಮಕಾಃ** = ನೀರಿನಲ್ಲಿ

**ಅಜಾದಿಶಿಂಶುಮಾರಾಂತಮೂರ್ತಿಭ್ಯೋ ನಮಃ । ಓಂ ನಮೋ ನಾರಾಯಣಾಯ। ಭಗವನ್ ಆಗಚ್ಛಾಗಚ್ಛ । ಸಶ್ರೀಕಂ ಸಪರಿವಾರಂ, ಅಜಾದಿ ಶತಕಲಾಸಹಿತಂ ಶ್ರೀಲಕ್ಷ್ಮೀನಾರಾಯಣಂ ಬೃಹತ್ಕಲಶೇ ಆವಾಹಯಾಮಿ ॥**

## 23. ಪೂರ್ಣಕುಂಭದಲ್ಲಿ ಪೂಜೆ :

**ವ್ಯುತ್ಕ್ರಮೇ ಶಿಂಶುಮಾರಶ್ಚ ಕಲ್ಕೀ ಬುದ್ಧಸ್ತತಃ ಪರಂ ।**
**ಆತ್ರೇಯೋ ವ್ಯಾಸಕೃಷ್ಣಾಶ್ಚ ರಾಘವೋ ಭಾರ್ಗವಸ್ತಥಾ ॥ 1 ॥**

---

ಶೋಭಿಸುವುದರಿಂದ ಕಲಶವೆಂದೇ ಹೆಸರುಳ್ಳ (**ಕೇ** = ಜಲೇ, ಲಸಂತೀತಿ ಕಲಶಾಃ) **ಕಲಶದೇವತಾಃ** = ಕಲಶದೇವತೆಗಳು, **ಘಟೆ** = ಕಲಶದಲ್ಲಿ, **ಸುಧೀಃ** = ಪೂಜಾತತ್ವಜ್ಞಾನಿಯು, **ಆವಾಹಯೇತ್** = ಆವಾಹಿಸಬೇಕು.

ಅಜಾದಿ ಶಿಂಶುಮಾರನವರೆಗಿರುವ ಮೂರ್ತಿಗಳಿಗೆ ನಮಸ್ಕಾರವು. **ಭಗವನ್** = ಭಗವಂತನೇ, **ಆಗಚ್ಛ ಆಗಚ್ಛ** = ಬೇಗ ಬರುವವನಾಗು, **ಸಶ್ರೀಕಂ** = ಲಕ್ಷ್ಮಿಯಿಂದ ಸಹಿತನಾದ, **ಸಪರಿವಾರಂ** = ಪರಿವಾರ ದೇವತೆಗಳಿಂದ ಯುಕ್ತನಾದ, ಅಜಾದಿ ನೂರು ರೂಪಗಳಿಂದ ಕೂಡಿರುವ **ಶ್ರೀಲಕ್ಷ್ಮೀನಾರಾಯಣಂ** = ಶ್ರೀ ಲಕ್ಷ್ಮೀನಾರಾಯಣನನ್ನು, **ಬೃಹತ್ ಕಲಶೇ** = ದೊಡ್ಡ ಕಲಶದಲ್ಲಿ, **ಆವಾಹಯಾಮಿ** = ಆವಾಹಿಸುತ್ತೇನೆ.

---

23. **ಪೂರ್ಣ ಕುಂಭದಲ್ಲಿ ಪೂಜೆ : ವ್ಯುತ್ಕ್ರಮೇ** = ಹಿಂದೆ ಆವಾಹಿಸಿದ ವಿಪರೀತ ಕ್ರಮದಿಂದ ಆವಾಹಿಸುವುದಾದರೆ, ಶಿಂಶುಮಾರನು, ಕಲ್ಕಿಯು, ಬುದ್ಧನನ್ನು ಆವಾಹಿಸಿ, **ತತಃ ಪರಂ** = ಈ ರೂಪಗಳ ನಂತರ, **ಆತ್ರೇಯಃ** = ಅತ್ರಿಪುತ್ರನಾದ ದತ್ತಾತ್ರೇಯನನ್ನು, **ವ್ಯಾಸ ಕೃಷ್ಣಾಶ್ಚ** = ವೇದವ್ಯಾಸ, ಶ್ರೀಕೃಷ್ಣರನ್ನು, ರಾಘವ ಹಾಗೂ ಪರಶುರಾಮನನ್ನು, ವಾಮನ, ನಾರಸಿಂಹ, ವರಾಹ, ಕೂರ್ಮ, ಮತ್ಸ್ಯ, ತುರ್ಯ ರೂಪಗಳನ್ನು ಆವಾಹಿಸಿದ ನಂತರ, ಅನಿರುದ್ಧಾದಿ ರೂಪಗಳನ್ನು ಪೂರ್ಣಕುಂಭದಲ್ಲಿ ಆವಾಹಿಸಬೇಕು.

**ಪೂರ್ಣ ಕುಂಭ ಪೂಜಾಕ್ರಮ** : ಅಜಾದಿ ಏಕ ಪಂಚಾಷದ್ ದೇವತೆಗಳಿಗೆ ನಮಸ್ಕಾರ, ಕೇಶವಾದಿ 24 ರೂಪಗಳಿಗೆ ನಮಸ್ಕಾರವು, ಆತ್ಮ, ಅಂತರಾತ್ಮಾದಿ ನಾಲ್ಕು ರೂಪಗಳಿಗೆ ನಮಸ್ಕಾರವು. ವಾಸುದೇವಾದಿ ನಾಲ್ಕು ರೂಪಗಳಿಗೂ ನಮಸ್ಕಾರವು. ವಿಶ್ವತೈಜಸ ಪ್ರಾಜ್ಞ – ತುರೀಯಗಳೆಂಬ ನಾಲ್ಕು ರೂಪಗಳಿಗೆ ನಮಸ್ಕಾರ. ಮತ್ಸ್ಯ ಮೊದಲಾದ ದಶಾವತಾರಗಳಿಗೆ ನಮಸ್ಕಾರವು.

ವಾಮನೋ ನಾರಸಿಂಹಶ್ಚ ವರಾಹಃ ಕೂರ್ಮ ಏವ ಚ ।
ಮತ್ಸ್ಯಸ್ತುರ್ಯಾದಯಃ ಪಶ್ಚಾತ್ ಅನಿರುದ್ಧಾದಯಸ್ತತಃ ॥ 2 ॥

ಅಜಾದಿ ಏಕಪಂಚಾಶತ್ ದೇವತಾಭ್ಯೋ ನಮಃ ।
ಕೇಶವಾದಿ ಚತುರ್ವಿಂಶತಿ ದೇವತಾಭ್ಯೋ ನಮಃ
ಆತ್ಮಾದಿ ಚತುರ್ಮೂರ್ತಯೇ ನಮಃ ।
ವಾಸುದೇವಾದಿ ಚತುರ್ಮೂರ್ತಯೇ ನಮಃ ।
ವಿಶ್ವಾದಿ ಚತುರ್ಮೂರ್ತಯೇ ನಮಃ ।
ಮತ್ಸ್ಯಾದಿ ದಶಮೂರ್ತಯೇ ನಮಃ ।
ದತ್ತಾತ್ರೇಯಾಯ ನಮಃ । ವೇದವ್ಯಾಸಾಯ ನಮಃ ।
ಶಿಂಶುಮಾರಾಯ ನಮಃ ।

ಜ್ಞಾನಾತ್ಮಾದ್ಯಾಃ ಕೃಷ್ಣಪೂರ್ವಾಃ ದೇವತಾಃ ಕೇಶವಾಂತಿಮಾಃ ।
ನೃಸಿಂಹಾ ಅಜಾಂತಾಶ್ಚ ಶತಂ ಕಲಶ ದೇವತಾಃ ।
ಏತಾಭಿಃ ಸಹಿತಾಂ ಮೂಲಮೂರ್ತಿಂ ಕುಂಭೋದಕೇ ಸುಧೀಃ ।

ಸ್ನಾನೀಯ ಕಲಶೇ, ಕುಂಭೋದಕೇ ಭಾಗೀರಥ್ಯಾದಿ ತೀರ್ಥಾಭಿಮಾನಿ ದೇವತಾಃ ಆವಾಹಯಾಮಿ । ಆವಾಹಿತ ದೇವತಾಭ್ಯೋ ನಮಃ ಧ್ಯಾಯಾಮಿ । ಧ್ಯಾನಂ ಆವಾಹಯಾಮಿ ಆವಾಹನಂ ಸ ಪಾದಯೋಃ ಪಾದ್ಯಂ । ಆಚಮನೀಯಂ । ಮಧುಪರ್ಕಂ । ಪುನರಾಚಮನಂ । ಸ್ನಾನಂ । ವಸ್ತ್ರಂ । ಉಪವೀತಂ । ವಿಭೂಷಣಂ । ಆಸನಂ । ಗಂಧಂ। ಧೂಪಂ । ದೀಪಂ । ನೈವೇದ್ಯಂ । ಪುನರ್ಧೂಪದೀಪೌ । ನೀರಾಜನಂ। ಸರ್ವೋಪಚಾರಪೂಜಾಃ ಸಮರ್ಪಯಾಮಿ ।

---

ದತ್ತಾತ್ರೇಯನಿಗೆ ನಮಸ್ಕಾರ, ವೇದವ್ಯಾಸರಿಗೆ ನಮಸ್ಕಾರ, ಶಿಂಶುಮಾರನಿಗೆ ನಮಸ್ಕಾರವು. ಕಲಶದೇವತೆಗಳಾಗಿರುವ ಈ ನೂರು ಭಗವದ್ರೂಪಗಳಿಗೆ ನಮಸ್ಕಾರವು ತುಲಸೀದಲ ಹಾಕಿ, ಧ್ಯಾನಾದಿ ಷೋಡಶೋಪಚಾರ ಪೂಜೆಯನ್ನು ಅರ್ಪಿಸುತ್ತೇನೆ. ಭಗವಂತನೇ, ಈ ಪೂರ್ಣಕುಂಭಕ್ಕೆ ಬಾ ಎಂದು ಆಹ್ವಾನಿಸುತ್ತೇನೆ.

## 24. ಕಲಶಪ್ರಾರ್ಥನಾ :

1. ಕಲಶಃ ಕೀರ್ತಿಮಾಯುಷ್ಯಂ ಪ್ರಜ್ಞಾಂ ಮೇಧಾಂ ಶ್ರಿಯಂ ಬಲಂ।
ಯೋಗ್ಯತಾಂ ಪಾಪಹಾನಿಂ ಚ ಪುಣ್ಯವೃದ್ಧಿಂ ಚ ಸಾಧಯೇತ್ ॥

2. ಸರ್ವಕ್ಷೇತ್ರಮಯೋ ಯಸ್ಮಾತ್ ಸರ್ವತೀರ್ಥಮಯೋ ಯತಃ।
ಅತೋ ಹರಿಪ್ರಿಯೋऽಸಿ ತ್ವಂ ಪೂರ್ಣಕುಂಭ ನಮೋऽಸ್ತು ತೇ ॥

ಅನೇನ ಕಲಶಪೂಜಾಕರಣೇನ ಭಾರತೀರಮಣಮುಖ್ಯ-ಪ್ರಾಣಾಂತರ್ಗತಃ ಅಜಾದಿ ಶತಕಲಾಸಹಿತಃ ಶ್ರೀಲಕ್ಷ್ಮೀನಾರಾಯಣಃ ಪ್ರೀತೋಭವತು । ಶ್ರೀಕೃಷ್ಣಾರ್ಪಣಮಸ್ತು (ಕಲಶಪೂಜಾ ಸಮಾಪ್ತಾ).

---

24. ಕಲಶಪ್ರಾರ್ಥನಾ ಅರ್ಥ :

1. **ಕಲಶಂ** = ದೊಡ್ಡದಾದ ಬೃಹತ್ಕಲಶವು, **ಕೀರ್ತಿಂ** = ಕೀರ್ತಿಯನ್ನು, **ಆಯುಷ್ಯಂ** = ಆಯುಷ್ಯವನ್ನು, **ಪ್ರಜ್ಞಾಂ** = ಉತ್ತಮ ಜ್ಞಾನವನ್ನು, **ಮೇಧಾಂ** = ಧಾರಣಾ ಶಕ್ತಿಯನ್ನು, **ಶ್ರಿಯಂ** = ದೇಹಕಾಂತಿಯನ್ನು, **ಭಗಂ** = ಐಶ್ವರ್ಯವನ್ನು, **ಯೋಗ್ಯತಾಂ** = ಹರಿಯನ್ನು ಪೂಜಿಸುವ ಅರ್ಹತೆಯನ್ನು, **ಪಾಪಹಾನಿಂ** = ಪಾಪ ಪರಿಹಾರವನ್ನು, **ಪುಣ್ಯವೃದ್ಧಿಂ** = ಪುಣ್ಯಾಭಿವೃದ್ಧಿಯನ್ನು ಕೊಡುತ್ತದೆ.
2. **ಯಸ್ಮಾತ್** = ಯಾವ ಕಾರಣದಿಂದ, **ಸರ್ವಕ್ಷೇತ್ರಮಯಃ** = ಸರ್ವಕ್ಷೇತ್ರಾಭಿ-ಮಾನಿಗಳು ಸನ್ನಿಹಿತರಾಗಿರುವರೋ, **ಯತಃ** = ಯಾವ ಕಾರಣದಿಂದ, **ಸರ್ವತೀರ್ಥಮಯಃ** = ಸಮಸ್ತ ತೀರ್ಥಾಭಿಮಾನಿಗಳು, ಸನ್ನಿಹಿತರಾಗಿ-ರುವರೋ, **ಅತಃ** = ಆ ಕಾರಣದಿಂದಲೇ, **ಪೂರ್ಣಕುಂಭ** = ಪೂರ್ಣ-ಕುಂಭವೇ, **ತ್ವಂ** = ನೀನು, **ಹರಿಪ್ರಿಯೋऽಸಿ** = ಹರಿಪ್ರಿಯನಾಗಿರುವೆ, **ತೇ** = ನಿನಗೆ, **ನಮಃ ಅಸ್ತು** = ನಮ್ಮ ನಮಸ್ಕಾರವು.

**ಅನೇನ** = ಈ, **ಕಲಶಪೂಜಾಕರಣೇನ** = ಕಲಶಪೂಜೆಯ ಮಾಡುವಿಕೆಯಿಂದ, ಭಾರತೀರಮಣ ಮುಖ್ಯಪ್ರಾಣಾಂತರ್ಗತನಾದ, ಅಜಾದಿ ನೂರು ಕಲೆಗಳಿಂದ ಕೂಡಿದ ನಾರಾಯಣನು ಪ್ರೀತನಾಗಲಿ.

**25. ಶಂಖ ಪೂಜಾ :** (ಶಂಖದ ಬಗ್ಗೆ ವಿಶೇಷ ಪರಿಶಿಷ್ಟದಲ್ಲಿ)[14]

ಓಂ ಸಹಸ್ರಾರ ಹುಂ ಫಟ್ । ಇತಿ ಶಂಖ ಪ್ರಕ್ಷಾಲ್ಯಪ್ರಾರ್ಥಯೇತ್
(ಶಂಖ ತೊಳೆದು ಪ್ರಾರ್ಥಿಸುವುದು)

ತ್ವಂ ಪುರಾ ಸಾಗರೋತ್ಪನ್ನೋ ವಿಷ್ಣುನಾ ವಿಧೃತಃ ಕರೇ ।
ನಮಿತಃ ಸರ್ವದೇವೈಶ್ಚ ಪಾಂಚಜನ್ಯ ನಮೋಽಸ್ತು ತೇ ॥ 1 ॥

ಗರ್ಭಾ ದೇವಾರಿ ನಾರೀಣಾಂ ವಿಶೀರ್ಯಂತೇ ಸಹಸ್ರಧಾ ।
ತವ ನಾದೇನ ಪಾತಾಲೇ ಪಾಂಚಜನ್ಯ ನಮೋಽಸ್ತು ತೇ ॥ 2 ॥

ದರ್ಶನೇನ ಹಿ ಶಂಖಸ್ಯ ಕಿಂ ಪುನಃ ಸ್ಪರ್ಶನೇನ ಚ ।
ವಿಲಯಂ ಯಾಂತಿ ಪಾಪಾನಿ ತಮಃ ಸೂರ್ಯೋದಯೇ ಯಥಾ ॥ 3 ॥

---

25. **ಶಂಖ ಅಥವಾ ಪೂಜಾ ಅರ್ಥ :**

**ಪಾಂಚಜನ್ಯ** = ಪಾಂಚಜನ್ಯವೆಂಬ ಶಂಖವೇ, **ತ್ವಂ** = ನೀನು, **ಪುರಾ** = ಹಿಂದೆ, **ಸಾಗರೋತ್ಪನ್ನಃ** = ಸಮುದ್ರದಲ್ಲಿ ಉತ್ಪನ್ನವಾಗಿರುವೆ, **ವಿಷ್ಣುನಾ** = ನಾರಾಯಣನಿಂದ, **ಕರೇ** = ತನ್ನ ಹಸ್ತದಲ್ಲಿ, **ವಿಧೃತ** = ವಿಶೇಷವಾಗಿ ಧರಿಸಲ್ಪಟ್ಟಿರುವೆ, **ಸರ್ವದೇವೈಶ್ಚ** = ಸಮಸ್ತ ದೇವತೆಗಳಿಂದಲೂ, **ನಮಿತಃ** = ನಮಿಸಲ್ಪಟ್ಟಿರುವೆ, **ತೇ** = ಅಂತಹ ನಿನಗೆ, **ನಮೋಽಸ್ತು** = ನಮಸ್ಕಾರವು ॥ 1 ॥

**ಪಾಂಚಜನ್ಯ** = ಶಂಖವೇ, **ತವ** = ನಿನ್ನ, **ನಾದೇನ** = ಶಬ್ಧ ಮಾತ್ರದಿಂದ, **ಪಾತಾಲೇ** = ಪಾತಾಳದಲ್ಲಿರುವ, **ದೇವಾರಿನಾರೀಣಾಂ** = ದೇವತೆಗಳ ಶತ್ರುಗಳಾದ ದೈತ್ಯರ ಹೆಂಡಂದಿರ, **ಗರ್ಭಾಃ** = ಗರ್ಭಗಳು, **ಸಹಸ್ರಧಾ** = ಸಾವಿರ ಭಾಗಗಳಾಗಿ, **ವಿಶೀರ್ಯಂತೇ** = ಸೀಳಿ ಹೋಗುತ್ತವೆ, **ತೇ** = ಇಂತಹ ಸಾಮರ್ಥ್ಯವುಳ್ಳ, ನಿನಗೆ, **ನಮೋಽಸ್ತು** = ನಮಸ್ಕಾರವಿರಲಿ ॥ 2 ॥

**ಶಂಖಸ್ಯ** = ಶಂಖದ, **ದರ್ಶನೇನ** = ಕೇವಲ ನೋಡುವುದರಿಂದಲೇ, **ಪಾಪಾನಿ** = ಪಾಪಗಳು, **ಸೂರ್ಯೋದಯೇ** = ಸೂರ್ಯನು ಉದಯವಾಗುತ್ತಿರಲು, **ತಮಃ**

---

14. ಕಲಶೋದಕದಿಂದ ಶಂಖವನ್ನು ತುಂಬಿಸಿ, ತುಲಸೀದಲ ಹಾಕಿ, 'ತ್ವಂ ಪುರಾ' ಇತ್ಯಾದಿ ಮಂತ್ರ ಹೇಳಿ ಚಕ್ರಮುದ್ರೆ, ಧೇನುಮುದ್ರೆ, ಶಂಖಮುದ್ರೆ ಹಿಂದೆ ಮಧ್ಯೆ-ಅಗ್ರ ಭಾಗಗಳಲ್ಲಿ ತೋರಿಸಿ, ಶಂಖ ಗಾಯತ್ರೀಯನ್ನು ಮೂರುಬಾರಿ ಪಠಿಸಿ, ಷೋಡಶೋಪಚಾರ ಪೂಜೆ ಮಾಡಿ, 'ಓಂ ನಮೋ ನಾರಾಯಣಾಯ' ಎಂದು ಎಂಟು ಬಾರಿ ಪಠಿಸಿ ತುಲಸಿಯಿಂದ ಪೂಜೋಪಕರಣಗಳನ್ನು ತನ್ನನ್ನೂ ಪ್ರೋಕ್ಷಿಸಿಕೊಳ್ಳಬೇಕು.

**ನತ್ವಾ ಶಂಖಂ ಕರೇ ಧೃತ್ವಾ ಮಂತ್ರೇಣಾನೇನ ವೈಷ್ಣವಃ ।**
**ಯಃ ಸ್ನಾಪಯತಿ ಗೋವಿಂದಂ ತಸ್ಯ ಪುಣ್ಯ ಮನಂತಕಮ್ ॥ 4 ॥**

**ಶಂಖ ಪಾರ್ಥನೆ :**

**ಶಂಖಂ ಚಂದ್ರಾರ್ಕದೈವತ್ಯಂ ಮಧ್ಯೇ ವರುಣದೈವತಂ ।**
**ಪೃಷ್ಠೇ ಪ್ರಜಾಪತಿರ್ವೇದಾಃ ಅಗ್ರೇ ಗಂಗಾ ಸರಸ್ವತೀ ॥**

**ತ್ರೈಲೋಕ್ಯೇ ಯಾನಿ ತೀರ್ಥಾನಿ ವಾಸುದೇವಸ್ಯ ಚಾಜ್ಞಯಾ ।**
**ಶಂಖೇ ತಿಷ್ಠಂತಿ ವಿಪ್ರೇಂದ್ರ ತಸ್ಮಾಚ್ಛಂಖಂ ಪ್ರಪೂಜಯೇತ್ ॥**

---

= ಕತ್ತಲೆಯು, **ಯಥಾ** = ಹೇಗೆ, **ಪಾಪಾನಿ** = ಪಾಪಗಳು, **ವಿಲಯಂ ಯಾಂತಿ** = ನಾಶ ಹೊಂದುವುದೋ (**ತಥಾ** = ಹಾಗೆ) **ವಿಲಯಂ ಯಾಂತಿ** = ನಾಶ ಹೊಂದುವವು, **ಸ್ಪರ್ಶನೇನ ಕಿಂ ಪುನಃ** = ಸ್ಪರ್ಶ ಮಾಡಿದರೆ ಹೇಳುವುದೇನು ॥3॥

**ಶಂಖಂ** = ಶಂಖವನ್ನು, **ನತ್ವಾ** = ಭಕ್ತಿಯಿಂದ ನಮಿಸಿ, **ಕರೇ ಧೃತ್ವಾ** = ಕೈಯಲ್ಲಿ ಧರಿಸಿ, **ಅನೇನ ಮಂತ್ರೇಣ** = ಶಂಖಗಾಯತ್ರೀ ಮಂತ್ರದಿಂದ ಅಭಿಮಂತ್ರಿಸಿ, **ಯಃ** = ಯಾವ, **ವೈಷ್ಣವಃ** = ವಿಷ್ಣುಭಕ್ತನು, **ಗೋವಿಂದಂ** = ಗೋವಿಂದನನ್ನು, **ಸ್ನಾಪಯತಿ** = ಶಂಖದ ಮೂಲಕ ಅಭಿಷೇಕ ಮಾಡುನೋ, **ತಸ್ಯ** = ಅವನಿಗೆ, **ಅನಂತಕಂ** = ಅನಂತಪಟ್ಟು, **ಪುಣ್ಯಂ** = ಪುಣ್ಯವುಂಟಾಗುತ್ತದೆ ॥ 4 ॥

**ಶಂಖ ಪ್ರಾರ್ಥನೆ ಅರ್ಥ :**

**ಶಂಖಂ** = ಇಡೀ ಶಂಖದಲ್ಲಿ, **ಚಂದ್ರಾರ್ಕ ದೈವತ್ಯಂ** = ಚಂದ್ರ ಸೂರ್ಯರೇ ದೇವತೆಗಳಾಗಿರುವರು, **ಮಧ್ಯೆ** = ಶಂಖದ ಮಧ್ಯದಲ್ಲಿ, **ವರುಣದೈವತಂ** = ವರುಣನು ದೇವತೆಯು, **ಪೃಷ್ಠೇ** = ಶಂಖದ ಹಿಂಭಾಗದಲ್ಲಿ, **ಪ್ರಜಾಪತಿಃ** = ಬ್ರಹ್ಮದೇವನು ದೇವತೆಯಾಗಿರುವನು.

**ಅಗ್ರೇ** =ಶಂಖದ ತುದಿಯಲ್ಲಿ, **ಗಂಗಾಸರಸ್ವತೀ** = ಗಂಗಾ ಸರಸ್ವತಿಯರಿರುವರು, **ವಿಪ್ರೇಂದ್ರ** = ವಿಪ್ರೋತ್ತಮನಾದ ವಾಸುದೇವನೇ, (ಸ್ಕಾಂದದಲ್ಲಿರುವ ಬ್ರಾಹ್ಮಣನ ಹೆಸರು), **ತ್ರೈಲೋಕ್ಯೆ** = ಮೂರು ಲೋಕಗಳಲ್ಲಿ, **ಯಾನಿ ತೀರ್ಥಾನಿ** = ಯಾವ ಯಾವ ತೀರ್ಥಗಳಿವೆಯೋ, ಅವು, **ವಾಸುದೇವಸ್ಯ** = ವಾಸುದೇವನ, **ಆಜ್ಞಯಾ** = ಆದೇಶದಿಂದ, **ಶಂಖೇ** = ಶಂಖದಲ್ಲಿ, **ತಿಷ್ಠಂತಿ** = ಇರುತ್ತವೆ. **ತಸ್ಮಾತ್** = ಆದ್ದರಿಂದಲೇ, **ಶಂಖಂ** = ಶಂಖವನ್ನು, **ಪ್ರಪೂಜಯೇತ್** = ಭಕ್ತ್ಯಾದರಗಳಿಂದ ಪೂಜಿಸಬೇಕು.

## 26. ಮುದ್ರಾಪ್ರದರ್ಶನಂ :

ನಿರ್ವಿಷೀಕರಣಾರ್ಥಂ ತಾರ್ಕ್ಷ್ಯ ಮುದ್ರಾಂ ಪ್ರದರ್ಶಯಾಮಿ



ಅಮೃತೀಕರಣಾರ್ಥಂ ಧೇನು ಮುದ್ರಾಂ ಪ್ರದರ್ಶಯಾಮಿ



ಪವಿತ್ರೀಕರಣಾರ್ಥಂ  ಶಂಖ ಮುದ್ರಾಂ ಪ್ರದರ್ಶಯಾಮಿ



ಸಂರಕ್ಷಣಾರ್ಥಂ ಚಕ್ರ ಮುದ್ರಾಂ ಪ್ರದರ್ಶಯಾಮಿ



ದಿಗ್ಬಂಧನಾರ್ಥಂ ಗದಾ ಮುದ್ರಾಂ ಪ್ರದರ್ಶಯಾಮಿ



ಜಲಶೋಧನಾರ್ಥಂ ಪದ್ಮ ಮುದ್ರಾಂ ಪ್ರದರ್ಶಯಾಮಿ



ಓಂ ನಮೋ ನಾರಾಯಣಾಯ ಓಂ ಇತಿ ಷಡ್ವಾರಂ ಜಪ್ತ್ವಾ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ ।

ಆವಾಹಯಾಮಿ ಆವಾಹನಂ ಸಮರ್ಪಯಾಮಿ । ಪಾದಯೋಃ ಪಾದ್ಯಂ ಸಮರ್ಪಯಾಮಿ । ಹಸ್ತಯೋಃ ಅರ್ಘ್ಯಂ ಸಮರ್ಪಯಾಮಿ । ಮಧುಪರ್ಕಂ ಸಮರ್ಪಯಾಮಿ । ಆಚಮನಂ ಸಮರ್ಪಯಾಮಿ । ಗಂಧಂ ಧಾರಯಾಮಿ ಪುಷ್ಪಂ ಸಮರ್ಪಯಾಮಿ । ದೀಪಂ ದರ್ಶಯಾಮಿ । ಧೂಪಂ ಆಘ್ರಾಪಯಾಮಿ । ನೈವೇದ್ಯಂ ಸಮರ್ಪಯಾಮಿ । ನೀರಾಜನಂ ಸಮರ್ಪಯಾಮಿ । ನಮಸ್ಕಾರಾನ್ ಸಮರ್ಪಯಾಮಿ ।

**ಶಂಖ ಗಾಯತ್ರೀ –**

**ಪಾಂಚಜನ್ಯಾಯ ವಿದ್ಮಹೇ ಪಾವಮಾನಾಯ ಧೀಮಹಿ।**

**ತನ್ನಃ ಶಂಖಃ ಪ್ರಚೋದಯಾತ್ ॥** (ಹೀಗೆ 3 ಬಾರಿ ಜಪಿಸಿ)

---

**ಶಂಖಗಾಯತ್ರಿಯ ಅರ್ಥ :** **ಪಾಂಚಜನ್ಯಾಯ** = ಪಾಂಚಜನ್ಯನೆಂಬ ಹೆಸರಿನ ಶಂಖದ ಮಹಿಮೆಯನ್ನು, **ವಿದ್ಮಹೇ** = ತಿಳಿಯುತ್ತೇವೆ. **ಪಾವಮಾನಾಯ** = ಪವಿತ್ರಗೊಳಿಸುತ್ತದೆ ಎಂದು **ಧೀಮಹಿ** = ಧ್ಯಾನ ಮಾಡುವೆವು, **ತತ್** = ಆ ವ್ಯಾಪ್ತ ಪರಮಾತ್ಮನ ವಿಶೇಷ ಸನ್ನಿಧಾನವುಳ್ಳ, ಶಂಖವು, **ನಃ** = ನಮ್ಮನ್ನು, **ಪ್ರಚೋದಯಾತ್** = ಭಗವಂತನನ್ನು ಹೊಂದುವಂತೆ ಪ್ರೇರೇಪಿಸಲಿ.

**ತುಲಸೀದಲೇನ** = ತುಲಸೀದಲದಿಂದ, **ಶಂಖೋದಕಂ** = ಶಂಖಪೂಜೆ ಮಾಡಿದ ಪವಿತ್ರ ಜಲವನ್ನು, **"ಅಪವಿತ್ರಃ ಪವಿತ್ರೋ ವಾ"** ಇತ್ಯಾದಿ ಮಂತ್ರಗಳಿಂದ, **ಪ್ರತಿಮಾ** = ಪ್ರತಿಮೆಗಳನ್ನು, **ದೇವಂ** = ಸಾಲಿಗ್ರಾಮವನ್ನು, **ಪೂಜಾಸಾಧನಾನಿ** = ಪೂಜಾಸಾಮಗ್ರಿಗಳನ್ನೂ ಕೂಡ, **ತ್ರಿಃ** = ಮೂರು ಬಾರಿ, **ಪ್ರೋಕ್ಷಯೇತ್** = ಪ್ರೋಕ್ಷಿಸಬೇಕು.

**ಅಪವಿತ್ರ ಪವಿತ್ರೋ ವಾ ಇತ್ಯಾದಿ ಮಂತ್ರೇಣ, ತುಲಸಿದಳೇನ ಶಂಖೋದಕಂ, ಪ್ರತಿಮಾಃ ದೇವಂ, ಪೂಜಾಸಾಧನಾನಿ ಚ ತ್ರೀಃ ಪ್ರೋಕ್ಷಯೇತ್ ।**

(ಮೂರು ಬಾರಿ ಶಂಖೋದಕವನ್ನು ಪೂಜೋಪಕರಣಗಳ ಮೇಲೆ, ತನ್ನನ್ನು ಪ್ರೋಕ್ಷಿಸಿಕೊಳ್ಳುವುದು.)

**ಅನೇನ ಶಂಖಪೂಜನೇನ ಶ್ರೀ. ಭಾ.ಮು. ಶ್ರೀ ಲಕ್ಷ್ಮೀನಾರಾಯಣಃ ಪ್ರೀಯತಾಮ್ ಶ್ರೀಕೃಷ್ಣಾರ್ಪಣಮಸ್ತು ।**

## 27. ಪಂಚಪಾತ್ರ ಪೂಜಾ :[15]

**ಅರ್ಘ್ಯಂ ವಾಯುಪದೇ ಪ್ರೋಕ್ತಂ ನೈರ್ಋತ್ಯಾಂ ಪಾದ್ಯಮೇವ ಚ ।**
**ಈಶೇ ತ್ವಾಚಮನೀಯಂ ಸ್ಯಾತ್ ಸ್ನಾನೀಯಂ ಚಾಗ್ನಿಕೋಣಕೇ ॥**

**ಮಧ್ಯೇ ತು ಮಧುಪರ್ಕಂ ಚ ಪುನರಾಚಮನೀಯಕಮ್ ॥**

27. **ಪಂಚಾಮೃತ ದ್ರವ್ಯ ಪೂಜಾ ಅರ್ಥ : ಅರ್ಘ್ಯಂ** = ಅರ್ಘ್ಯ ಪಾತ್ರೆಯನ್ನು, **ವಾಯುಪದೇ** = ವಾಯುವ್ಯ ದಿಕ್ಕಿನಲ್ಲಿಯೂ, **ಪಾದ್ಯಂ** = ಪಾದ್ಯದ ಪಾತ್ರೆಯನ್ನು, **ನೈರುತ್ಯಾಂ** = ನೈರುತ್ಯ ದಿಕ್ಕಿನಲ್ಲಿಯೂ, **ಆಚಮನೀಯಂ ತು** = ಆಚಮನೀಯ ಪಾತ್ರೆಯನ್ನು, **ಈಶೇ** = ಈಶಾನ್ಯ ದಿಕ್ಕಿನಲ್ಲಿಯೂ, **ಸ್ನಾನೀಯಂ** = ಸ್ನಾನೀಯ ಪಾತ್ರೆಯನ್ನು, **ಅಗ್ನಿಕೋಣಕೇ** = ಆಗ್ನೇಯ ದಿಕ್ಕಿನಲ್ಲಿಯೂ, **ಮಧುಪರ್ಕಂ ತು** = ಮಧುಪರ್ಕ ಪಾತ್ರೆಯನ್ನು, **ಪುನರಾಚಮನೀಯಕಂ** = ಪುನರಾಚಮನೀಯ ಪಾತ್ರೆಯನ್ನು, **ಮಧ್ಯೆ** = ಈ ನಾಲ್ಕು ದಿಕ್ಕಿನ ಮಧ್ಯದಲ್ಲಿ ಇಡಬೇಕು ಎಂದು, **ಪ್ರೋಕ್ತಮ್** = ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ.

15. **ಪಂಚಪಾತ್ರಾಣಿ ಆಸಾದಯೇತ್** ಎಂಬ ಟೀಕೋಕ್ತಿಯಂತೆ ಐದು ಪಾತ್ರೆಗಳನ್ನಿಟ್ಟಿರಬೇಕು. ಅರ್ಘ್ಯ, ಪಾದ್ಯ, ಆಚಮನೀಯ, ಸ್ನಾನೀಯ ಪಾತ್ರೆ ಇದರ ಮಧ್ಯೇ ಎರಡು ಶುದ್ಧನೀರಿನಿಂದ ತುಂಬಿಸಿ, ಅವುಗಳಲ್ಲಿ ಒಂದು ಮಧುಪರ್ಕಕ್ಕಾಗಿಯೂ, ಪುನರಾಚಮನಕ್ಕಾಗಿ ಎಂದು ತಿಳಿಯುವುದು. ಈ ಪಾತ್ರೆಗಳಲ್ಲಿ **ಓಂ ನಮೋ ನಾರಾಯಣಾಯ** ಎಂದು ಮೂಲಮಂತ್ರ ಪಠಿಸಿ ಗಂಧ, ತುಲಸೀ, ಪುಷ್ಪಗಳನ್ನು ಹಾಕುವುದು. ಪಂಚೋಪಚಾರಕ್ಕಾಗಿ ಪಂಚ ಪಾತ್ರೆಗಳನ್ನು ಇಟ್ಟು ಪೂಜಿಸುವುದು. ಪಂಚಪಾತ್ರೆಗಳು ಇಲ್ಲದಿದ್ದರೆ ಒಂದು ಪಾತ್ರೆಯನ್ನಾದರೂ ಇಟ್ಟು ಪೂಜಿಸಿ ಅರ್ಘ್ಯ ಪಾದ್ಯಾದಿಗಳಿಗೆ ಉಪಯೋಗಿಸಬಹುದು.

## 28. ಪಂಚಾಮೃತ ದೇವತಾವಾಹನಮ್ :

ಅರ್ಘ್ಯೇ–ಲಕ್ಷ್ಮೀಂ, ತದಂತರ್ಗತಂ ವಾಸುದೇವಂ ಆವಾಹಯಾಮಿ ।

ಪಾದ್ಯೇ –ಸರಸ್ವತೀಂ, ತದಂತರ್ಗತಂ ಸಂಕರ್ಷಣಂ ಆವಾಹಯಾಮಿ ।

ಆಚಮನೀಯೇ–ರತಿಂ, ತದಂತರ್ಗತಂ ಪ್ರದ್ಯುಮ್ನಂ ಆವಾಹಯಾಮಿ।

ಮಧುಪರ್ಕೇ– ಪಿತಾಮಹಂ ತದಂತರ್ಗತಂ ಅನಿರುದ್ಧಂ ಆವಾಹಯಾಮಿ ।

ಸ್ನಾನೀಯಪಾತ್ರೇ – ವರುಣಂ ತದಂತರ್ಗಂತಂ ನಾರಾಯಣಂ ಆವಾಹಯಾಮಿ ।

ಪುನರಾಚಮನೀಯೇ – ಶಾಂತಿಂ ತದಂತರ್ಗತಂ ಅನಿರುದ್ಧಂ ಆವಾಹಯಾಮಿ ।

---

28. **ಪಂಚಪಾತ್ರಾ ದೇವತಾವಾಹನದ ಅರ್ಥ** : ಅರ್ಘ್ಯ ಪಾತ್ರೆಯಲ್ಲಿ, ಲಕ್ಷ್ಮಿಯನ್ನು, ಅವಳಂತರ್ಯಾಮಿಯಾದ ವಾಸುದೇವನನ್ನು ಆವಾಹಿಸುತ್ತೇನೆ. ಉಳಿದವುಗಳಿಗೆ ಹೀಗೆ ಅರ್ಥ ತಿಳಿಯುವುದು. **ಪಾದ್ಯೇ** = ಪಾದಕ್ಕೆ ನೀಡುವ ಜಲದಲ್ಲಿ, **ಸರಸ್ವತೀಂ** = ಸರಸ್ವತಿಯನ್ನು, ತದಂತರ್ಗನಾದ ಸಂಕರ್ಷಣನನ್ನು, ಆವಾಹಿಸುತ್ತೇನೆ.

**ಆಚಮನೀಯೇ** = ಆಚಮನಕ್ಕಾಗಿ ಇಟ್ಟಿರುವ ನೀರಿನಲ್ಲಿ, **ರತಿಂ**= ರತಿಯನ್ನು ತದಂತರ್ಯಾಮಿಯಾದ ಪ್ರದ್ಯುಮ್ನನನ್ನು ಆವಾಹಿಸುತ್ತೇನೆ. **ಮಧುಪರ್ಕೇ** = ಮೊಸರು, ತುಪ್ಪ ಜೇನುಗಳ ಮಿಶ್ರಣವಾದ ಮಧುಪರ್ಕದಲ್ಲಿ, ಪಿತಾಮಹ ಬ್ರಹ್ಮದೇವನನ್ನು, ತದಂತರ್ಗತ ಅನಿರುದ್ಧನನ್ನು, ಆವಾಹಿಸುತ್ತೇನೆ.

**ಸ್ನಾನೀಯ ಪಾತ್ರೇ** = ಸ್ನಾನಕ್ಕಾಗಿ ಇಟ್ಟಿರುವ ಸ್ನಾನೀಯ ಕಲಶದಲ್ಲಿ, ವರುಣ = ವರುಣದೇವನನ್ನು ಅವನಂತರ್ಯಾಮಿ ನಾರಾಯಣನನ್ನು ಆವಾಹಿಸುತ್ತೇನೆ, **ಪುನರಾಚಮನೀಯೇ** = ಮಧುಪರ್ಕಾ ನಂತರ ನೀಡುವ ಆಚಮನೀಯದ ಜಲದಲ್ಲಿ, **ಶಾಂತಿಂ** = ಶಾಂತಿದೇವಿಯನ್ನು, ತದಂತರ್ಯಾಮಿಯಾದ ಅನಿರುದ್ಧನನ್ನು ಆವಾಹಿಸುತ್ತೇನೆ.

## 29. ಪಂಚಾಮೃತ ದ್ರವ್ಯ ಪೂಜಾ :

(ಪಂಚಾಮೃತದಲ್ಲಿರುವ ಭಗವಂತನ ಪೂಜೆ)

**ಶ್ರೀವಿಷ್ಣು ಪೂಜಾಂಗತ್ವೇನ ಪಂಚಾಮೃತ ದ್ರವ್ಯ ಪೂಜಾಂ ಕರಿಷ್ಯೇ ।**

**ಕ್ಷೀರೇ ಗೋವಿಂದಾಯ ನಮಃ । ಗೋವಿಂದಮಾವಾಹಯಾಮಿ ।**

**ದಧ್ನಿ ದಧಿವಾಮನಾಯ ನಮಃ । ದಧಿವಾಮನಮಾವಾಹಯಾಮಿ ।**

**ಆಜ್ಯೇ ವಿಷ್ಣವೇ ನಮಃ । ವಿಷ್ಣುಮಾವಾಹಯಾಮಿ ।**

**ಮಧುನಿ ಮಧುಸೂದನಾಯ ನಮಃ ।**

**ಮಧುಸೂದನಮಾವಾಹಯಾಮಿ ।**

**ಶರ್ಕರಾಯಾಮಚ್ಯುತಾಯ ನಮಃ । ಅಚ್ಯುತಮಾವಾಹಯಾಮಿ ।**

**ಫಲೇಷು ಬಾಲಕೃಷ್ಣಾಯ ನಮಃ । ಬಾಲಕೃಷ್ಣಮಾವಾಹಯಾಮಿ ।**

**ಇಕ್ಷುರಸೇ ಅನಿರುದ್ಧಾಯ ನಮಃ । ಅನಿರುದ್ಧಮಾವಾಹಯಾಮಿ ।**

**ಓಂ ನಮೋ ನಾರಾಯಣಾಯ ಓಂ ।** (ಇತಿ ಜಪಿತ್ವಾ)

**ಪಂಚಾಮೃತ ದೇವತಾಭ್ಯೋ ನಮಃ । ತುಲಸೀದಲಂ ಸಮರ್ಪ್ಯ । ಆವಾಹನಾದಿ ಷೋಡಶೋಪಚಾರ ಪೂಜಾಂ ಕುರ್ಯಾತ್ ।**

## 30. ಪೀಠಪೂಜಾ : (ವಿಸ್ತೃತ ಪೀಠಪೂಜಾ)

ಚಕ್ರಾಬ್ಜ ಮಂಡಲೇ ಪೀಠಪೂಜಾಂ ಗುರ್ವನುಜ್ಞಾರ್ಥಂ **ಗುರುಪೂಜಾಂ ಕರಿಷ್ಯೇ** (ಇತಿ ಸಂಕಲ್ಪ್ಯ)

---

**30. ಪೀಠಪೂಜಾ (ವಿಸ್ತೃತ ಪೀಠಪೂಜಾ) :**

**ಚಕ್ರಾಬ್ಜಮಂಡಲೇ** = ಚಕ್ರಾಬ್ಜಮಂಡಲದಲ್ಲಿ, **ಪೀಠಪೂಜಾಂ** = ಪೀಠ-ಪೂಜೆಯನ್ನು ಮಾಡಲು, **ಗುರ್ವನುಜ್ಞಾರ್ಥಂ** = ಗುರುಗಳನ್ನುಜ್ಞೆಗಾಗಿ, **ಗುರುಪೂಜಾಂ ಕರಿಷ್ಯೇ** = ಗುರುಪೂಜೆ ಮಾಡುತ್ತೇನೆ, **ಇತಿ ಸಂಕಲ್ಪ್ಯ** = ಹೀಗೆ ಸಂಕಲ್ಪ ಮಾಡಿ.

**ಪೀಠ ಮಧ್ಯೇ–**

ಪರದೇವತಾಯೈ (ಶ್ರೀಲಕ್ಷ್ಮೀನಾರಾಯಣಾಭ್ಯಾಂ) ನಮಃ ।

ವಾಮೇ ಶ್ರೀ ಗುರುಭ್ಯೋ (ಪ್ರಧಾನವಾಯವೇ) ನಮಃ) ।

ದಕ್ಷಿಣೇ ಸರ್ವದೇವತಾಭ್ಯೋ (ಬ್ರಹ್ಮರುದ್ರಾದಿಭ್ಯೋ) ನಮಃ ।

ಪುನರ್ವಾಮೇ ಸರ್ವಗುರುಭ್ಯೋ (ಸನಕಾದಿಭ್ಯೋ) ನಮಃ ।

ಏತೈರನುಜ್ಞಾತಃ ಪೀಠಪೂಜಾಂ ಕರಿಷ್ಯೇ ।

**ಪೀಠ ಅಧೋಭಾಗೇ – ಆಗ್ನೇಯಾದಿ ಕೋಣೇಷು**

ಆಗ್ನೇಯೆ ಗಂ ಗರುಡಾಯ ನಮಃ ।

ನೈರ್ಋತ್ಯೇ ವ್ಯಾಂ ವೇದವ್ಯಾಸಾಯ ನಮಃ ।

ವಾಯವ್ಯೇ ದುಂ ದುರ್ಗಾಯೈ ನಮಃ ।

ಐಶಾನ್ಯೇ ಸಂ ಸರಸ್ವತ್ಯೈ ನಮಃ । ಏತಾಃ ಪೀಠಪಾದದೇವತಾಃ ।

---

**ಪೀಠಮಧ್ಯೇ** = ಪೀಠದ ಮಧ್ಯಭಾಗದಲ್ಲಿ, **ಪರದೇವತಾಯೈ** = ಉತ್ಕೃಷ್ಟದೇವತೆ–ಯಾಗಿರುವ, **ಶ್ರೀಲಕ್ಷ್ಮೀನಾರಾಯಣಾಯ ನಮಃ** = ಶ್ರೀ ಲಕ್ಷ್ಮೀನಾರಾಯಣನಿಗೆ ನಮಸ್ಕಾರವು, **ವಾಮೇ** = ಪೀಠದ ಎಡಭಾಗದಲ್ಲಿ (ಪೂಜಕನಿಗೆ ಬಲಭಾಗ) **ಗುರವೇ ವಾಯವೇ ನಮಃ** = ಜ್ಞಾನಾದಾತೃಗಳಾದ ವಾಯುದೇವರಿಗೆ ನಮನ, **ದಕ್ಷಿಣೇ** = ಪೀಠದ ಬಲಭಾಗದಲ್ಲಿ (ಪೂಜಕನಿಗೆ ಎಡಭಾಗ) **ಸರ್ವದೇವತಾಭ್ಯೋ, ಬ್ರಹ್ಮರುದ್ರಾದಿಭ್ಯೋ ನಮಃ** = ದೇವತೆಗಳಿಗೆ ನಮಸ್ಕಾರವು, **ಪುನಃ** = ಎಡಭಾಗದಲ್ಲಿ, **ಸರ್ವಗುರೂನ್** = ಸನಕಸನಂದನಾದಿ ಸಮಸ್ತ ಗುರುಗಳಿಗೂ, **ನಮಃ** = ನಮಸ್ಕಾರವು, **ಏತೈಃ** = ಇವರಿಂದ, **ಅನುಜ್ಞಾತಃ** = ಅನುಜ್ಞೆ ಹೊಂದಿದವನಾಗಿ, **ಪೀಠಪೂಜಾಂ** = ಪೀಠಪೂಜೆಯನ್ನು, **ಕರಿಷ್ಯೇ** = ಮಾಡುತ್ತೇನೆ.

*__ಆಗ್ನೇಯ__ = ಆಗ್ನೇಯ ದಿಕ್ಕಿನಲ್ಲಿ, **ಗರುಡಾಯ ನಮಃ** = ಗರುಡನಿಗೆ ನಮಸ್ಕಾರ, **ನೈಋತ್ಯೆ** = ನೈರುತ್ಯದಲ್ಲಿರುವ, **ವೇದವ್ಯಾಸಾಯ ನಮಃ** = ವೇದವ್ಯಾಸರಿಗೆ ನಮಸ್ಕಾರ, **ವಾಯವ್ಯೆಃ** =ವಾಯುವ್ಯದಲ್ಲಿ, **ದುರ್ಗಾಯೈ ನಮಃ** = ದುರ್ಗೆಗೆ ನಮನ, **ಐಶಾನ್ಯೆ** = ಈಶಾನ್ಯದಲ್ಲಿ, **ಸರಸ್ವತ್ಯೈ ನಮಃ** = ಸರಸ್ವತಿಗೆ ನಮಸ್ಕಾರ.

---

* ದೇವರಿಗೂ, ದೇವರ ಪೂಜಕನಿಗೂ ಮಧ್ಯಭಾಗವು ಎಂದರೆ, ದೇವರ ಮುಖದ ಮುಂಭಾಗವು ಪೂರ್ವ ದಿಕ್ಕೆಂದು ತಿಳಿಯುವುದು. ಅಲ್ಲಿಂದ ಆಗ್ನೇಯ ಮುಂತಾದ ಎಂಟು ದಿಕ್ಕುಗಳೆಂದು ತಿಳಿಯುವುದು. ಪೀಠದ ಕಾಲುಗಳ ಕೆಳಭಾಗದಲ್ಲಿ ಆಗ್ನೇಯ, ನೈಋತ್ಯ–ವಾಯುವ್ಯ, ಈಶಾನ್ಯ ಎಂಬ ನಾಲ್ಕು ವಿದಿಕ್ಕುಗಳಲ್ಲಿ ಕ್ರಮವಾಗಿ ಧರ್ಮಾದಿಗಳ ಪೂಜೆ.

**ಪೀಠಪಾದೋರ್ಧ್ವಭಾಗೇ –**

**ಧರ್ಮಾಧಿಪತಯೇ ಯಮಾಯ ನಮಃ।**

**ಜ್ಞಾನಾದಿ ಪತಯೇ ವಾಯವೇ ನಮಃ।**

**ವೈರಾಗ್ಯಧಿಪತಯೆ ಶಿವಾಯ ನಮಃ।**

**ಐಶ್ವರ್ಯಾಧಿಪತಯೇ ಇಂದ್ರಾಯ ನಮಃ।**

**ಪೀಠಫಲಕೇಷುಃ –**

**ಪೂರ್ವೇ–ಅಧರ್ಮಾಧಿಪತಯೇ ನಿರ್ಋತಯೇ ನಮಃ।**

**ದಕ್ಷಿಣೇ–ಅಜ್ಞಾನಾಧಿಪತಯೇ ದುರ್ಗಾಯೈ ನಮಃ।**

**ಪಶ್ಚಿಮೇ – ವೈರಾಗ್ಯಾಧಿಪತಯೇ ರುದ್ರಾಯ ನಮಃ।**

**ಉತ್ತರೇ – ಅವೈರಾಗ್ಯಾಧಿಪತಯೇ ಕಾಮಾಯ ನಮಃ।**

**ಏತಾ ಪೀಠಫಲಕ ದೇವತಾಃ।**

---

**ಪೀಠಪಾದೋರ್ಧ್ವಭಾಗೇ** = ನಾಲ್ಕು ಪಾದಗಳ ಮೇಲ್ಭಾಗಗಳಲ್ಲಿ ಆಗ್ನೇಯಾದಿ ವಿದಿಕ್ಕುಗಳಲ್ಲಿ ಸನ್ನಿಹಿತರಾಗಿರುವ ದೇವತೆಗಳನ್ನು ತಿಳಿಸುವರು. **ಧರ್ಮಾಧಿಪತಯೇ ಯಮಾಯ ನಮಃ** = ಧರ್ಮಕ್ಕೆ ಅಭಿಮಾನಿಯಾದ ಯಮಧರ್ಮನಿಗೆ ನಮಸ್ಕಾರವು. **ಜ್ಞಾನಾಧಿಪತಯೇ ವಾಯವೇ ನಮಃ** = ಜ್ಞಾನದಾತೃವಾದ ವಾಯುದೇವನಿಗೆ ನಮಸ್ಕಾರವು, **ವೈರಾಗ್ಯಾಧಿಪತಯೇ ಶಿವಾಯ ನಮಃ** = ವೈರಾಗ್ಯಾಧಿಪತಿಯಾದ ಶಿವನಿಗೆ ನಮಸ್ಕಾರವು, **ಐಶ್ವರ್ಯಾಧಿಪತಯೇ ಇಂದ್ರಾಯ ನಮಃ** = ಐಶ್ವರ್ಯಕ್ಕೆ ಅಧಿಪತಿಯಾದ ಇಂದ್ರದೇವನಿಗೆ ನಮಸ್ಕಾರವು.

**ಪೀಠ ಫಲಕೇಷು** = ಪೀಠದ ಹಲಗೆಯಲ್ಲಿರುವ ಪೂರ್ವಾದಿ ಕ್ರಮದಿಂದ ಸನ್ನಿಹಿತರಾದ ದೇವತೆಗಳನ್ನು ತಿಳಿಯಬೇಕು. **ಪೂರ್ವೇ** = ಪೀಠದ ಹಲಗೆಯ ಪೂರ್ವದಲ್ಲಿ, **ಅಧರ್ಮಾಧಿಪತಯೇ ನಿರ್ಋತಯೇ ನಮಃ** = ಅಧರ್ಮಕ್ಕೆ ಅಧಿಪತಿಯಾದ ನಿರ್ಋತಿಗೆ ನಮಸ್ಕಾರ, **ದಕ್ಷಿಣೇ** = ದಕ್ಷಿಣಭಾಗದಲ್ಲಿ, **ಅಜ್ಞಾನಾಧಿಪತಯೇ ದುರ್ಗಾಯೈ ನಮಃ** = ಅಜ್ಞಾನಕ್ಕೆ ಅಧಿಪತಿಯಾದ ದುರ್ಗಾದೇವಿಗೆ ನಮಸ್ಕಾರ, **ಪಶ್ಚಿಮೇ** = ಪಶ್ಚಿಮದಲ್ಲಿ, **ವೈರಾಗ್ಯಾಧಿಪತಿಯೇ, ರುದ್ರಾಯ ನಮಃ** = ವೈರಾಗ್ಯಕ್ಕೆ ಅಧಿಪತಿಯಾದ ರುದ್ರದೇವನಿಗೆ ನಮಸ್ಕಾರವು. **ಏತಾಃ** = ನಿರ್ಋತ್ಯಾದಿಗಳು, **ಪೀಠ–ಫಲಕದೇವತಾ** = ಪೀಠದ ಹಲಗೆಯಲ್ಲಿರುವ ದೇವತೆಗಳು,

**ಪೀಠಾಧಸ್ತಾತ್** – [ಪೀಠದ ಕೆಳಭಾಗ]

**ಮಧ್ಯೇ (ಪಾತಾಲೇ) ಪರಮ ಪುರುಷಾಯ ನಮಃ।**

**ತದುಪರಿ ಉದಕೇ – ಬ್ರಹ್ಮಾಂಡಾಧಾರಾಯ ವಿಷ್ಣು ಕೂರ್ಮಾಯ ನಮಃ।**

**ತದುಪರಿ ಗರ್ಭೋದಕೇ – ಕೂರ್ಮರೂಪಾಯ ವಿಷ್ಣವೇ ನಮಃ।**

**ಆಧಾರರೂಪಿಣ್ಯೈ ಶ್ರೀ ಶಕ್ತ್ಯೈ ನಮಃ।**

**ತತ್ಪುಚ್ಛಾಶ್ರಿತಾಯ ವಾಯು ಕೂರ್ಮಾಯ ನಮಃ।**

**ತತ್ಪುಚ್ಛಾಶ್ರಿತಾಯ ಅನಂತನಾಮಕಶೇಷಾಯ ನಮಃ।**

**ತತ್ಫಣಾಶ್ರಿತಾಯೈ ಪೃಥಿವ್ಯಭಿಮಾನಿನ್ಯೈ ಭೂಮ್ಯೈ ನಮಃ।**

---

**ಪೀಠಾಧಸ್ತಾತ್** = ಪೀಠದ ಕೆಳಗಿರುವ ದೇವತೆಗಳನ್ನು ತಿಳಿಯುವುದು.
****ಮಧ್ಯೇ** = ನಮ್ಮ ಪೀಠದ ಮಧ್ಯದ ನೇರರೇಖೆಯ ಕಟ್ಟ ಕಡೆಗೆ ಬ್ರಹ್ಮಾಂಡದ ಅಡಿಯಲ್ಲಿ ವಿರಾಡ್ರೂಪಿ ನಾರಾಯಣನನ್ನು ಸ್ಮರಿಸಬೇಕು. **ತದುಪರಿ ಉದಕೆ** = ಬ್ರಹ್ಮಾಂಡದಲ್ಲಿರುವ ನೀರಿನಲ್ಲಿ, **ಬ್ರಹ್ಮಾಂಡಾಧಾರಾಯ** = ಬ್ರಹ್ಮಾಂಡಕ್ಕೆ ಆಧಾರನಾಗಿರುವ, **ವಿಷ್ಣುಕೂರ್ಮಾಯ ನಮಃ** = ಕೂರ್ಮ ರೂಪದಿಂದಿರುವ ವಿಷ್ಣುವಿಗೆ ನಮನ, **ತದುಪರಿ ಗರ್ಭೋದಕೇ** = ಅದರ ಮೇಲಿರುವ, **ಗರ್ಭೋಧಕೇ** = ಬ್ರಹ್ಮಾಂಡ ಒಳಗಿರುವ ಘನೋದಕ್ಕೆ ಆಧಾರವಾಗಿರುವ, ಕೂರ್ಮರೂಪಾಯ, **ವಿಷ್ಣವೇ ನಮಃ** = ಕೂರ್ಮರೂಪಿಯಾದ ವಿಷ್ಣುವಿಗೆ ನಮಸ್ಕಾರ, **ಆಧಾರ ರೂಪಿಣ್ಯೈ ಶಕ್ತ್ಯೈ ನಮಃ** = ಬ್ರಹ್ಮಾಂಡ ಹೊತ್ತಿರುವ ಭಗವಂತನ ಮೇಲೆ ಬ್ರಹ್ಮಾಂಡದ ನವಾವರಣಗಳಿಗೆ ಆಧಾರರೂಪಿಣಿಯಾದ ಶಕ್ತಿ ನಾಮಕಗಳಾದ ರಮಾದೇವಿಗೆ ನಮಸ್ಕಾರವು, **ತತ್ಪುಚ್ಛಾಶ್ರಿತಾಯ** = ಅವನ ಬೆನ್ನನ್ನು ಆಶ್ರಯಿಸಿದ, **ವಾಯು ಕೂರ್ಮಾಯ ನಮಃ** = ವಾಯುಕೂರ್ಮನಿಗೆ ನಮಸ್ಕಾರವು, **ತತ್ಪುಚ್ಛಾಶ್ರಿತಾಯ** = ಆ ವಾಯುವಿನ ಪುಚ್ಛವನ್ನು ಆಶ್ರಯಿಸಿರುವ, **ಅನಂತನಾಮಕ, ಶೇಷಾಯ ನಮಃ** = ಅನಂತನೆಂಬ ಹೆಸರುಳ್ಳ ಶೇಷದೇವನಿಗೆ ನಮಸ್ಕಾರವು, **ತತ್ಫಣಾಶ್ರಿತಾಯೈ** = ಶೇಷನ ಹೆಡೆಯನ್ನಾಶ್ರಯಿಸಿರುವ,

---

** ಈ ನವಾವರಣ ಸಹಿತವಾದ ಬ್ರಹ್ಮಾಂಡವನ್ನು ಭಗವಂತನು ತನ್ನ ತಲೆಯಲ್ಲಿ ಧರಿಸಿ, ಪದ್ಮಾಸನ ಹಾಕಿಕೊಂಡು ಪೂರ್ವಾಭಿಮುಖನಾಗಿ ಕುಳಿತಿರುವನು ಎಂದು ಚಿಂತಿಸಬೇಕು. ಪಾತಾಳದಲ್ಲಿ ಪೀಠದ ಕೆಳಗೆ ಮಧ್ಯದಿಂದ ಒಂದು ಹಗ್ಗವನ್ನು ಕಟ್ಟಿ ಕೆಳಗೆ ಜೋತುಬಿಟ್ಟರೆ ಅದು ಕೆಳಗೆ ಎಲ್ಲಿ ಹೋಗಿ ತಲುಪುವುದೋ ಅಲ್ಲಿ ಪರಮ-ಪುರುಷನಾದ ಭಗವಂತನು ಕುಳಿತಿರುವನು.

**ತದುಪರಿ ಕ್ಷೀರಸಾಗರಮಾನಿನೇ ವರುಣಾಯ ನಮಃ।**

**ತದುಪರಿ ಶ್ವೇತದ್ವೀಪರೂಪಾಯೈ ರಮಾಯೈ ನಮಃ।**

**ತತ್ರ ನವರತ್ನ ಖಚಿತ ಚತುಃಸ್ತಂಭಯುಕ್ತಮಹಾಮಂಟಪಾಯ ನಮಃ।**

**ತನ್ಮಧ್ಯೇ ರಮಾರೂಪ ಕಂದನಾಳಸಹಿತ ಪದ್ಮಾಯ ನಮಃ।**

**ಪದ್ಮಷಟ್‌ಕೋಣೇಷು**– [ಕಮಲದ ಆರು ಕೋಣೆಗಳಲ್ಲಿ]

**ದಕ್ಷಿಣಕೋಣೇ–ಅಂ ಅರ್ಕಮಂಡಲಾಯ ನಮಃ।**

**ವಾಮಕೋಣೇ–ಉಂ ಸೋಮಮಂಡಲಾಯ ನಮಃ।**

**ಸಮ್ಮುಖೇ – ಮಂ ಹುತಾಶನಮಂಡಲಾಯ ನಮಃ।**

---

**ಪೃಥಿವ್ಯಭಿಮಾನಿನ್ಯೈ** = ಪೃಥಿವಿಗೆ ಅಭಿಮಾನಿನಿಯಾದ, **ಭೂಮ್ಯೈನಮಃ** = ಭೂದೇವಿಗೆ ನಮಸ್ಕಾರವು, **ತದುಪರಿ** = ಅದರ ಮೇಲೆ, **ಕ್ಷೀರಸಾಗರಾಭಿಮಾನಿನೇ** = ಕ್ಷೀರಸಾಗರಾಭಿಮಾನಿಯಾದ, **ವರುಣಾಯ ನಮಃ** = ವರುಣ ದೇವನಿಗೆ ನಮಸ್ಕಾರವು, **ತದುಪರಿ** = ಅದರ ಮಧ್ಯದಲ್ಲಿ, **ಶ್ವೇತದ್ವೀಪರೂಪಾಯೈ** = ಶ್ವೇತದ್ವೀಪ ರೂಪದಿಂದ ಇರುವ, **ರಮಾಯೈ ನಮಃ** = ರಮಾದೇವಿಗೆ ನಮಸ್ಕಾರವು, **ತತ್ರ** = ಶ್ವೇತದ್ವೀಪದ ಮಧ್ಯದಲ್ಲಿ, **ನವರತ್ನ ಖಚಿತ** = ನವರತ್ನದಿಂದ ಕೂಡಿದ, **ಚತುಃ ಸ್ತಂಭಯುಕ್ತ** = ನಾಲ್ಕು ಸ್ತಂಭಗಳಿಂದ ಕೂಡಿದ,

*****ಮಹಾಮಂಟಪಾಯ ನಮಃ** = ಮಹಾಪೀಠಕ್ಕೆ ನಮಸ್ಕಾರವು, **ತನ್ಮಧ್ಯೇ** = ಮಂಟಪದ ಮಧ್ಯದಲ್ಲಿ, **ರಮಾರೂಪ** = ರಮಾರೂಪವೆನಿಸಿದ, **ಕಂದನಾಳ ಸಹಿತ** = ನಾಳದಿಂದ ಸಹಿತವಾಗಿರುವ ಪದ್ಮಾಭಿಮಾನಿಯಾದ ಲಕ್ಷ್ಮೀದೇವಿಗೆ, **ನಮಃ** = ನಮಸ್ಕಾರವು.

---

**ಪದ್ಮಷಟ್‌ಪದ್ಮಕೋಣೇಷು** = (ಇನ್ನು ಮುಂದೆ ಪೀಠದ ಮೇಲೆ ಇರುವ ಪದ್ಮಗಳನ್ನು ತಿಳಿಯುವುದು) ಪೀಠದಲ್ಲಿ ಆರು ದಳಗಳಿಂದ ಯುಕ್ತವಾದ ಪದ್ಮದಳಗಳಲ್ಲಿ, **ದಕ್ಷಿಣಕೋಣೆ** = ಪ್ರದಕ್ಷಿಣಾಕಾರವಾಗಿ ಒಂದೊಂದು ದಳಗಳಲ್ಲಿ ಬಲಕೋಣೆಯಲ್ಲಿರುವ, **ಸೂರ್ಯಾಯ ನಮಃ** = ಮೊದಲನೆಯ ದಳದಲ್ಲಿರುವ ಸೂರ್ಯನಿಗೆ ನಮಸ್ಕಾರ, **ವಾಮಕೋಣೆ** = ಎಡಮೂಲೆಯಲ್ಲಿ

---

*** ಪರಮಪುರುಷನಿಂದಾರಂಭಿಸಿ ಸುವರ್ಣ ಮಂಟಪದವರೆಗೂ ಹಿಂದೆ ಹೇಳಿದವು- ಗಳೆಲ್ಲವೂ ದೇವರ ಪೀಠದ ಕೆಳಗೆ ಒಂದರ ಮೇಲೆ ಒಂದರಂತೆ ಕ್ರಮವಾಗಿ ಇವೆಯೆಂದು ತಿಳಿಯಬೇಕು ಹಾಗೂ ಧ್ಯಾನಿಸಬೇಕು.

**ದೇವವಾಮಕೋಣೇ–ಸತ್ವಾಭಿಮಾನಿನ್ಯೈ ಶ್ರಿಯೈ ನಮಃ।**
**ದಕ್ಷಿಣಕೋಣೇ–ರಜೋಭಿಮಾನಿನ್ಯೈ ಭೂಮ್ಯೈ ನಮಃ।**
**ದೇವಪೃಷ್ಠಭಾಗೇ ಉಪಬರ್ಹಣ ರೂಪಾಯೈ ತಮೋಭಿಮಾನಿನ್ಯೈ ದುರ್ಗಾಯೈ ನಮಃ।**

**ಪೂರ್ವೇ–ಆತ್ಮನೇ ನಮಃ।**
**ದಕ್ಷಿಣೇ–ಅಂತರಾತ್ಮನೇ ನಮಃ।**
**ಪಶ್ಚಿಮೇ–ಪರಮಾತ್ಮನೇ ನಮಃ।**
**ಉತ್ತರೇ–ಜ್ಞಾನಾತ್ಮನೇ ನಮಃ।**

**ಕಮಲಾಷ್ಟಪತ್ರೇಷು –**

**ವಿಮಲಾಯೈ ನಮಃ। ಉತ್ಕರ್ಷಿಣ್ಯೈ ನಮಃ।**
**ಜ್ಞಾನಾಯೈ ನಮಃ। ಕ್ರಿಯಾಯೈ ನಮಃ।**

---

ದೀಪದಂತಿರುವ, **ಸೋಮಾಯ ನಮಃ** = ಚಂದ್ರನಿಗೆ ನಮಸ್ಕಾರವು, **ಸಮ್ಮುಖೇ** = ಎದುರಿಗಿರುವ ದಳದಲ್ಲಿ, **ಹುತಾಶನಾಯ ನಮಃ** = ಅಗ್ನಿಗೆ ನಮಸ್ಕಾರವು, **ವಾಮಕೋಣೆ** = ಪದ್ಮದ ಹಿಂಭಾಗದ ಮೂರು ದಳಗಳಲ್ಲಿ, **ಸತ್ವಾಭಿಮಾನಿನ್ಯೈ** = ಸತ್ವ ಗುಣಾಭಿಮಾನಿ ಎನಿಸಿ ಬಿಳಿಯಾಗಿರುವ, **ಶ್ರೀಯೈನಮಃ** = ಶ್ರೀದೇವಿಗೆ ನಮಸ್ಕಾರವು, **ದಕ್ಷಿಣಕೋಣೇ** = ದಕ್ಷಿಣದಳದಲ್ಲಿರುವ, **ರಜೋಭಿಮಾನಿನ್ಯೈ** = ರಜೋಭಿಮಾನಿಯಾಗಿದ್ದು ಕೆಂಪು ಬಣ್ಣದಿಂದಿರುವ, ಭೂದೇವಿಗೆ ನಮಸ್ಕಾರ, **ದೇವಪೃಷ್ಠೆ** = ಭಗವಂತನ ಹಿಂದಿರುವ, **ಉಪಬರ್ಹಣ ರೂಪಾಯೈ** = ದಿಂಬಿನಂತಿರುವ , **ತಮೋಭಿಮಾನಿನ್ಯೈ** = ತಾಮಸಗುಣಾ–ಭಿಮಾನಿಯಾಗಿದ್ದು ಕಪ್ಪಾಗಿರುವ, **ದುರ್ಗಾಯೈ ನಮಃ** = ದುರ್ಗೆಗೆ ನಮಸ್ಕಾರ, **ಸೋಪಾನೆ** = ಪೀಠದ ಮೆಟ್ಟಿಲುಗಳಲ್ಲಿ, **ಪೂರ್ವೇ** = ಪೂರ್ವದಿಕ್ಕಿನ ಮೆಟ್ಟಿಲಿನಲ್ಲಿ, **ಆತ್ಮನೇ ನಮಃ** = ಆತ್ಮನೆಂಬ ಭಗವದ್ರೂಪಕ್ಕೆ ನಮಸ್ಕಾರ, **ದಕ್ಷಿಣೆ** = ದಕ್ಷಿಣದಿಕ್ಕಿನ ಮೆಟ್ಟಿಲಿನಲ್ಲಿ, **ಅಂತರಾತ್ಮನೇ ನಮಃ** = ಅಂತರಾತ್ಮ ಮೂರ್ತಿಗೆ ನಮಸ್ಕಾರವು, **ಪಶ್ಚಿಮೆ** = ಪಶ್ಚಿಮ ದಿಕ್ಕಿನ ಸೋಪಾನದಲ್ಲಿ, **ಪರಮಾತ್ಮನೇ ನಮಃ** = ಪರಮಾತ್ಮನಿಗೆ ನಮಸ್ಕಾರ, **ಉತ್ತರೇ** = ಉತ್ತರ ಸೋಪಾನದಲ್ಲಿರುವ, **ಜ್ಞಾನಾತ್ಮನೇ ನಮಃ** = ಜ್ಞಾನಾತ್ಮ ರೂಪಿಗೆ ನಮಸ್ಕಾರ

**ಯೋಗಾಯೈ ನಮಃ। ಪ್ರಹ್ವ್ಯೈ ನಮಃ।**

**ಸತ್ಯಾಯೈ ನಮಃ। ಈಶಾನಾಯೈ ನಮಃ।**

**ಮಧ್ಯೇ ಅನುಗ್ರಹಾಯೈ ನಮಃ।**

**ಅನುಗ್ರಹಾಖ್ಯಶಕ್ತೌ ಸಹಸ್ರ ಫಣಾಮಂಡಲಮಂಡಿತಾಯ, ತಲ್ಪಾಕಾರಾಯ ಹರೇರ್ಯೋಗಾಸನರೂಪಾಯ ಶ್ರೀಮದನಂತಾಯ ನಮಃ।**

**ತದುಪರಿ ರಮಾರೂಪ ಚಿತ್ರಾಸನಾಯ ನಮಃ । ಸರ್ವಾಭ್ಯಃ ಪೀಠದೇವತಾಭ್ಯೋ ನಮಃ । ಪುಷ್ಪಾದ್ಯುಪಚಾರ ಪೂಜಾಂ ಸಮರ್ಪಯಾಮಿ (ಪುಷ್ಪಂ ಸಮರ್ಪಯೇತ್ ಪೀಠಪೂಜಾಂ ಸಮರ್ಪಯಾಮಿ)**

---

**ಅಷ್ಟಪತ್ರೇಷು** = ಆರು ದಳದ ಕಮಲದ ಮೇಲೆ ಇರುವ ಚಿಕ್ಕದಾದ, ಎಂಟು ದಳವುಳ್ಳ ಕಮಲದ ದಳಗಳಲ್ಲಿ, ಪೂರ್ವಾದಿ ಕ್ರಮದಿಂದ, **ವಿಮಲಾಯೈ ನಮಃ** = ಛತ್ರಿಯನ್ನು ಹಿಡಿದಿರುವ ವಿಮಲಾ ಎಂಬ ಭಗವಚ್ಛಕ್ತಿಗೆ, ನಮಸ್ಕಾರ, **ಉತ್ಕರ್ಷಿಣ್ಯೈ ನಮಃ** = ಚಾಮರ ಹಿಡಿದಿರುವ ಉತ್ಕರ್ಷಿಣೀ ಶಕ್ತಿಗೆ ನಮಸ್ಕಾರ. **ವ್ಯಜನ ಧಾರಿಣ್ಯೈ ಜ್ಞಾನಾಯೈ ನಮಃ** = ಬೀಸಣಿಗೆ ಹಿಡಿದಿರುವ ಜ್ಞಾನಾಖ್ಯಶಕ್ತಿಗೆ, ನಮಸ್ಕಾರ, **ಕ್ರಿಯಾಯೈ ನಮಃ** = ದರ್ಪಣಧರಿಸಿರುವ ಕ್ರಿಯಾ ಎಂಬ ಶಕ್ತಿಗೆ ನಮಸ್ಕಾರ, **ಯೋಗಾಯೈ ನಮಃ** = ಗಾನ ಮಾಡುತ್ತಿರುವ ಯೋಗಾ ಎಂಬ ಶಕ್ತಿಗೆ ನಮಸ್ಕಾರ, **ಪ್ರಹ್ವ್ಯೈ ನಮಃ** = ನರ್ತನ ಮಾಡುತ್ತಿರುವ ಪ್ರಹ್ವೀ ಎಂಬ ಶಕ್ತಿಗೆ ನಮಸ್ಕಾರವು, **ಸತ್ಯಾಯೈ ನಮಃ** = ವಾದ್ಯ ನುಡಿಸುತ್ತಿರುವ ಸತ್ಯಾ ಎಂಬ ಶಕ್ತಿಗೆ ನಮಸ್ಕಾರವು, **ಈಶಾನಾಯೈ ನಮಃ** = ಸ್ತೋತ್ರ ಮಾಡುತ್ತಿರುವ ಈಶಾನಾ ಎಂಬ ಶಕ್ತಿಗೆ ನಮಸ್ಕಾರ, **ಮಧ್ಯೇ** = ಈ ಎಂಟು ಶಕ್ತಿಗಳ ಮಧ್ಯದಲ್ಲಿದ್ದು ಸೇವೆ ಸ್ವೀಕರಿಸುತ್ತಿರುವ, **ಅನುಗ್ರಹಾಯೈ ನಮಃ** = ಅನುಗ್ರಹಾ ಎಂಬ ಭಗವಚ್ಛಕ್ತಿಗೆ ನಮಸ್ಕಾರವು.

**ಅನುಗ್ರಹಾಖ್ಯ ಶಕ್ತೌ** = ಅನುಗ್ರಹ ಎಂಬ ವಿಷ್ಣು ಶಕ್ತಿಯ ಮೇಲ್ಭಾಗದಲ್ಲಿ, **ಹರೇಃ** = ಹರಿಯ, **ಯೋಗ ಪೀಠ ಸ್ವರೂಪಂ** = ಯೋಗಾಸನ ರೂಪನಾಗಿ ತಲ್ಪಾಕಾರನಂತಿರುವ, **ಅನಂತಾಯ ನಮಃ** = ಅನಂತನಾಮಕ ಶೇಷನಿಗೆ ನಮಸ್ಕಾರವು, **ತದುಪರಿ** = ಆ ಶೇಷನ ಮೇಲೆ, **ರಮಾರೂಪ ಚಿತ್ರಾಸನಾಯ ನಮಃ** = ಹಾಸುವ ಬಟ್ಟೆಯ ರೂಪದಲ್ಲಿರುವ ರಮಾದೇವಿಗೆ ನಮಸ್ಕಾರ. ಅದರ ಮೇಲೆ ಭಗವಂತನು ಕುಳಿತಿದ್ದಾನೆಂದು ತಿಳಿಯವುದು.

**ವಿಷ್ಣೋರಾಸನಭೂತಾಯ ದಿವ್ಯರತ್ನಮಯಾಯ ಚ ।**
**ಪ್ರಧಾನ ಪುರುಷೇಶಾಯ ಮಹಾಪೀಠಾಯ ತೇ ನಮಃ ॥**

ಇಲ್ಲಿಗೆ ಪೀಠ ಪೂಜೆಯು ಮುಗಿಯಿತು

## 31. ಬಿಂಬಾವಾಹನಕ್ರಮ :

**ಅಧೋಮುಖಂ ಹೃತ್ಕಮಲಂ ವಾಯುಬೀಜೇನ ಚೋನ್ಮುಖಂ ।**
**ವಿಕಾಸ್ಯ ಜ್ಞಾನರವಿಣಾ ಕರ್ಣಿಕಾಸ್ಥಂ ಪರಂ ವಿಭುಮ್ ॥ 1 ॥**

**ಓಂ ಯಂ ಓಂ, ಓಂ ವಂ ಓಂ, ಓಂ ರಂ ಓಂ ಇತಿ ಪ್ರತಿಮಾಂ ಸಂಶೋಧ್ಯ** [ಪ್ರತಿಮೆಗಳನ್ನು ಶುದ್ಧಿ ಮಾಡಿ]

**ತತ್ಕರ್ಣಿಕಾಯಾಂ । ಸೂರ್ಯಮಂಡಲಾಭಿಮಾನಿನೇ ಸೂರ್ಯಾಯ ನಮಃ ।**

**ತದುಪರಿ । ಸೋಮಮಂಡಲಾಭಿಮಾನಿನೇ ಸೋಮಾಯ ನಮಃ॥**

---

**ವಿಷ್ಣೋಃ** = ವಿಷ್ಣುವಿನ, **ಆಸನಭೂತಾಯ** = ಆಸನವೆನಿಸಿರುವ, **ದಿವ್ಯರತ್ನಮಯಾಯ** = ದಿವ್ಯವಾದ ರತ್ನಗಳಿಂದ ಯುಕ್ತವಾದ, **ಪ್ರಧಾನ ಪುರುಷೇಶಾಯ** = ಅನೇಕ ದೇವತಾಪ್ರಧಾನರು ಅಭಿಮಾನಿಗಳಾಗಿರುವ, **ಮಹಾಪೀಠಾಯ** = ಮಹಾಪೀಠಕ್ಕೆ, **ನಮಃ** = ನಮಸ್ಕಾರವು. (ಪುಷ್ಪವನ್ನೇರಿಸುವುದು)

---

**31. ಬಿಂಬಾವಾಹನಕ್ರಮ ಅರ್ಥ :**

1) **ಅಧೋಮುಖಂ** = ಕೆಳಮುಖನಾಗಿರುವ, **ಹೃತ್ಕಮಲಂ** = ಹೃದಯ ಕಮಲವನ್ನು, **ವಾಯುಬೀಜೇನ** = ಓಂ ಯಂ ಓಂ ಎಂಬ ವಾಯುಬೀಜ ಮಂತ್ರದಿಂದ, **ಉನ್ಮುಖಂ** = ಮೇಲ್ಮುಖವನ್ನಾಗಿ, **ಕುರ್ಯಾತ್** = ಮಾಡಬೇಕು. **ತತಃ** = ಅನಂತರ, **ಜ್ಞಾನರವಿಣಾ** = ನಮ್ಮಲ್ಲಿರುವ ಹರಿಸರ್ವೋತ್ತಮ ಜ್ಞಾನವೆಂಬ ಸೂರ್ಯನಿಂದ, **ವಿಕಾಸ್ಯ** = ಪರಂ, **ವಿಭುಂ** = ಶ್ರೇಷ್ಠನಾದ, ಭಗವಂತನನ್ನು, **ಆವಾಹ್ಯ** = ಆವಾಹಿಸುವುದು.
2) **ತತ್ಕರ್ಣಿಕಾಯಾಂ** = ಕಮಲದ ಪೀಠದಂತಿರುವ ಕರ್ಣಿಕೆಯ ಮೇಲ್ಭಾಗದಲ್ಲಿ, **ಸೂರ್ಯಮಂಡಲಾಭಿಮಾನಿನೇ ಸೂರ್ಯಾಯ ನಮಃ** = ಸೂರ್ಯ–

**ತದುಪರಿ ಅಗ್ನಿಮಂಡಲಾಭಿಮಾನಿನೇ ಅಗ್ನಯೇ ನಮಃ ।**

**ತಸ್ಮಿನ್ –ಲಕ್ಷ್ಯಾತ್ಮಕ ಪದ್ಮೇ ॥**

[ಮಂಡಲತ್ರಯ ಯುಕ್ತ ಹೃತ್ಪದ್ಮದಲ್ಲಿ ಭಗವನ್ಮೂರ್ತಿ ಧ್ಯಾನ]

**ಉದ್ಯತ್‌ಭಾಸ್ವತ್ ಸಮಾಭಾಸಃ ಚಿದಾನಂದೈಕದೇಹವಾನ್ ।**
**ಚಕ್ರಶಂಖ ಗದಾ ಪದ್ಮಧರೋ ಧ್ಯೇಯೋಽಹಮೀಶ್ವರಃ ॥ 3 ॥**

**ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ ಸ್ವಮೂರ್ತಿ ಗಣಮಧ್ಯಗಃ ।**
**ಬ್ರಹ್ಮವಾಯುಶಿವಾಹೀಶವಿಪೈಃ ಶಕ್ರಾದಿಕೈರಪಿ ॥ 4 ॥**

**ಸೇವ್ಯಮಾನೋಽಧಿಕಂ ಭಕ್ತ್ಯಾ ನಿತ್ಯ ನಿಶ್ಶೇಷ ಶಕ್ತಿಮಾನ್ ।**
**ಮೂರ್ತಯೋಽಷ್ಟಾವಪಿ ಧ್ಯೇಯಾಃ ಚಕ್ರಶಂಖವರಾಭಯೈಃ ॥**

---

ಮಂಡಲಾಭಿಮಾನಿ ಸೂರ್ಯನಿಗೆ ನಮಸ್ಕಾರವು, **ಚಂದ್ರಮಂಡಲಾಭಿಮಾನಿನೇ ಸೋಮಾಯ ನಮಃ** = ಚಂದ್ರಮಂಡಲಾಭಿಮಾನಿಯಾದ ಚಂದ್ರನಿಗೆ ನಮಸ್ಕಾರವು, **ತದುಪರಿ** = ಅದರ ಮೇಲೆ, **ಅಗ್ನಿ ಮಂಡಲಾಭಿಮಾನಿನೇ ಅಗ್ನಯೇ ನಮಃ** = ಆ ಕರ್ಣಿಕೆಯಲ್ಲಿರುವ, **ಲಕ್ಷ್ಯಾತ್ಮಕ ಪದ್ಮೇ** = ಲಕ್ಷ್ಯಾತ್ಮಕವಾದ ಅಷ್ಟದಳ ಪದ್ಮದಲ್ಲಿ

3) **ಉದ್ಯತ್‌ಭಾಸ್ವತ್** = ಉದಯಿಸುತ್ತಿರುವ ಸೂರ್ಯನಂತೆ, **ಸಮ** = ಸದೃಶವಾದ, **ಭಾಸ್ವತ್** = ಕಾಂತಿಯುಳ್ಳ, **ಚಿದಾನಂದೈಕ** = ಆನಂದ, ಜ್ಞಾನವು ಇವುಗಳೇ, **ಏಕ** = ಮುಖ್ಯವಾಗಿ, **ದೇಹವಾನ್** = ಶರೀರವುಳ್ಳ (ಅಪ್ರಾಕೃತನಾದ), **ಚಕ್ರಶಂಖಗದಾಪದ್ಮಾಧರ** = ಚಕ್ರಶಂಖಗದೆ ಪದ್ಮಗಳನ್ನು ತನ್ನ ಭುಜಗಳಲ್ಲಿ ಧರಿಸಿರುವ, **ಅಹಂ** = ನಾನು, (ನಾರಾಯಣನು ಬ್ರಹ್ಮನಿಗೆ ಉಪದೇಶಿಸುತ್ತಿರುವಾಗ ನಾನು ಎಂದದ್ದು), **ಧ್ಯೇಯಃ** = ಧ್ಯಾನಿಸಲ್ಪಡಬೇಕು.

4) **ಲಕ್ಷ್ಮೀಧರಾಭ್ಯಾಂ** = ಲಕ್ಷ್ಮೀ ಹಾಗೂ ಧರಾದೇವಿಯರಿಂದ, **ಆಶ್ಲಿಷ್ಟಃ** = ಆಲಿಂಗಿತನಾದ, **ಸ್ವಮೂರ್ತಿಗಣ** = ವಿಶ್ವ–ತೈಜಸ, ಪ್ರಾಜ್ಞ, ಮೊದಲಾದ ಎಂಟು ರೂಪಗಳ ಸಮೂಹದ, **ಮಧ್ಯಗಃ** = ಮಧ್ಯದಲ್ಲಿರುವ, **ಬ್ರಹ್ಮ** = ಬ್ರಹ್ಮನು, **ವಾಯು** = ವಾಯುದೇವನು, **ಶಿವ** = ಶಿವನು, **ಅಹೀಶ** = ಸರ್ಪರಾಜ ಶೇಷನು, **ವಿಪೈಃ** = ಪಕ್ಷಿಗಳ ಒಡೆಯನಾದ ಗರುಡನು, **ಶಕ್ರಾದಿಕೈಃ ಅಪಿ** = ಇಂದ್ರಾದಿ ಸಮಸ್ತ ದೇವತೆಗಳಿಂದಲೂ, **ಅಧಿಕಂ ಭಕ್ತ್ಯಾ** = ಅತ್ಯಂತ ಭಕ್ತಿಯಿಂದ

**ಯುಕ್ತಾಃ ಪ್ರದೀಪವರ್ಣಾಶ್ಚ ಸರ್ವಾಭರಣ ಭೂಷಿತಾಃ ॥ 5 ॥**

**ಹೃತ್ಕರ್ಣಿಕಾಮೂಲಗತಃ ಸೋಽಂಗುಷ್ಠಾಗ್ರಪ್ರಮಾಣಕಃ ।**
**ಮೂಲೇಶ ಇತಿ ನಾಮಾಸ್ಮಿನ್ ಸರ್ವೇ ಜೀವಾಃ ಪ್ರತಿಷ್ಠಿತಾಃ ॥ 6 ॥**

**ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।**

**ಸಭೂಮಿಂ ವಿಶ್ವತೋ ವೃತ್ವಾಽತ್ಯತಿಷ್ಠದ್ದಶಾಂಗುಲಮ್ ॥ 7 ॥**

(ಹೀಗೆ ಬಿಂಬರೂಪಿ ಶ್ರೀಹರಿಯನ್ನು ಧ್ಯಾನಿಸಿ)

---

5) **ಸೇವ್ಯಮಾನಃ** = ಸೇವಿಸಲ್ಪಡುತ್ತಿರುವ, **ನಿತ್ಯ ನಿಶ್ಶೇಷ ಶಕ್ತಿಮಾನ್** = ಯಾವಾಗಲೂ, ಸಮಸ್ತ ಶಕ್ತಿಗಳಿಂದ ಯುಕ್ತನಾದ, ಭಗವಂತನನ್ನು, ಧ್ಯಾನಿಸಬೇಕು ಜೊತೆಗೆ, **ಚಕ್ರಶಂಖವರಾಭಯೈಃ** = ಚಕ್ರ –ಶಂಖ, ವರಮುದ್ರೆ, ಆಭಯ – ಮುದ್ರೆಗಳಿಂದ ಕೂಡಿರುವ, **ಪ್ರದೀಪವರ್ಣಾಃ** = ದೀಪದಂತೆ ಪ್ರಕಾಶಮಾನಗಳಾದ, **ಸರ್ವಾಭರಣಭೂಷಿತಾಃ** = ಸಕಲ ಆಭರಣಗಳಿಂದ ಭೂಷಿತಗಳಾದ, **ಅಷ್ಟಾವಪಿ** = ವಿಶ್ವಾದಿ ಎಂಟು, **ಮೂರ್ತಯಃ** = ಮೂರ್ತಿಗಳನ್ನು ಸಹ, ಧ್ಯಾನಿಸಬೇಕು.

6) **ಹೃತ್ಕರ್ಣಿಕಾಮೂಲಗತಃ** = ಹೃದಯ ಕಮಲದ ಕರ್ಣಿಕೆಯ ಬುಡದಲ್ಲಿರುವ, **ಅಂಗುಷ್ಠಾಗ್ರಪ್ರಮಾಣಃ** = ಅಂಗುಷ್ಠ ಬೆರಳಿನ ಅಗ್ರದಷ್ಟು ಪ್ರಮಾಣವುಳ್ಳ, **ಸಃ** = ಅವನೇ, **ಮೂಲೇಶ ಇತಿ ನಾಮಾ** = ಮೂಲೇಶ ಎಂಬ ಹೆಸರುಳ್ಳವನು, **ಅಸ್ಮಿನ್** = ಈ ಮೂಲೇಶನಲ್ಲಿಯೇ, **ಸರ್ವೇಜೀವಾಃ** = ಸಮಸ್ತ ಜೀವರು, **ಪ್ರತಿಷ್ಠಿತಾಃ** = ಆಶ್ರಯಿಸಿದ್ದಾರೆ

**ಪುರುಷಃ** = ಪೂರ್ಣಷಡ್ಗುಣನಾದ ಭಗವಂತನು, **ಸಹಸ್ರಶೀರ್ಷಾ** = ಅನಂತಾನಂತ ಕಣ್ಣುಳ್ಳವನು, **ಸಹಸ್ರಪಾತ್** = ಅನಂತಾನಂತ ಕಾಲುಗಳುಳ್ಳ, **ಸಃ** = ಭಗವಂತನು, **ಭೂಮಿಂ** = ಪ್ರಕೃತಿ ಮಾತೆಯನ್ನು, **ಅತಿ** = ಮೀರಿ, **ವಿಶ್ವತಃ ವೃತ್ವಾ** = ಸರ್ವತ್ರ ವ್ಯಾಪಿಸಿಕೊಂಡು, **ದಶಾಂಗುಲಂ** = ಅನಂತಾನಂತ ದೇಶವನ್ನು ಮೀರಿ, **ಅತಿಷ್ಠತ್** = ನಿಂತಿದ್ದಾನೆ, **ಇತಿ** = ಈ ಮೇಲೆ ಹೇಳಿದ ರೀತಿಯಲ್ಲಿ, **ಬಿಂಬರೂಪಿಣಂ** = ಬಿಂಬರೂಪಿ ನಾರಾಯಣನನ್ನು, **ಧ್ಯಾತ್ವಾ** = ಧ್ಯಾನ ಮಾಡಿ.

## 32. ಮಾನಸೋಪಚಾರ ಪೂಜಾಃ :

(ಮನಸ್ಸಿನಿಂದ ಭಾವಿಸುವ ಐದು ಪೂಜೆಗಳು)

ಓಂ ಲಂ ಪೃಥಿವ್ಯಾತ್ಮಕಂ ಗಂಧಂ ಸಮರ್ಪಯಾಮಿ ।

ಓಂ ಹಂ ಆಕಾಶಾತ್ಮಕಂ ಪುಷ್ಪಂ ಸಮರ್ಪಯಾಮಿ ।

ಓಂ ಯಂ ವಾಯ್ವಾತ್ಮಕಂ ಧೂಪಂ ಸಮರ್ಪಯಾಮಿ ।

ಓಂ ರಂ ಅಗ್ನ್ಯಾತ್ಮಕಂ ದೀಪಂ ಸಮರ್ಪಯಾಮಿ ।

ಓಂ ವಂ ಅಮೃತಾತ್ಮಕಂ ನೈವೇದ್ಯಂ ಸಮರ್ಪಯಾಮಿ ।

ತುಲಸೀ ಪುಷ್ಪಾಣಿ ಗೃಹೀತ್ವಾ ಕೃತಾಂಜಲಿ ಪುಟಃ, ಭೂತ್ವಾ

---

32. ಮಾನಸೋಪಚಾರ ಅರ್ಥ :

**ತುಲಸಿ ಪುಷ್ಪಾಣಿ ಗೃಹೀತ್ವಾ** = ಕೈಯಲ್ಲಿ ತುಲಸೀ ಪುಷ್ಪಗಳನ್ನು ಹಿಡಿದುಕೊಂಡು, **ಕೃತಾಂಜಲಿ, ಪುಟಃ** = ಅಂಜಲಿಬದ್ಧನಾಗಿ (ಈ ಮಂತ್ರ ಪಠಿಸುವುದು)

***ಲಂ ಪೃಥಿವ್ಯಾತ್ಮಕಂ** = ಪೃಥಿವಿ ರೂಪವಾದ, **ಗಂಧಂ** = ಗಂಧವನ್ನು **ಸಮರ್ಪಯಾಮಿ** = ಚಿಂತಿಸುತ್ತೇನೆ, **ಹಂ ಆಕಾಶಾತ್ಮಕಂ** = ಆಕಾಶವನ್ನೇ ಪುಷ್ಪವನ್ನಾಗಿ, **ಸಮರ್ಪಯಾಮಿ** = ಚಿಂತಿಸುತ್ತೇನೆ. **ಯಂ ವಾಯ್ವಾತ್ಮಕಂ ಧೂಪಂ** = ವಾಯುವನ್ನೇ ಧೂಪವನ್ನಾಗಿ, **ಸಮರ್ಪಯಾಮಿ** = ಚಿಂತಿಸುತ್ತೇನೆ.

**ರಂ ಅಗ್ನ್ಯಾತ್ಮಕಂ** = ಅಗ್ನಿಯನ್ನೇ, **ದೀಪಂ** = ದೀಪವನ್ನಾಗಿ, **ಸಮರ್ಪಯಾಮಿ** = ಧ್ಯಾನಿಸುತ್ತೇನೆ, **ವಂ ಅಮೃತಾತ್ಮಕಂ ನೈವೇದ್ಯಂ** = ಅಮೃತವನ್ನೇ, ನೈವೇದ್ಯವನ್ನಾಗಿ, **ಸಮರ್ಪಯಾಮಿ** = ಚಿಂತಿಸುವೆನು

**ಮಾನಸೋಪಚಾರ ಪೂಜಾಃ ಅರ್ಪಯೇತ್** = ಮಾನಸಿಕವಾಗಿ ಪಂಚೋಪಚಾರ ಪೂಜೆಯನ್ನು ಅರ್ಪಿಸಬೇಕು.

* ಲಂ, ಹುಂ ಯಂ, ರಂ ವಂ ಇವುಗಳು ಬೀಜಮಂತ್ರಗಳಾಗಿದ್ದು, ಮಂತ್ರವು ಹೇಳುವ ಅರ್ಥವನ್ನೇ ಸಂಕ್ಷೇಪವಾಗಿ ತಿಳಿಸುತ್ತದೆ. ಎಂದು ತಿಳಿಯುವುದು.

## 33. ಬಿಂಬಮೂರ್ತಿ ಆಹ್ವಾನ :

ಆತ್ಮಾದೇವಾನಾಮಿತಿ ಅನಿಲಃ ವಾತಾಯನಃ ತ್ರಿಷ್ಟುಪ್

[17]ಓಂ ಆತ್ಮಾ ದೇವಾನಾಂ ಭುವನಸ್ಯ ಗರ್ಭೋ ಯಥಾವಶಂ ಚರತಿ ದೇವ ಏಷಃ ॥ ಘೋಷಾ ಇದಸ್ಯ ಶೃಣ್ವಿರೇ ನ ರೂಪಂ ತಸ್ಮೈ ವಾತಾಯ ಹವಿಷಾ ವಿಧೇಮ ।

'ಓಂ ನಮೋ ನಾರಾಯಣಾಯ ಓಂ'

ಏಹ್ಯೆಹಿ ಮಮ ಹೃತ್ಪದ್ಮಸ್ಥಿತ ಶ್ರೀಪುರುಷೋತ್ತಮ ।
ಆವಾಹಯಾಮಿ ಪೀಠೇ ತ್ವಾಂ ಪ್ರತಿಮಾಯಾಂ ರಮಾಪತೇ ॥

– ಇತಿ ದ್ವಿರುಚ್ಚಾರ್ಯ

ದೇವಂ ಸುಷುಮ್ನಾಮಾರ್ಗೇಣ ಬ್ರಹ್ಮರುದ್ರಂ ಆನೀಯ, ದಕ್ಷಿಣಾನಾಸಾ ಪುಟೇನ, ಬಹಿರ್ನಿರ್ಗತ್ಯ, ಸ್ವಾಂಜಲಿಸ್ಥ ತುಲಸೀದಲೇ ಧ್ಯಾತ್ವಾ, ಸ್ವಸ್ವಾಭೀಷ್ಟ ರಾಮಕೃಷ್ಣ ಹಯಗ್ರೀವಾದಿ ತತ್ತನ್ಮೂರ್ತೀಃ ಧ್ಯಾತ್ವಾ ॥

---

33. ಬಿಂಬಮೂರ್ತಿ ಆಹ್ವಾನ ಅರ್ಥ :

**ದೇವಾನಾಂ ಆತ್ಮಾ** = ಸಮಸ್ತ ದೇವತಾ ಸ್ವಾಮಿಯಾದ, **ಭುವನಸ್ಯ** = ಹದಿನಾಲ್ಕು ಲೋಕದ, **ಗರ್ಭಃ** = ಗರ್ಭದಂತೆ ಅಂತರ್ನಿಯಾಮಕ–ನಾಗಿರುವನು ಭಗವಂತನು ಹಾಗೂ ವಾಯುವು, **ಏಷ ದೇವಃ** = ಇಚ್ಛಾರೂಪಿಯಾದ, ಕ್ರೀಡಾದಿಗುಣ ವಿಶಿಷ್ಟನಾದ ಭಗವಂತನು ಹಾಗೂ ವಾಯುವು, **ಯಥಾವಶಂ** = ಸ್ವೇಚ್ಛೆಯಂತೆ, **ಚರತಿ** = ಸಂಚರಿಸುತ್ತಾನೆ (ರೆ), **ಅಸ್ಯ** = ಈ ಭಗವಂತನ ಹಾಗೂ ವಾಯುವಿನ, **ಘೋಷಾ ಇತ್** = ಶ್ವಾಸೋಚ್ಛ್ವಾಸರೂಪ ಶಬ್ದಗಳು ಮಾತ್ರ, **ಶೃಣ್ವಿರೇ** = ಕೇಳುತ್ತದೆ, **ನ ರೂಪಂ** = ರೂಪವು ಮಾತ್ರ ಕಾಣಿಸುವುದಿಲ್ಲ, **ತಸ್ಮೈವಾತಾಯ** = ವಾಯು ನಿಯಾಮಕನಾದ ಭಗವಂತನಿಗೆ, ಸರ್ವರ ನಿಯಾಮಕನಾದ ವಾಯುದೇವನಿಗೆ, **ಹವಿಷಾ** = ಪೂಜಾದಿ ಹವಿಸ್ಸಿನಿಂದ, **ವಿಧೇಮ**= ಹೋಮಿಸುವೆವು.

---

17 ಈ ಮಂತ್ರವು ಋಗ್ವೇದದ ಹತ್ತನೆಯ ಮಂಡಲ. 168ನೇ ಸೂಕ್ತದಲ್ಲಿ ನಾಲ್ಕನೇ ಮಂತ್ರವಾಗಿದೆ.

## 34. ಬಿಂಬಾವಾಹನ ಪ್ರಾರ್ಥನೆ :

**ಏಹ್ಯೇಹಿ ಮಮ ಹೃತ್ಪದ್ಮಸ್ಥಿತಂ ಶ್ರೀ ನೃಸಿಂಹ ಪ್ರಾಜ್ಞ-ಹರಿನಾಮಕ ರೂಪತ್ರಯಾತ್ಮಕಂ ಬಿಂಬರೂಪಿಣಂ, ಶ್ರೀರಾಮ ಕೃಷ್ಣವೇದವ್ಯಾಸಾ-ದ್ಯನಂತಾವತಾರ – ರೂಪವಯವ – ಗುಣಕ್ರಿಯಾತ್ಮಕಂ ಭಗವಂತಂ ಶ್ರೀಲಕ್ಷ್ಮೀನಾರಾಯಣಂ ಪೀಠಸ್ಥಿತ ಏತದ್ಧಾತುಮಯ – ಪ್ರತಿಮಾಂತಃಸ್ಥಿತ ತೇಜ ಸ್ಸಾರಮಯ ಪ್ರತಿಮಾಂತಃಸ್ಥಿತ ಶ್ರೀಮುಖ್ಯ ಪ್ರಾಣ ಪ್ರತಿಮಾ ಮಧ್ಯೇ ರಮಯಾ ಸಹ ಕ್ಷೀರ ನೀರವದಾಸೀನ ಸ್ವಪ್ರತಿ ಮಾಯಾಂ ಆವಾಹಯಾಮಿ ॥**

**(ಪುಷ್ಪಾಂಜಲಿಂ ಪ್ರತಿಮಾಯಾಃ ಪಾದೇ ಸಮರ್ಪ್ಯ) ಪ್ರಾರ್ಥಯೇತ್ ।**

---

34. ಬಿಂಬಾವಾಹನ ಪಾರ್ಥನೆ ಅರ್ಥ :

**ಮಮ** = ನನ್ನ, **ಹೃತ್ಪದ್ಮಸ್ಥಿತಂ** = ಹೃದಯ ಕಮಲದಲ್ಲಿರುವ, **ಶ್ರೀನೃಸಿಂಹ – ಪ್ರಾಜ್ಞ-ಹರಿನಾಮಕ** = ನೃಸಿಂಹ-ಹರಿ-ಪ್ರಾಜ್ಞರೆಂಬ, **ರೂಪತ್ರಯಾತ್ಮಕಂ** = ಮೂರು ರೂಪಗಳಿಂದ ಅಭಿನ್ನವಾದ, **ಬಿಂಬರೂಪಿಣಂ** = ಬಿಂಬರೂಪಿ ಹರಿಯನ್ನು, **ಶ್ರೀರಾಮ-ಕೃಷ್ಣ ವೇದವ್ಯಾಸಾದಿ** = ರಾಮಕೃಷ್ಣ ವೇದವ್ಯಾಸರೆ ಮೊದಲಾದ, **ಅನಂತಾವತಾರ** = ಅಸಂಖ್ಯಾವತಾರಗಳಾದ, **ರೂಪಾವಯವ** =ರೂಪ ಹಾಗೂ ಅವಯವಗಳಲ್ಲಿ ವ್ಯತ್ಯಾಸವಿಲ್ಲದ, **ಗುಣಕ್ರಿಯಾತ್ಮಾಕಂ** = ಗುಣ ಹಾಗೂ ಕ್ರಿಯಾ ರೂಪಗಳಿಂದ, ಅಭಿನ್ನನಾದ, **ಭಗವಂತ** = ಷಡ್ಗುಣೈಶ್ವರ್ಯ ಯುಕ್ತನಾದ, ಲಕ್ಷ್ಮೀ ನಾರಾಯಣಂ ಲಕ್ಷ್ಮೀನಾರಾಯಣನನ್ನು, **ಪೀಠಸ್ಥಿತ** = ಪೀಠದಲ್ಲಿರುವ, **ಏತದ್ಧಾತುಮಯ ಪ್ರತಿಮಾಂತಸ್ಥಿತಃ** = ಈ ತಾಮ್ರಾದಿ ಲೋಹದಿಂದ ನಿರ್ಮಿತ ಪ್ರತಿಮೆಯ ಒಳಗಿರುವ, **ತೇಜಸ್ಸಾರಮಯ** = ತೇಜೋಮಯವಾದ, **ಪ್ರತಿಮಾಂತಃಸ್ಥಿತ** = ಪ್ರತಿಮೆಯೊಳಗಿರುವ, ಶ್ರೀಮುಖಪ್ರಾಣ, **ಪ್ರತಿಮಾ ಮಧ್ಯೇ** = ಶ್ರೀಮುಖ್ಯಪ್ರಾಣನ ಪ್ರತಿಮೆಯೊಳಗೆ, **ರಮಾಯ ಸಹ** = ಲಕ್ಷ್ಮೀಸಹಿತನಾಗಿ, **ಕ್ಷೀರ ನೀರವತ್** = ಹಾಲು-ನೀರಿನಂತೆ ಬಿಡದೇ, **ಆಸೀನ** = ಇರುವ, **ಸ್ವಪ್ರತಿಮಾಯಾಂ** = ಪೂಜಕನ ಇಷ್ಟದೇವತಾ ಪ್ರತಿಮೆಯಲ್ಲಿ, **ಆವಾಹಯಾಮಿ** = ಆವಾಹಿಸುತ್ತೇನೆ. **ಏಹ್ಯೇಹಿ** = ಭಗವಂತನೆ ಬಾ, ಬಾ **ಪುಷ್ಪಾಂಜಲಿಂ** = ಕೈಯಲ್ಲಿರುವ ಪುಷ್ಪವನ್ನು, **ಪಾದಯೋಃ** = ಪ್ರತಿಮೆಯ ಪಾದಗಳಲ್ಲಿ, **ಸಮರ್ಪ್ಯ** = ಸಮರ್ಪಿಸಿ, **ಪ್ರಾರ್ಥಯೇತ್** = ಪ್ರಾರ್ಥಿಸತಕ್ಕದ್ದು.



**ಸಾನ್ನಿಧ್ಯಂ ಕುರು ದೇವೇಶ ಸರ್ವಸಂಪತ್ ಕರೋ ಭವ ।**
**ವಿಭೋ ಸಕಲಲೋಕೇಶ ವಿಷ್ಣೋ ಜಿಷ್ಣೋ ಹರೇ ಪ್ರಭೋ ।**
**ತ್ವಾಂ ಭಕ್ತ್ಯಾ ಪೂಜಯಾಮ್ಯದ್ಯ ಭೋಗೈರರ್ಘ್ಯಾದಿಭಿಃ ಕ್ರಮಾತ್ ।**
**ಯಾಗಾವಸಾನಪರ್ಯಂತಂ ಅತ್ರ ಸ್ಥಿತ್ವಾ ಜನಾರ್ದನ ॥**

**ಓಂ ನಮೋ ನಾರಾಯಣಾಯ ಆವಾಹಿತೋ ಭವ ।**
**ಓಂ ನಮೋ ನಾರಾಯಣಾಯ ಸಂಸ್ಥಾಪಿತೋ ಭವ ।**
**ಓಂ ನಮೋ ನಾರಾಯಣಾಯ ಸಮ್ಮುಖೋ ಭವ ।**
**ಓಂ ನಮೋ ನಾರಾಯಣಾಯ ಅವಗುಂಠಿತೋ ಭವ ।**
**ಓಂ ನಮೋ ನಾರಾಯಣಾಯ ಸುಪ್ರಸನ್ನೋ ಭವ ॥**

---

**ಹೇ ದೇವೇಶ** = ದೇವತಾಸ್ವಾಮಿಯೇ, **ಸಾನ್ನಿಧ್ಯಂ ಕುರು** = ಈ ಪ್ರತೀಕದಲ್ಲಿ ಸನ್ನಿಹಿತನಾಗು, **ವಿಭೋ** = ಸ್ವಾಮಿಯೇ, **ಸಕಲಲೋಕೇಶ** = ಸಮಸ್ತ ಜಗದೊಡೆಯನೇ, **ಹರೇ** = ವ್ಯಾಪ್ತನಾದವವನೇ, **ಜಿಷ್ಣೋ** = ಜಯಶೀಲನೇ, **ಹರೇ** = ಪಾಪಹಾರಕನೇ, **ಪ್ರಭೋ** = ನನ್ನ ಸ್ವಾಮಿಯೇ, **ಸರ್ವಸಂಪತ್ಕರಃ** = ಸಕಲ– ಜ್ಞಾನಾದಿಸಂಪತ್ತನ್ನುಂಟು ಮಾಡುವವನಾಗಿ, **ಭವ** = ಆಗು,
**ಅದ್ಯ** = ಈ ದಿನ, **ತ್ವಾಂ** = ನಿನ್ನನ್ನು, **ಭಕ್ತ್ಯಾ** = ಭಕ್ತಿಯಿಂದ, **ಅರ್ಘ್ಯಾದಿಭಿಃ** = ಅರ್ಘ್ಯಾದಿ ಪೂಜೆಗಳಿಂದ, **ಕ್ರಮಾತ್** = ಕ್ರಮವಾಗಿ, **ಪೂಜಯಾಮಿ** = ಪೂಜಿಸುತ್ತೇನೆ, **ಜನಾರ್ದನ** = ಜನಾರ್ದನನೇ, **ಯಾಗಾವಸಾನ ಪರ್ಯಂತಂ** = ಪೂಜೆಯು ಮುಗಿಯುವವರೆಗೂ, **ಅತ್ರ** = ಈ ಪ್ರತಿಮೆಯಲ್ಲಿ, **ಸ್ಥಿತ್ವಾ** = ಇದ್ದು, **ಭಕ್ತಸ್ಯ** = ಭಕ್ತನಾದ, **ಮಮ** = ನನ್ನ, **ಪೂಜಾಂ** = ಪೂಜೆಯನ್ನು, **ಗೃಹೀತ್ವಾ** = ಸ್ವೀಕರಿಸಿ, **ಮಾಂ** = ನನ್ನನ್ನು, **ವಿಭೋ** = ಸಮರ್ಥನೆ, **ಪಾಹಿ** = ರಕ್ಷಿಸು.
‡ **ಆವಾಹನಾದಿ ಷಣ್ಮುದ್ರಾಃ** = ಆವಾಹನೆ ಮೊದಲಾದ ಆರು ಮುದ್ರೆಗಳನ್ನು ತೋರಿಸಿ, **ಆವಾಹಿತೋಭವ** = ಪ್ರತಿಮೆಯಲ್ಲಿ ಆವಾಹಿತನಾಗು, **ಸ್ಥಾಪಿತೋಭವ** = ಪ್ರತಿಮೆಯಲ್ಲಿಯೇ ಸ್ಥಿರವಾಗಿರು, **ಸನ್ನಿಹಿತೋಭವ**= ಸನ್ನಿಧಾನವುಳ್ಳವನಾಗು, **ಸನ್ನಿರುದ್ಧೋಭವ** = ಬೇರೆಡೆ ಮನಸ್ಸು ಹೋಗದಂತೆ ಭಕ್ತನಲ್ಲಿಯೇ ಮನಸ್ಸನ್ನು ಇಡು, **ಸಮ್ಮುಖೋಭವ** = ಭಕ್ತಾಭಿಮುಖನಾಗಿರು, **ಅವಕುಂಠಿತೋಭವ** = ಅಯೋಗ್ಯರ ದೃಷ್ಟಿ ಬೀಳದಂತೆ ರಕ್ಷಿಸು, **ಸುಪ್ರಸನ್ನೋ ಭವಂ** = ಪ್ರಸನ್ನನಾಗು.

---

‡ಸೂಚನೆ : ಅವಕಾಶವಿದ್ದರೆ ಪ್ರತಿಮೆಯ ಪಾದ–ಹೃದಯ–ಮಸ್ತಕ(ತಲೆ)ಗಳಲ್ಲಿ ಮೂಲಮಂತ್ರ, ವಿಷ್ಣುಷಡಕ್ಷರ, ದ್ವಾದಶಾಕ್ಷರ ಮಂತ್ರಗಳಿಂದ ಅಭಿಮರ್ಶನ

## 15. ಲಕ್ಷ್ಮೀಪ್ರತಿಮಾಯಮಾವಾಹಮ್:

**ಕೌಶೇಯಪೀತವಸನಾಮ್ ಅರವಿಂದನೇತ್ರಾಂ**
**ತಾಂಬೂಲನೀಲಕುಸುಮಾಭಯಸದ್ವರೇತಾಮ್ ।**

**ಶ್ಯಾಮಾಂಗಕಾಂತಿಸಹಿತಾಂ ಪರಮಾಂಕಸಂಸ್ಥಾಂ**
**ಧ್ಯಾಯೇದ್ ವಿಧೀಶನತಪಾದಯುಗಾಂ ಜನಿತ್ರೀಮ್ ॥**

**ಓಂ ಶ್ರೀಮ್ ಓಂ ॥ (ಇತ್ಯುಕ್ತ್ವಾ ತುಲಸೀಪುಷ್ಪಾಣಿ ಗೃಹೀತ್ವಾ) ಏಹ್ಯೇಹಿ ಮಮ ಹೃತ್ಪದ್ಮಸ್ಥಿತನೃಸಿಂಹಪ್ರಾಜ್ಞಹರಿರೂಪತ್ರಯಾತ್ಮಕಬಿಂಬರೂಪಿಣಂ ಲಕ್ಷ್ಮ್ಯಂತರ್ಗತಶ್ರೀಲಕ್ಷ್ಮೀನಾರಾಯಣಂ ಪೀಠಸ್ಥಿತೈತದ್ಧಾತು- ಮಯಪ್ರತಿಮಾಂತಃಸ್ಥಿತತೇಜಸ್ಸಾರಮಯಪ್ರತಿಮಾಂತಃಸ್ಥಿತಶ್ರೀಮುಖ್ಯ -ಪ್ರಾಣಪ್ರತಿಮಾಮಧ್ಯೇ ರಮಯೇ ಸಹ ಕ್ಷೀರನೀರವದಾಸೀನಸ್ವಪ್ರತಿ- ಮಾಯಮಾವಾಹಯಾಮಿ ॥ ಆವಾಹನಮುದ್ರಾಂ ಪ್ರದರ್ಶಯಾಮಿ ॥**

[ಆವಾಹನಾದಿ ಷಣ್ಮುದ್ರೆಗಳನ್ನು ತೋರಿಸಿ, ಪ್ರತಿಮೆಯ ಪಾದ ಹೃದಯ ಶಿರಗಳಲ್ಲಿ ಅಷ್ಟಾಕ್ಷರಾದಿ ಮಂತ್ರಗಳಿಂದ ಸ್ಪರ್ಶಿಸಿ, ಲಕ್ಷ್ಮೀ ಮೂಲಮಂತ್ರವನ್ನು 108 ಅಥವಾ 8 ಬಾರಿ ಜಪಿಸಬೇಕು]

**ಶ್ರೀಮುಖ್ಯಪ್ರಾಣಪ್ರತಿಮಾಯಾಮಾವಾಹನಮ್ ॥**

**ಉದ್ಯದ್ರವಿಪ್ರಕರಸನ್ನಿಭಮಚ್ಯುತಾಂಕೇ**
**ಸ್ವಾಸೀನಮಸ್ಯ ನುತಿನಿತ್ಯವಚಃ ಪ್ರವೃತ್ತಿಮ್ ।**
**ಧ್ಯಾಯೇದ್ಗದಾಭಯಕರಂ ಸುಕೃತಾಂಜಲಿ ತಂ**
**ಪ್ರಾಣಂ ಯಥೇಷ್ಟತನುಮುನ್ನತಕರ್ಮಶಕ್ತಿಮ್ ॥**

**ಧ್ಯಾಯೇದ್ಬಾಲದಿವಾಕರದ್ಯುತಿನಿಭಂ ದೇವಾರಿದರ್ಪಾಪಹಂ**
**ದೇವೇಂದ್ರಪ್ರಮುಖಂ ಪ್ರಶಸ್ತಯಶಸಂ ದೇದೀಪ್ಯಮಾನಂ ರುಚಾ ।**

---

ಮಾಡುವುದು ಹಾಗೂ ತತ್ತ್ವನ್ಯಾಸ-ಮಾತೃಕಾನ್ಯಾಸಗಳನ್ನು ಮಾಡುವುದು. ಸಾಲಿಗ್ರಾಮಕ್ಕೆ ಆವಾಹನೆ – ವಿಸರ್ಜನೆ ಇರುವುದಿಲ್ಲ. ತುಲಸೀಯಿಂದ ಎಂಟು ಬಾರಿ ಮೂಲಮಂತ್ರ ಜಪ ಸಾಕು. ಸಾಲಿಗ್ರಾಮದಲ್ಲಿರುವ ಭಗವಂತ ಹಾಗೂ ಸ್ವಬಿಂಬರೂಪಗಳಿಗೆ ಐಕ್ಯ ಚಿಂತನೆ ಅವಶ್ಯ ಮಾಡಬೇಕು.



ಸುಗ್ರೀವಾದಿಸಮಸ್ತವಾನರಯುತಂ ಸುವ್ಯಕ್ತತತ್ತ್ವಪ್ರಿಯಂ
ಸಂರಕ್ತಾರುಣಲೋಚನಂ ಪವನಜಂ ಪೀತಾಂಬರಾಲಂಕೃತಮ್ ॥

ಓಂ ಹಂ ಹನುಮತೇ ನಮಃ ಓಂ ॥ [ಕೈಯಲ್ಲಿ ತುಲಸೀಪುಷ್ಪಗಳನ್ನು ಹಿಡಿದು]

ಏಹ್ಯೇಹಿ ಹೃತ್ಪದ್ಮಸ್ಥಿತ.... ಬಿಂಬರೂಪಿಣಂ ಹನುಮದಂತರ್ಗತ- ಸೀತಾಪತಿಂ ಶ್ರೀರಾಮಚಂದ್ರಂ ಪೀಠಸ್ಥಿತೈತದ್ಧಾತುಮಯ- ಪ್ರತಿಮಾಂತಃಸ್ಥಿತತೇಜಸಾರಮಯಪ್ರತಿಮಾಂತಃಸ್ಥಿತಶ್ರೀಮುಖ್ಯಪ್ರಾಣ- ಪ್ರತಿಮಾಮಧ್ಯೇ ರಮಯಾ ಸಹ ಕ್ಷೀರನೀರವದಾಸೀನಸ್ವ- ಪ್ರತಿಮಾಯಾಮಾವಾಹಯಾಮಿ । ಆವಾಹನಮುದ್ರಾಂ ಪ್ರದರ್ಶಯಾಮಿ ॥ [ಹಿಂದಿನಂತೆ ಆವಾಹನಾದಿ ಮುದ್ರೆಗಳನ್ನು ತೋರಿಸಿ ಪ್ರಾಣದೇವರ ಮೂಲಮಂತ್ರವನ್ನು ಜಪಿಸಬೇಕು]

ಗರುಡಪ್ರತಿಮಾಯಾಮಾವಾಹನಮ್ –

ಗರುಡಃ ಸರ್ವದಾ ಧ್ಯೇಯಃ ಸುಧಾಪೂರ್ಣಂ ಹಿರಣ್ಮಯಮ್ ।
ದಧಾನಃ ಕುಂಭಮಭಯಂ ಪೀತಶುಕ್ಲೋಽರುಣೋ ಹರಿತ್ ।
ಕೃಷ್ಣಶ್ಚಾಜಾನುತೋ ನಾಭೇಃ ಕಂಠಾತ್ ಕಾದಂತ ಏವ ಚ ॥

ಪ್ರಿಯಾಯುಕ್ ಪುರತೋ ವಿಷ್ಣೋಃ ಪಕ್ಷತುಂಡಸಮನ್ವಿತಃ ।
ಜಂಗಮಸ್ಥಾವರವಿಷಹೃದಯಂ ಸರ್ವಕಾಮದಃ ॥

'ಓಂ ಕ್ಷಿಪ ಓಂ ಸ್ವಾಹಾ ಓಂ' (ಇತ್ಯುಕ್ತ್ವಾ)

ಏಹ್ಯೇಹಿ ಮಮ ಹೃತ್ಪದ್ಮಸ್ಥಿತ ಬಿಂಬರೂಪಿಣಂ ಗರುಡಾಂತರ್ಗತ ಶ್ರೀಲಕ್ಷ್ಮೀನಾರಾಯಣಂ ಪೀಠಸ್ಥಿತೈತದ್ಧಾತುಮಯಪ್ರತಿಮಾಂತಃ- ಸ್ಥಿತತೇಜಸ್ಸಾರಮಯಪ್ರತಿಮಾಂತಸ್ಥಿತಃ ಶ್ರೀಮುಖ್ಯಪ್ರಾಣ- ಪ್ರತಿಮಾಮಧ್ಯೇ ರಮಯಾ ಸಹ ಕ್ಷೀರನೀರವದಾಸೀನಸ್ವ- ಪ್ರತಿಮಾಯಾಮಾವಾಹಯಾಮಿ । ಆವಾಹನಮುದ್ರಾಂ ಪ್ರದರ್ಶಯಾಮಿ (ಮುದ್ರಾಪ್ರದರ್ಶನಾದಿಗಳು ಹಿಂದಿನಂತೆ)

ಶೇಷಪ್ರತಿಮಾಯಾಮಾವಾಹನಮ್ ॥

ದಧಾನೋ ಹಲಸೌನಂದೌ ಶ್ವೇತವರ್ಣಃ ಕೃತ್ವಾಂಜಲಿಃ ।
ಸಹಸ್ರಮೂರ್ಧಾಽದ್ವಿತೀಯಕರ್ಣಭೂಷಃ ಪ್ರಿಯಾಯುತಃ ।
ವನಮಾಲೀ ನೀಲವಾಸ ಧ್ಯೇಯೋ ವಿಷ್ಣೋಸ್ತು ಪೃಷ್ಠತಃ ॥

'ಓಂ ಶೇಂ ಶೇಷಾಯ ನಮಃ ಓಂ' (ಇತ್ಯುಕ್ತ್ವಾ)

ಏಹ್ಯೇಹಿ ಮಮ ಹೃತ್ಪದ್ಮಸ್ಥಿತ ಬಿಂಬರೂಪಿಣಂ ಶೇಷಾಂತರ್ಗತ ಶ್ರೀಸಂಕರ್ಷಣಂ ಪೀಠಸ್ಥಿತೈತದ್ಧಾತುಮಯಪ್ರತಿಮಾಂತಃ–ಸ್ಥಿತತೇಜಸ್ಸಾರಮಯಪ್ರತಿಮಾತಸ್ಥಿತಃಶ್ರೀಮುಖ್ಯಪ್ರಾಣಪ್ರತಿಮಾಮಧ್ಯೇ ರಮಯಾ ಸಹ ಕ್ಷೀರನೀರವದಾಸೀನಸ್ವಪ್ರತಿಮಾಯಾ–ಮಾವಾಹಯಾಮಿ । ಆವಾಹನಮುದ್ರಾಂ ಪ್ರದರ್ಶಯಾಮಿ ॥
[ಮುದ್ರಪ್ರದರ್ಶನಾದಿಗಳು ಹಿಂದಿನಂತೆ]

## 36. ಸ್ನಾನಾರ್ಥಂ ಪ್ರಾರ್ಥನಾ :

(ಸ್ನಾನಕ್ಕೆ ಬರಲು ಪ್ರಾರ್ಥನೆ)

**ಓಂ ಉತ್ತಿಷ್ಠ ಬ್ರಹ್ಮಣಸ್ಪತೇ ದೇವಯಂತಸ್ತ್ವೇಮಹೇ । ಉಪ ಪ್ರ ಯಂತು ಮರುತಃ ಸುದಾನವ ಇಂದ್ರ ಪ್ರಾಶೂರ್ಭವಾ ಸಚಾ॥**
– ಋಗ್ವೇದ–1/40/1

---

36. **ಸ್ನಾನಾರ್ಥಂ ಪ್ರಾರ್ಥನಾ ಮಂತ್ರಾರ್ಥ:**
**ಹೇ ಬ್ರಹ್ಮಣಸ್ಪತೇ** = ವೇದಪ್ರತಿಪಾದ್ಯನಾದ ಭಗವಂತನೇ, ವಾಯುದೇವನೇ, **ಉತ್ತಿಷ್ಠ** = ಸ್ನಾನಕ್ಕಾಗಿ ಏಳು, **ತ್ವಾಂ** = ನಿನ್ನನ್ನು, **ದೇವಯಂತಃ** = ಸ್ತೋತ್ರ ಮಾಡುತ್ತಾ, **ಈಮಹೇ** = ಶರಣು ಹೊಂದಿದ್ದೇವೆ, **ಸುದಾನವಃ** = ದಾನವೇ ಸ್ವಭಾವವಾಗಿವುಳ್ಳ, **ಮರುತಃ** = ನಲವತ್ತೊಂಭತ್ತು ಮರುತ್ತುಗಳೇ, ನೀವು, **ಉಪಪ್ರಯಂತು** = ಹರಿವಾಯುಗಳೊಂದಿಗೆ ಬನ್ನಿರಿ, **ಇಂದ್ರ** = ಇಂದ್ರದೇವನೇ, **ಸಚಾ** = ಸುಖದಿಂದ, **ಭವ** = ಬರುವವನಾಗು, **ಪ್ರಾಶೂಃ** = ನೀವು ಚೆನ್ನಾಗಿ ಭುಂಜಿಸುವವರಾಗಿ, **ಭವ** = ಆಗಿರಿ.

ಏಹಿ ಶ್ರೀ ಭಗವನ್ ವಿಷ್ಣೋ ಸ್ನಾನಾರ್ಥಂ ಮಜ್ಜನಾಲಯಂ। (ಇತಿ ಪ್ರಾರ್ಥ್ಯ)

**ಓಂ ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿ ದಧೇ ಪದಮ್।**
**ಸಮೂಳ್ಹಮಸ್ಯ ಪಾಂಸುರೇ (ಪಾದುಕೇ ಸಮರ್ಪಯಾಮಿ)**

– ಋಗ್ವೇದ 1/22/17

**ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ । ಸ್ಥಿರೈರಂಗೈಸ್ತುಷ್ಟುವಾಂ ಸಸ್ತನೂಭಿರ್ವ್ಯಶೇಮ ದೇವಹಿತಂ ಯದಾಯುಃ ॥** – ಋ ೧ – 1/89/8 (ಇತಿ ಸ್ನಾನ ಪೀಠೇ ಉಪವೇಶ್ಯ)

---

**ಹೇ ಭಗವನ್** = ಪೂರ್ಣನಾದ, **ವಿಷ್ಣೋ** = ವಿಷ್ಣುವೇ, **ಸ್ನಾನಾರ್ಥಂ** = ಅಭಿಷೇಕಕ್ಕಾಗಿ, **ಮಜ್ಜನಾಲಯಂ** = ಸ್ನಾನಗೃಹಕ್ಕೆ, **ಏಹಿ** = ಬರುವ ಅನುಗ್ರಹ ಮಾಡು, **ಇತಿ** = ಹೀಗೆ, **ಪ್ರಾರ್ಥ್ಯ** = ಭಗವಂತನನ್ನು ಹೀಗೆ ಪ್ರಾರ್ಥಿಸಿ.

**ವಿಷ್ಣು ಮಂತ್ರಾರ್ಥ : ವಿಷ್ಣುಃ** = ವಾಮನರೂಪಿ ತ್ರಿವಿಕ್ರಮನು, **ಇದಂ** = ಈ ನಮ್ಮ ಕಣ್ಣು ಮುಂದಿರುವ ಜಗತ್ತನ್ನು, **ವಿಚಕ್ರಮೇ** = ನಾನಾ ರೀತಿಯಾದ ಪಾದವಿನ್ಯಾಸಗಳಿಂದ ಆಕ್ರಮಣ ಮಾಡಿದನು. **ಆಕಾಲದಲ್ಲಿ ಪದಂ** = ತನ್ನ ಹೆಜ್ಜೆಯನ್ನು, **ತ್ರೇಧಾ** = ಮೂರು ವಿಧವಾಗಿ, **ನಿದಧೇ** = ಇಟ್ಟನು, **ಅಸ್ಯ** = ಈ ಭಗವಂತನ, **ಪಾಂಸುರೇ** – ಧೂಳಿನಿಂದ ಕೂಡಿದ ಹೆಜ್ಜೆಯಲ್ಲಿ, **ಇದಂ** = ಈ ಜಗತ್ತೆಲ್ಲವೂ, **ಸಮೂಢಂ** = ಅಡಗಿ ಹೋಯಿತು, ಇಂತಹ ಭಗವಂತನಿಗೆ, **ಪಾದುಕೆ** = ಪಾದುಕೆಗಳನ್ನು, **ಸಮರ್ಪಯಾಮಿ** = ಅರ್ಪಿಸುತ್ತೇನೆ.

**ಭದ್ರಂ ಕರ್ಣೇಭಿ ಮಂತ್ರಾರ್ಥ : ಹೇ ದೇವಾಃ** = ತತ್ವಾಭಿಮಾನಿ ದೇವತೆಗಳೇ, **ಕರ್ಣೇಭಿಃ** = ನಮ್ಮ ಶ್ರೋತ್ರೇಂದ್ರಿಯದಿಂದ, **ಭದ್ರಂ** = ಮಂಗಳಕರವಾದ ಭಗವಂತನ ಕಥೆಯನ್ನೇ (ಪುರಾಣಾದಿಗಳನ್ನು), **ಶೃಣುಯಾಮ** = ಕೇಳುವಂತೆ ಅನುಗ್ರಹಿಸಿರಿ, **ಯಜತ್ರಾಃ** = ಯಾಗಾದಿಗಳನ್ನು ಮಾಡಲು ಅರ್ಹರಾದ ನಾವು, **ಅಕ್ಷಭಿಃ** = ನೇತ್ರಗಳಿಂದ, **ಭದ್ರಂ** = ಮೋಕ್ಷಪ್ರದಗಳಾದ ಶಾಸ್ತ್ರಗಳನ್ನು, **ಪಶ್ಯೇಮ**

**ಓಂ ನಮೋ ನಾರಾಯಣಾಯ –ಲಕ್ಷ್ಮೀಹಸ್ತೇನ ಶಂಖೋದಕೇನ ಅರ್ಘ್ಯಂ ಸಮರ್ಪಯಾಮಿ ।**
**ಓಂ ನಮೋ ನಾರಾಯಣಾಯ – ಸರಸ್ವತೀ ಹಸ್ತೇನ ಪಾದ್ಯಂ ಸಮರ್ಪಯಾಮಿ ।**
**ಓಂ ಅಸ್ಮಿನ್ ರಾಷ್ಟ್ರೇ ಶ್ರಿಯಮಾವೇಶಯಾಮಿ ।**
**ಅತೋ ದೇವಿಃ ಪ್ರತಿಪಶ್ಯಾಮ್ಯಾಪಃ ।**
**ದಕ್ಷಿಣಂ ಪಾದಮವನೇ ನಿಜೇಽಸ್ಮಿನ್ ರಾಷ್ಟ್ರ, ಇಂದ್ರಿಯಂ ದಧಾಮಿ ।**
**ಸವ್ಯಂ ಪಾದಮವನೆ ನಿಜೇಽಸ್ಮಿನ್ ರಾಷ್ಟ್ರ ಇಂದ್ರಿಯಂ ವರ್ಧಯಾಮಿ ।**

---

= ಅವಲೋಕನ ಮಾಡುವಂತಾಗಲೀ, **ಸ್ಥಿರೈಃ ಅಂಗೈಃ** = ಧೃಢವಾದ ಇಂದ್ರಿಯಗಳಿಂದ ಯುಕ್ತವಾದ, **ತನೂಭಿಃ** = ಶರೀರದಿಂದ, **ತುಷ್ಟುವಾಂಸಃ** = ನಿಮ್ಮನ್ನು ಸ್ತುತಿಸುವರಾಗಿ, **ಯತ್ ಆಯುಃ** = ಯಾವ ಆಯುಸ್ಸು, **ದೇವಹಿತಾ** = ದೇವತೆಗಳಿಂದ ಕೊಡಲ್ಪಟ್ಟಿದೆಯೋ ಆ ಆಯುಸ್ಸನ್ನು, **ವ್ಯಶೇಮ** = ಅನುಭವಿಸುವಂತಾಗಲಿ, **ಇತಿ** = ಹೀಗೆ ಪ್ರಾರ್ಥಿಸುತ್ತಾ, **ಸ್ನಾನಪೀಠೆ** = ಸ್ನಾನದ ಮಣೆಯಲ್ಲಿ, ಕುಳಿತುಕೊಳ್ಳುವಂತೆ ಪ್ರಾರ್ಥಿಸಬೇಕು.

**ನಾರಾಯಣಾಯ ಮಂತ್ರಾರ್ಥ :**

**ಲಕ್ಷ್ಮಿಹಸ್ತೇನ** = ಲಕ್ಷ್ಮೀಯ ಕೈಯಿಂದ, **ಶಂಖೋದಕೇನ** = ಶಂಖದ ನೀರಿನಿಂದ, **ಅರ್ಘ್ಯಂ** ಕೈಗೆ ನೀರನ್ನು, **ಸಮರ್ಪಯಾಮಿ** = ಸಮರ್ಪಿಸುತ್ತೇನೆ. (ಅರ್ಪಿಸಲು ಪ್ರಾರ್ಥಿಸುತ್ತೇನೆ), ನಾರಾಯಣನಿಗೆ ನಮಸ್ಕಾರವು, **ಸರಸ್ವತೀಹಸ್ತೇನ** = ಸರಸ್ವತಿಯ ಹಸ್ತದಿಂದ, **ಪಾದ್ಯಂ** = ಕಾಲಿಗೆ ನೀರನ್ನು, **ಸಮರ್ಪಯಾಮಿ** = ಅರ್ಪಿಸುತ್ತೇನೆ.

**ಅಸ್ಮಿನ್** = ಈ, **ರಾಷ್ಟ್ರೇ** = ರಾಷ್ಟ್ರದಲ್ಲಿ, **ಶ್ರಿಯಂ** = ಲಕ್ಷ್ಮೀಯನ್ನು, **ಆವೇಶಯಾಮಿ** = ಪ್ರವೇಶಿಸುವಂತೆ ಪ್ರಾರ್ಥಿಸುತ್ತೇನೆ, **ಅತಃ** = ಈ ಕಾರಣದಿಂದಲೇ, **ದೇವೀಃ ಆಪಃ** = ಅಭಿಮಾನಿ ದೇವತೆಗಳನ್ನು, **ಪ್ರತಿಪಶ್ಯಾಮಿ** = ನೋಡುತ್ತೇನೆ, **ದಕ್ಷಿಣಂ ಪಾದಂ** = ಬಲಗಾಲನ್ನು, **ಅವನೇನಿಜೇ** = ತೊಳೆಯುವುದರಿಂದ, **ಅಸ್ಮಿನ್ ರಾಷ್ಟ್ರೇ** = ಈ ರಾಷ್ಟ್ರದಲ್ಲಿ, **ಇಂದ್ರಿಯಂ** = ಇಂದ್ರಿಯಾಭಿಮಾನಿ ದೇವತೆಗಳನ್ನು, **ದಧಾಮಿ** = ಪೋಷಿಸುವಂತೆ ಮಾಡುತ್ತೇನೆ, **ಸವ್ಯಂ ಪಾದಂ** = ಎಡಗಾಲನ್ನು, **ಅವನೇನಿಜೇ** = ತೊಳೆಯುತ್ತಿರಲು, **ವರ್ಧಯಾಮಿ** = ಅನುಗ್ರಹೋನ್ಮುಖ–ರಾಗುವಂತೆ ಪ್ರಾರ್ಥಿಸುವೆನು.



**ಪೂರ್ವಮನ್ಯಮಪರಮನ್ಯಂ ಪಾದವವನೇ ನಿಜೇ।**
**ದೇವಾ ರಾಷ್ಟ್ರಸ್ಯ ಗುಪ್ತ್ಯಾ ಅಭಯಸ್ಯಾವರುದ್ಧ್ಯೈ।**
**ಆಪಃ ಪಾದಾವನೇ ಜನೀಃ ದ್ವಿಷಂತಂ ನಿರ್ದಹಂತು ಮೇ॥**
**ಓಂ ನಮೋ ನಾರಾಯಣಾಯ । ರತಿಹಸ್ತೇನ ಆಚಮನೀಯಂ ಸಮರ್ಪಯಾಮಿ।**

**ಓಂ ಶಂ ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ।**
**ಶಂ ಯೋ ರಭಿಸ್ರವಂತು ನಃ॥**
**ಓಂ ನಮೋ ನಾರಾಯಣಾಯ।**
**ಪಿತಾಮಹಸ್ತೇನ ಮಧುಪರ್ಕಂ ಸಮರ್ಪಯಾಮಿ।**

---

**ಪೂರ್ವಮನ್ಯಂ, ಅಪರಮನ್ಯಂ** = ದಕ್ಷಿಣ ಹಾಗೂ ಸವ್ಯ ಪಾದಗಳನ್ನು, **ಪಾದಾವವನೇನಿಜೆ** = ತೊಳೆಯುವುದರಿಂದ, **ದೇವಾಃ** = ಪಾದಾಭಿಮಾನಿ ಜಯಂತ ಹಾಗೂ ವಾಯು, ಹಾಗೂ ಯಜ್ಞನಾಮಕ ಭಗವಂತನು, ಇವರುಗಳನ್ನು, **ರಾಷ್ಟ್ರಸ್ಯ** = ರಾಷ್ಟ್ರದ, **ಗುಪ್ತ್ಯಾ** = ರಕ್ಷಣೆಗೋಸ್ಕರ, **ಅಭಯಸ್ಯ** = ಅಭಯಕ್ಕಾಗಿಯೂ, **ಅವರುದ್ಧ್ಯೈ** = ಶತ್ರುಗಳ ತಡೆಗಾಗಿಯೂ, ಬೇಡುವೆನು, **ಪಾದವನೀಜನೀಃ** = ಪಾದಗಳನ್ನು ತೊಳೆದ, **ಆಪಃ** = ನೀರು, **ದ್ವಿಷಂತಂ** = ನಮ್ಮ ರಾಷ್ಟ್ರ ಹಾಗೂ ನಮ್ಮನ್ನು, ದ್ವೇಷಿಸುತ್ತಿರುವವರನ್ನು, **ನಿರ್ದಹಂತು** = ಸುಟ್ಟು ಹಾಕಲಿ

**ನಾರಾಯಣಾಯ** = ನಾರಾಯಣನಿಗೆ, **ನಮಃ** = ನಮಸ್ಕಾರವು, **ಆಚಮನೀಯಂ** = ಆಚಮನವನ್ನು ಮಾಡಲು, ನೀರನ್ನು, **ರತಿ ಹಸ್ತೇನ** = ರತೀದೇವಿಯ ಕೈಯಿಂದ, **ಸಮರ್ಪಯಾಮಿ** = ಅರ್ಪಿಸಲು ಪ್ರಾರ್ಥಿಸುವೆ.

**ದೇವೀಃ ಆಪಃ** = ಜಲಾಭಿಮಾನಿ ದೇವತೆಗಳು, **ನಃ** = ನಮಗೆ, **ಶಂ** = ಸುಖವನ್ನು, **ಭವಂತು** = ನೀಡುವವರಾಗಲಿ, **ಅಭಿಷ್ಟಯೇ** = ಅಭಿಷ್ಟ ಸಿದ್ಧಿಗಾಗಿಯೂ, **ಪೀತಯೇ** = ಕುಡಿಯಲು, **ಭವಂತು** = ಆಗಲಿ, **ಆಪಃ** = ನೀರು, **ನಃ** = ನಮಗೆ, **ಶಂ** = ರೋಗ ಪರಿಹಾರದ ಮೂಲಕ ಸುಖವನ್ನು ನೀಡುತ್ತಾ, **ಅಭಿಸ್ರಾವಂತು** = ನಮ್ಮ ಕಡೆಗೆ ಹರಿದು ಬರಲಿ, ನಾರಾಯಣನಿಗೆ ನಮಸ್ಕಾರವು,

**ಪಿತಾಮಹ ಹಸ್ತೇನ** = ಬ್ರಹ್ಮದೇವನ ಹಸ್ತದಿಂದ, **ಮಧುಪರ್ಕಂ** = ಹಾಲು,

ಓಂ ನಮೋ ನಾರಾಯಣಾಯ ।

ಶಾಂತಿ ಹಸ್ತೇನ ಪುನರಾಚಮನಂ ಸಮರ್ಪಯಾಮಿ ।

## 37. ಪಂಚಾಮೃತಾಭಿಷೇಕಃ :[18]

ಕ್ಷೀರಸ್ನಪನಂ (ಹಾಲಿನಿಂದ ಅಭಿಷೇಕ)

ಆಪ್ಯಾಯಸ್ವ ಗೌತಮೋ ಗಾಯತ್ರೀ ಕ್ಷೀರಾಭಿಷೇಕೇ ವಿನಿಯೋಗಃ ।

ಓಂ ಆಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣ್ಯಮ್ ।

ಭವಾ ವಾಜಸ್ಯ ಸಂಗಥೇ ॥ 1 ॥ –ಋ–1/91/61

ಓಂ ನಮೋ ನಾರಾಯಣಾಯ । ಕ್ಷೀರೇಣ ಸ್ನಪಯಾಮಿ ॥

---

ಮೊಸರು, ಜೇನುಗಳ ಮಿಶ್ರಣವನ್ನು, **ಸಮರ್ಪಯಾಮಿ** = ಅರ್ಪಿಸಲು ಬೇಡುವೆನು, ನಾರಾಯಣನಿಗೆ ನಮಸ್ಕಾರ, **ಶಾಂತಿಹಸ್ತೇನ** = ಶಾಂತಿ ನಾಮಕ ಲಕ್ಷ್ಮೀಹಸ್ತದಿಂದ, **ಪುನರಾಚಮನಂ** = ಪುನರಾಚಮನವನ್ನು, **ಸಮರ್ಪಯಾಮಿ** = ಅರ್ಪಿಸುವೆ.

---

37. **ಪಂಚಾಮೃತಾಭಿಷೇಕ ಮಂತ್ರಾರ್ಥಃ :**

**ಸೋಮ** = ಸೋಮನಾಮಕ, ವಾಯುದೇವನಲ್ಲಿರುವ ಭಗವಂತನೇ, **ಆಪ್ಯಾಯಸ್ವ** = ಈ ಕ್ಷೀರದಿಂದ ತೃಪ್ತನಾಗಿ ನಮ್ಮನ್ನು ತೃಪ್ತಿಪಡಿಸು, **ತೇ** = ನಿನ್ನ, **ವೃಷ್ಣ್ಯಂ** = ಚತುರ್ವಿಧ ಪುರುಷಾರ್ಥ ನೀಡಲು ಸಮರ್ಥವಾದ ಕರುಣೆಯು, **ವಿಶ್ವತಃ** = ಸರ್ವ ರೀತಿಯಿಂದಲೂ, **ಸಮೇತು** = ನಮ್ಮನ್ನು ಬಂದು ಸೇರಲಿ, **ಸಂಗಥೇ** = ಇಂದ್ರಿಯಗಳ ಯುದ್ಧದಲ್ಲಿ, **ವಾಜಸ್ಯ** = ಶತ್ರುಜಯ, ಬಲ, ಅನ್ನಾದಿಗಳ, ಪ್ರಾಪಕನಾಗಿ, **ಭವ** = ಆಗು ಅಥವಾ, **ವಾಜಸ್ಯ** = ಅನ್ನದ, **ಸಂಗಥೇ** = ಪ್ರಾಪ್ತಿಗಾಗಿ, **ಭವ** = ಆಗು ॥ 1 ॥

---

18. ಆಪ್ಯಾಯಸ್ವ ದಧಿಕ್ರಾವ್ಣೋ ಘೃತಂ ಮಿಮಿಕ್ಷೆ ಇತ್ಯೃಚಃ ।
ಮಧುವಾತಾ ತಥಾ ಸ್ವಾದುರಿತಿ ಮಂತ್ರಾನ್ ಸಮೂಲಕಾನ್ ।
ಕ್ರಮೇಣೈತಾನ್ ಪಠನ್ ಪಂಚಾಮೃತೇನ ಸ್ನಾಪಯೇದ್ ಹರಿಂ ।
ಪಯೋದಧಿ ಘೃತಂ ಕ್ಷೌದ್ರಂ ಶರ್ಕರಾ ಪಂಚಮಾಮೃತಮ್ ॥ – ಪದ್ಯಮಾಲಾ

ದಧಿ ಸ್ನಪನಂ :

ದಧಿಕ್ರಾವ್ಣೋ ವಾಮದೇವೋ ಅನುಷ್ಟುಪ್ ।

ಓಂ ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ ।

ಸುರಭಿನೋ ಮುಖಾ ಕರತ್ಪ್ರಣ ಆಯೂಂಷಿ ತಾರಿಷತ್ ॥ 2 ॥
– ಋ–6/39/6

ಓಂ ನಮೋ ನಾರಾಯಣಾಯ । ದಧ್ನಾ ಸ್ನಪಯಾಮಿ ॥

ಘೃತಾಭಿಷೇಕಃ :

ಘೃತಂ ಮಿಮಿಕ್ಷೇ ಶೌನಕೋ ಗೃತ್ಸಮದಃ ಜಗತೀ ।

ಓಂ ಘೃತಂ ಮಿಮಿಕ್ಷೇ ಘೃತಮಸ್ಯ ಯೋನಿರ್ಘೃತೇ ಶ್ರಿತೋ ಘೃತಮ್ವಸ್ಯ ಧಾಮ । ಅನುಷ್ವಧಮಾ ವಹ ಮಾದಯಸ್ವ ಸ್ವಾಹಾಕೃತಂ ವೃಷಭ ವಕ್ಷಿ ಹವ್ಯಮ್ ॥ 3 ॥ –ಋ–2/3/11

ಓಂ ನಮೋ ನಾರಾಯಣಾಯ । ಘೃತೇನ ಸ್ನಪಯಾಮಿ ॥

---

**ಅಶ್ವಸ್ಯ** = ಸರ್ವತ್ರ ವ್ಯಾಪ್ತನಾದ, **ವಾಜಿನಃ** = ಕುದುರೆಯಂತೆ ಶೀಘ್ರವಾಗಿ ಭಕ್ತರನ್ನು ಸಂರಕ್ಷಿಸುವಂತಹ, **ದಧಿಕ್ರಾವ್ಣಃ** = ಜಗತ್ತನ್ನು ಧರಿಸಿದ, **ಜಿಷ್ಣೋಃ** = ಸರ್ವತ್ರ ಜಯಶಾಲಿಯಾದ ಭಗವಂತನ ಸ್ತೋತ್ರವನ್ನು, **ಅಕಾರಿಷಂ** = ಮಾಡಿದೆನು, ಮಾಡುವೆನು, ಆ ಭಗವಂತನು, ನಃ = ನಮ್ಮ, **ಮುಖಾಃ** = ಮುಖವೇ ಮೊದಲಾದ ಇಂದ್ರಿಯಗಳನ್ನು, **ಸುರಭಿಕರತ್** = ವೇದಾಧ್ಯಯ–ನಾದಿಗಳಿಂದ ಸುಗಂಧಮಯವಾಗುವಂತೆ ಮಾಡಲಿ, ಮತ್ತು ನಃ = ನಮ್ಮ, **ಆಯೂಂಷಿ** = ಆಯುಸ್ಸನ್ನು, **ಪ್ರತಾರಿಷತ್** = ಹೆಚ್ಚು ಮಾಡಲಿ ॥ 2 ॥

**ಘೃತಂ** = ಅತ್ಯಂತ ಪ್ರಕಾಶಮಾನನಾದ ಘೃತನಾಮಕ ಭಗವಂತನನ್ನು ಹಾಗೂ ತುಪ್ಪವನ್ನು, **ಮಿಮಿಕ್ಷೇ** = ಮಿಮಿಕ್ಷಿರೇ ಶಿಷ್ಯಾದಿಗಳಲ್ಲಿ ಉಪದೇಶಿಸಿದರು, ಹೋಮಿಸಿದರು, ಏಕೆಂದರೆ, **ಘೃತಂ** = ತುಪ್ಪವೇ, ತದಂತರ್ಗತ ಭಗವಂತನೇ,

ಮಧುಸ್ನಾನಂ :

**ಮಧುವಾತಾ ರಾಹೂಗಣೋ ಗೌತಮೋ ವಿಶ್ವೇದೇವಾಃ ಗಾಯತ್ರೀ ।**

**ಓಂ ಮಧು ವಾತಾ ಋತಾಯತೇ ಮಧು ಕ್ಷರಂತಿ ಸಿಂಧವಃ ।**

**ಮಾಧ್ವೀರ್ನಃ ಸಂತ್ವೋಷಧೀಃ ॥**

**ಮಧುನಕ್ತಮುತೋಷಸೋ ಮಧುಮತ್ಪಾರ್ಥಿವಂ ರಜಃ ।**

**ಮಧು ದ್ಯೌರಸ್ತು ನಃ ಪಿತಾ ।**

---

**ಅಸ್ಯ** = ಯಜ್ಞಯಾಗಾದಿಗಳಿಗೆ, **ಯೋನಿಃ** = ಮೂಲ ಕಾರಣವಾಗಿದೆ. ಕಾರಣನಾಗಿದ್ದಾನೆ. ಇದಲ್ಲದೆ, **ಅಗ್ನಿಃ** = ಅಗ್ನಿಯೂ ಕೂಡ, **ಘೃತೆ** = ತುಪ್ಪದಲ್ಲಿ, **ಶ್ರಿತಃ** = ಆಶ್ರಿತನಾಗಿದ್ದಾನೆ, **ಘೃತೆ ಶ್ರಿತಃ** = ತುಪ್ಪದಲ್ಲಿ ಸನ್ನಿಹಿತನಾದ ಭಗವಂತನೇ, **ಅಗ್ನಿಃ** = ಅಗ್ನಿನಾಮಕನಾಗಿದ್ದು, ಅಗ್ನಿಯ ತೇಜಸ್ಸನ್ನೂ ಸುಡುವ ಶಕ್ತಿಪ್ರದನಾಗಿರುವನು, **ಘೃತಂ ಉ** = ತುಪ್ಪವೇ, ಘೃತಾಂತರ್ಗತ ಭಗವಂತನೆ, **ಅಸ್ಯ** = ಈ ಅಗ್ನಿಗೆ, **ಧಾಮ** = ಕಾಂತಿಗೆ, **ಯೋನಿಃ** = ಕಾರಣನು, **ಅನುಷ್ವಧಂ** = ಮಂತ್ರಪೂರ್ವಕವಾಗಿ ಅರ್ಪಿಸುವ ಆಹುತಿಗಳನ್ನು, ಅನುಸರಿಸಿ, **ಆವಹ** = ಪಿತೃಗಳು, ದೇವತೆಗಳೂ ಇವರಿಗೆ ತಲುಪಿಸಿ, **ಮಾದಯಸ್ವ** = ಅವರನ್ನು ಸಂತೋಷಪಡಿಸು, ನೀನೂ ಸಂತುಷ್ಟನಾಗು, ನಮ್ಮನ್ನೂ ಸಂತೋಷಗೊಳಿಸಿ, **ಹೇ ವೃಷಭಃ** = ಭಕ್ತಾಭಿಷ್ಟಪ್ರದನೇ, **ಸ್ವಾಹಾಕೃತಂ** = ಸ್ವಾಹಾಕಾರ ಪೂರ್ವಕ ನೀಡಿದ, **ಹವ್ಯಂ** = ಹವಿಸ್ಸನ್ನು, **ವಕ್ಷಿ** = ಸ್ವೀಕರಿಸಿ ನನ್ನನ್ನು ಉದ್ಧಾರ ಮಾಡು ॥3॥

**ಹೇ ದೇವ** = ಭಗವಂತನೇ, **ತೇ** = ನಿನ್ನ, **ಋತಾಯ** = ಯಥಾರ್ಥ ಜ್ಞಾನಕ್ಕಾಗಿ, **ವಾತಾಃ** = ವಾಯುದೇವರ ಸಹಿತ ಮರುತ್ತುಗಳು, **ಸಿಂಧವಃ** = ನದ್ಯಾದ್ಯಭಿಮಾನಿದೇವತೆಗಳೂ, **ಮಧು** = ಮಧುರವಾದ, **ಮಧು** = ಜ್ಞಾನವನ್ನು, **ಕ್ಷರಂತಿ** = ಉಪದೇಶಿಸುತ್ತಾರೆ. ಹಾಗೆಯೇ **ಓಷಧೀಃ** = ಭತ್ತ ಮೊದಲಾದ ಔಷಧಿಗಳಿಗೆ ಅಭಿಮಾನಿಗಳಾದ ದೇವತೆಗಳೂ, **ನಃ** = ನಮಗೆ, **ಮಾಧ್ವೀಃ** = ಮಧುರ ರಸೋಪೇತವಾದ ಮಧ್ವಾಚಾರ್ಯರ ಸಂಬಂಧಿ ಗ್ರಂಥಗಳನ್ನು, **ಸಂತು** = ಉಪದೇಶ ಮಾಡುವವರಂತಾಗಲಿ.

**ನಕ್ತಂ** = ರಾತ್ರ್ಯಾಭಿಮಾನಿ ದುರ್ಗೆಯು, **ಉಷಸಃ** = ಉಷಃಕಾಲಾಭಿಮಾನಿ ಲಕ್ಷ್ಮೀದೇವಿಯು, **ಮಧು ಸಂತು** = ಶಾಸ್ತ್ರೀಯ ಜ್ಞಾನವನ್ನು ನೀಡುವಂತಾಗಲಿ,

ಮಧುಮಾನ್ನೋ ವನಸ್ಪತಿರ್ಮಧುಮಾँ ಅಸ್ತು ಸೂರ್ಯಃ।
ಮಾಧ್ವೀರ್ಗಾವೋ ಭವಂತು ನಃ ॥ 4 ॥

ಶರ್ಕರಾಸ್ನಾನಂ (ಸಕ್ಕರೆ) :

ಸ್ವಾದುಃ ಪವಸ್ವೇತಿ-ಸೋಮೋ ಭಾರ್ಗವೋ-ಜಗತೀಛಂದಃ ಶರ್ಕರಾಭಿಷೇಕೇ ವಿನಿಯೋಗಃ ॥

ಸ್ವಾದುಃ ಪವಸ್ವ ದಿವ್ಯಾಯ ಜನ್ಮನೇ ಸ್ವಾದುರಿಂದ್ರಾಯ
ಸುಹವೀತು ನಾಮ್ನೇ । ಸ್ವಾದುರ್ಮಿತ್ರಾಯ ವರುಣಾಯ
ವಾಯವೇ ಬೃಹಸ್ಪತಯೇ ಮಧುಮಾँ ಅದಾಭ್ಯಃ ॥

-ಋ-9/85/6

---

**ಪಾರ್ಥಿವಂ ರಜಃ** = ಭೂಮಿಯಲ್ಲಿರುವ ಧೂಳಿನ ಕಣಗಳನ್ನು ಲೆಕ್ಕ ಮಾಡುವ ಸಾಮರ್ಥ್ಯವುಳ್ಳ ಬ್ರಹ್ಮದೇವನೂ, **ಮಧುವತ್** = (ಅಸ್ತು) ಜ್ಞಾನದಾನದಿಂದ ಸುಖವನ್ನುಂಟು ಮಾಡಲಿ, **ಪಿತಾ** = ತಂದೆಯಂತೆ ಪಾಲಿಸುವ, **ದ್ಯೌಃ** = ದ್ಯುಲೋಕಾಭಿಮಾನಿಗಳು, **ಮಧು ಅಸ್ತು** = ಸುಖಪ್ರದವಾಗಿ ಆಗಲಿ ॥

**ವನಸ್ಪತಿಃ** = ಸಜ್ಜನರ ಸಮೂಹಕ್ಕೆ ಜ್ಞಾನದಾತೃವಾದ ವಾಯುದೇವನು, ಗಿಡ-ಮರಗಳಿಗೆ ಅಭಿಮಾನಿಯಾಗಿದ್ದು ಮನೋಭಿಮಾನಿಯಾದ ಚಂದ್ರದೇವನು, **ನಃ** = ನಮಗೆ, **ಮಧುಮಾನ್** = ಮಧುರವಚನೋಪೇತರಾಗಿ ಆಗಲಿ, **ಸೂರ್ಯಃ** = ಸೂರಿಪ್ರಾಪ್ಯನಾದ ಹಾಗೂ ಜ್ಞಾನದಾತನಾದ ರುದ್ರದೇವನು ಹಾಗೂ ಕಣ್ಣಿಗೆ ಅಭಿಮಾನಿಯಾದ ಸೂರ್ಯನೂ ಸಹ, **ಮಧುಮಾನ್ ಭವತು** = ಜ್ಞಾನ ನೀಡಲಿ, **ಗಾವಃ** = ವೇದಗಳಿಗೆ ಅವಾಂತರಾಭಿಮಾನಿಯಾದ ಗರುಡಶೇಷ, ರುದ್ರಾದಿ ದೇವತೆಗಳು, **ನಃ** = ನಮಗೆ, **ಮಾಧ್ವೀಃ** = ಮೋಕ್ಷಶಾಸ್ತ್ರಗಳ ಅಧ್ಯಯನಕ್ಕಾಗಿ, **ಸಂತು** = ಅನುಗ್ರಹಿಸಲಿ ॥ 4 ॥

**ಹೇ ಸೋಮ** = ಉತ್ಕೃಷ್ಟ ಭಗವಂತನ ಜ್ಞಾನದಿಂದ ಕೂಡಿರುವ ವಾಯುದೇವನೆ, ಸೋಮಲತಾಭಿಮಾನಿ ಚಂದ್ರನೇ, **ದಿವ್ಯಾಯ ಜನ್ಮನೇ** = ಶ್ರೇಷ್ಠವಾದ ಜನ್ಮ ಬರುವುದಕ್ಕಾಗಿ, **ಸ್ವಾದುಃ** = ಮಧುರವಾದ ಶಾಸ್ತ್ರಗಳ ವಚನಗಳು, **ಪವಸ್ವ** = ನನ್ನ ಕಡೆ ಪ್ರವಹಿಸಿ ಪವಿತ್ರಗೊಳಿಸುವಂತೆ ಮಾಡು.

**ಅದಾಭ್ಯಃ** = ಅಸುರಾವೇಶವಿಲ್ಲದ ಪ್ರಯುಕ್ತ ಯಾರಿಂದಲೂ ಹಿಂಸಿಸಲ್ಪಡದ

**ಫಲ ಸ್ನಾನಮ್** (ಎಳೆ ನೀರಿನಿಂದ ಅಭಿಷೇಕ) :

**ಯಾಃ ಫಲಿನೀರಿತ್ಯಸ್ಯ ಅಥರ್ವಣೋ ಭಿಷಜ್‌ಋಷಿಃ ಅನುಷ್ಟುಪ್ । ಚಂದ್ರಾಂತರ್ಯಾಮಿ ನಾರಾಯಣೋ ದೇವತಾ । ಫಲಾಭಿಷೇಕೇ ವಿನಿಯೋಗಃ।**

**ಯಾಃ ಫಲಿನೀರ್ಯಾ ಅಫಲಾ ಅಪುಷ್ಪಾಯಾಶ್ಚ ಪುಷ್ಪಿಣೀಃ ।**
**ಬೃಹಸ್ಪತಿಃ ಪ್ರಸೂತಾಸ್ತಾನೋ ಮುಂಚಂತ್ವಂ ಹಸಃ ॥**

–ಋ–8/5/10

---

ನೀನು, **ಮಿತ್ರಾಯ** = ಮಿತ್ರನಾಮಕ ಸೂರ್ಯನಿಗೆ, **ವರುಣಾಯ** = ಜಲಾಭಿಮಾನಿಯಾದ ವರುಣನಿಗೂ, **ವಾಯವೇ** = ಕೋಣಾಭಿಮಾನಿ ಪ್ರವಹನಿಗೂ, **ಬೃಹಸ್ಪತಯೇ** = ಬೃಹಸ್ಪತ್ಯಾಚಾರ್ಯರಿಗೂ, **ಮಧುಮಾನ್ ಅಸಿ** = ಜ್ಞಾನದಾತೃವಾಗಿದ್ದಿ.

**ಸುಹವೀತು ನಾಮ್ನೇ** = ಮಂಗಳವನ್ನುಂಟು ಮಾಡುವ ನಾಮಧೇಯವುಳ್ಳ, **ಇಂದ್ರಾಯ** = ಪರಮೈಶ್ವರ್ಯಶಾಲಿಯಾದ ಭಗವಂತನ ಜ್ಞಾನಕ್ಕಾಗಿ, **ಸ್ವಾದುಃ ಪವಸ್ವ** = ಸುಕರಗಳು ಹೇಗಾದೀತೋ ಹಾಗೆ ನನ್ನಲ್ಲಿ ಪ್ರವಹಿಸುವಂತೆ ಮಾಡು.

**ಫಲಸ್ನಾನಮ್ ಅರ್ಥ :**

**ಯಾಃ** = ಯಾವ, ಗಿಡಗಳು, **ಫಲಿನೀ** = ಫಲವನ್ನು ಬಿಡುವ ಬಾಳೆ ಮೊದಲಾದವುಗಳಿವೆಯೋ, **ಯಾ** = ಯಾವುದು, **ಅಫಲಾ** = ಫಲ ಬಿಡದಿರುವ ತುಲಸ್ಯಾದಿ ಸಸ್ಯಗಳಿವೆಯೋ, **ಅಪುಷ್ಪಾಃ** = ಪುಷ್ಪವನ್ನೇ ಬಿಡದೆ ಫಲ ಮಾತ್ರ ಬಿಡುವ ಹಲಸು, ಅತ್ತಿ ಮೊದಲಾದವುಗಳೋ, **ಪುಷ್ಪಿಣೀಃ** = ಪುಷ್ಪಗಳನ್ನು ಬಿಟ್ಟು ಫಲ ಬಿಡುವ ಯಾವ ಮಾವು ಮೊದಲಾದವುಗಳು ಇವೆಯೋ, ಅವುಗಳನ್ನು ಕಿತ್ತಿದ ಪಾಪಗಳನ್ನು, **ಬೃಹಸ್ಪತಿಪ್ರಸೂತಾಃ** = ಬೃಹತೀ ಎನ್ನುವ ಭಾರತೀ ಪತಿಯಾದ, ಹಾಗೂ ಬೃಹಸ್ಪತ್ಯಾಚಾರ್ಯರಿಗೂ ಜ್ಞಾನಗಳನ್ನು ನೀಡುವ ವಾಯುದೇವರು ಹಾಗೂ **ತಾಃ** = ಸಕಲ ಔಷಧಿ ವನಸ್ಪತಿಗಳಿಗೆ ಅಭಿಮಾನಿಗಳಾದ ದೇವತೆಗಳು, **ನಃ** = ನಮ್ಮನ್ನು, **ಅಂಹಸಃ** = ಪಾಪಗಳಿಂದ, **ಮುಂಚಂತು** = ಪಾರುಗಾಣಿಸಲಿ

## 38. ಶುದ್ಧೋದಕ ಸ್ನಾನಂ [ಪುರುಷಸೂಕ್ತೇನ] :[19]

ಸಹಸ್ರಶೀರ್ಷೇತಿ ಷೋಳರ್ಚಸ್ಯ ಸೂಕ್ತಸ್ಯ ನಾರಾಯಣ ಋಷಿಃ । ಅನುಷ್ಟುಪ್ ಛಂದಃ । ಅಂತ್ಯಾ ತ್ರಿಷ್ಟುಪ್ । ಪುರುಷರೂಪಿ ನಾರಾಯಣೋ ದೇವತಾ । ಅಭಿಷೇಕೇ ವಿನಿಯೋಗಃ ।

**ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।**

**ಸ ಭೂಮಿಂ ವಿಶ್ವತೋ ವೃತ್ವಾಽತ್ಯತಿಷ್ಠದ್ದಶಾಂಗುಲಮ್ ॥ ೧ ॥**

---

**38. ಶುದ್ಧೋದಕ ಸ್ನಾನಂ ಅರ್ಥ :**

**ಪುರುಷಃ** = ಪೂರ್ಣಷಡ್ಗುಣನಾದ ನಾರಾಯಣನು, **ಸಹಸ್ರಶೀರ್ಷಾ** = ಅನಂತಾನಂತ ಶಿರಸ್ಸುಳ್ಳವನು, **ಸಹಸ್ರಾಕ್ಷಃ** = ಅನಂತಾನಂತ ನೇತ್ರಗಳುಳ್ಳವನು, **ಸಹಸ್ರಪಾತ್** = ಅನಂತಪಾದವುಳ್ಳ, **ಸಃ** = ನಾರಾಯಣನು, **ಭೂಮಿಂ** = ಪ್ರಕೃತಿಭಿಮಾನಿಯನ್ನು, **ಅತಿ** = ಮೀರಿ, **ವಿಶ್ವತಃ, ವೃತ್ವಾ** = ಒಳ ಹೊರಗೆ ವ್ಯಾಪಿಸಿ, **ದಶಾಂಗುಲಂ** = ಅನೇಕ ಪರಿಮಾಣಗಳುಳ್ಳ ಬ್ರಹ್ಮಾಂಡವನ್ನೂ, **ಅತಿ** = ಮೀರಿ, **ಅತಿಷ್ಠತ್** = ನಿಂತಿದ್ದಾನೆ ॥ **1** ॥

---

19. ಪುರುಷಸೂಕ್ತದ ಜೊತೆಗೆ ವಿಷ್ಣುಸೂಕ್ತ (ಋ. 10/90), ಘರ್ಮಸೂಕ್ತ (ಋ. 1/154), ಪವಮಾನ = 9/67, 16032, ಯ ಇಂದೋಃ ಋ 9/114, ಸಮುದ್ರಸೂಕ್ತ - ಋ - 4/58, ಮೊದಲಾದವುಗಳನ್ನೂ ಪಠಿಸಬೇಕು. ಬೃಹತ್ಕಲಶದಲ್ಲಿರುವ ನೀರನ್ನು ಶಂಖದಲ್ಲಿ ಹಾಕಿ, ಅದರಿಂದಲೇ ಅಭಿಷೇಕಿಸಬೇಕು.

ಯ ಇಂದೋರೇಕವರ್ಗಶ್ಚ ಸಮುದ್ರಾದೂರ್ಮಿರೇವ ಚ ।
ಜಿತಂತೇ ಇತ ಸ್ತೋತ್ರಂಚ ಪಠನ್ ಸಂಸ್ನಾಪಯೇದ್ ಹರಿಂ ॥ -ಪ.ಮಾ. 73-74

ವಿ.ಸೂ. : ಯಜುರ್ವೇದದವರು ಏಳನೇ ಮಂತ್ರ "ಸಪ್ತಸ್ಯಾಸನ್ ಪರಿಧಯಃ" ಎಂಬ ಮಂತ್ರವನ್ನು ಇಲ್ಲಿ ಹೇಳಬೇಕು, ಅರ್ಥ ಮುಂದೆ ಕೊಡಲಾಗಿದೆ.

ಘರ್ಮಸೂಕ್ತ, ವಿಷ್ಣುಸೂಕ್ತ, ಪವಮಾನ, ಸಮುದ್ರಸೂಕ್ತಗಳನ್ನು ಮುಂದೆ ಸಂಪೂರ್ಣವಾಗಿ ಕೊಡಲಾಗಿದೆ. ಉಪದೇಶ ಪಡೆದು ಪಠಿಸಬಹುದು.

ದೊಡ್ಡ ದೊಡ್ಡ ಪ್ರತಿಮೆಗಳಿದ್ದರೆ ಅವುಗಳಿಗೆ ನಿತ್ಯ ಪೂಜೆಯಲ್ಲಿ ಅಭಿಷೇಕವಿರುವುದಿಲ್ಲ. ದೀಪಾವಳಿ, ಯುಗಾದಿ ಮೊದಲಾದ ವಿಶೇಷ ದಿನಗಳಲ್ಲಿ ಮಾತ್ರ "ಪ್ರತಿಮಾ ಪೂಜೆ"ಯನ್ನು ಮಾಡಬೇಕು.

ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್ ।
ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥ ೨ ॥
ಏತಾವಾನಸ್ಯ ಮಹಿಮಾಽತೋಜ್ಯಾಯಾಂಶ್ಚ ಪೂರುಷಃ ।
ಪಾದೋಽಸ್ಯ ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥ ೩ ॥

---

**ಯತ್** = ಯಾವುದು ವರ್ತಮಾನ ಕಾಲದಲ್ಲಿರುವುದೋ, **ಯದ್ ಭೂತಂ** = ಯಾವುದು ಹಿಂದೆ ಇತ್ತೋ, **ಯಚ್ಚ** = ಯಾವುದು, ಭವ್ಯಂ = ಮುಂದೆ ಸೃಷ್ಟಿಯಾಗುವುದೋ, **ತತ್** ಇದಂ = ಈ ಜಗತ್ತೆಲ್ಲವೂ, **ಪುರುಷ** ಏವ = ಭಗವಂತನ ಅಧೀನವಾಗಿಯೇ ಇರುವುದು, **ಉತ** = ಹಾಗೆಯೇ, ಉತ್ಕೃಷ್ಟ ಗುಣಗಳಿಂದ ಕೂಡಿರುವ ಭಗವಂತನು, **ಯತ್** = ಯಾವ ಕಾರಣದಿಂದ, **ಅನ್ನೇ** = (ಅನ್ನಂ) ಅನ್ನವನ್ನು ತಿಂದು ಜೀವಿಸುವ ಅಮುಕ್ತ ಜೀವವರ್ಗಕ್ಕೂ, **ಅಮೃತತ್ವಸ್ಯ** = ಮರಣ ರಹಿತರಾದ ಮುಕ್ತರಿಗೂ, **ಈಶಾನಃ** = ಸ್ವಾಮಿಯಾಗಿರುವನು ॥ 2 ॥

ಈ ಭಗವಂತನ, **ಮಹಿಮಾ** = ಮಹಿಮೆಯು, **ಏತಾವಾನ್** = ಇಷ್ಟೇ ಏನು? ಜಗನ್ನಿಯಮ್ಯತ್ವಾದಿಗಳು ಮಾತ್ರವಲ್ಲ, **ಅತೋ** = ಈ ಮೇಲೆ ಹೇಳಿದ ಸಹಸ್ರ ಶಿರಸ್ತ್ವ, ಮುಕ್ತಾಮುಕ್ತ ನಿಯಾಮಕತ್ವಗಳಿಗಿಂತಲೂ, **ಪುರುಷಃ** = ಭಗವಂತನು, **ಜ್ಯಾಯಾನ್** = ಅಧಿಕ ಮಹಿಮೆಯುಳ್ಳವನು, ಅದಾವುದೆಂದರೆ, **ವಿಶ್ವಾಭೂತಾನಿ** = ಸಮಸ್ತ ಚೇತನಾ ಚೇತನಾತ್ಮಕ ಜಗತ್ತು, **ಅಸ್ಯ** = ಈ ಭಗವಂತನ, **ಪಾದಃ** = ಕಾಲುಭಾಗಕ್ಕೆ ಸಮಾನವಾಗಿದೆ. (ಇದನ್ನೂ ಬುದ್ಧ್ಯಾರೂಢಕ್ಕಾಗಿ ಹೇಳಿದ್ದು), **ಅಸ್ಯ** = ಇವನ, **ಅಮೃತಂ** = ತ್ರಿಕಾಲನಾಶ – ರಹಿತವಾದ, **ತ್ರಿಪಾತ್** = ನಾರಾಯಣ, ವಾಸುದೇವ, ವೈಕುಂಠವೆಂಬ ಮೂರು ರೂಪಗಳು, **ದಿವಿ** = ಶ್ವೇತದ್ವೀಪ ಅನಂತಾಸನ, ವೈಕುಂಠವೆಂಬ ಮೂರು ಸ್ಥಾನಗಳಲ್ಲಿ, **ಅಸ್ತಿ** = ಇರುವಂತಹದ್ದಾಗಿದೆ ॥ 3 ॥

---

**ತತಃ ಶುದ್ಧೋದಕಸ್ನಾನಂ ಕಾರಯೇತ್ ಪರಮಾತ್ಮನಃ ।**
**ಪೌರುಷಂ ವೈಷ್ಣವಂ ಘಾರ್ಮಂ ಪವಸ್ವೇತಿ ತ್ರಿವರ್ಗಕಂ ॥**

**ಪ್ರತಿಮಾ ಪಟ್ಟ ವಸ್ತ್ರಾಣಾಂ ನಿತ್ಯ ಸ್ನಾನಂ ನ ಕಾರಯೇತ್ ।**
**ಕಾರಯೇತ್ ಪರ್ವದಿವಸೇ ಯಥಾ ಮಲವಿಕರ್ಷಣಮ್ ॥ – ವ್ಯಾಸಸ್ಮೃತಿ**

**ತ್ರಿಪಾದೂರ್ಧ್ವ ಉದೈತ್ ಪುರುಷಃ ಪಾದೋऽಸ್ಯೇಹಾ ಭವತ್ ಪುನಃ ।**

**ತತೋ ವಿಷ್ವಙ್ ವ್ಯಕ್ರಾಮತ್ ಸಾಶನಾನಶನೇ ಅಭಿ ॥ ೪ ॥**

**ಓಂ ತಸ್ಮಾದ್ವಿರಾಳಜಾಯತ ವಿರಾಜೋ ಅಧಿ ಪೂರುಷಃ ।**

**ಸ ಜಾತೋ ಅತ್ಯರಿಚ್ಯತ ಪಶ್ಚಾದ್ ಭೂಮಿಮಥೋ ಪುರಃ ॥೫ ॥**

---

**ಪುರುಷಃ** = ಶ್ರೀಮನ್ನಾರಾಯಣನು, **ಊರ್ಧ್ವೇ** = ಮೇಲಿನ ಲೋಕಗಳಾದ ಶ್ವೇತ ದ್ವೀಪಾದಿ ತ್ರಿಸ್ಥಾನಗಳಲ್ಲಿ, **ತ್ರಿಪಾತ್** = ನಾರಾಯಣಾದಿ ಮೂರು ರೂಪಗಳಿಂದ, **ಉದೈತ್** = ಸರ್ವದಾ ಇರುತ್ತಾನೆ, **ಅಸ್ಯ** = ಈ ಭಗವಂತನ, **ಪುನಃ** = ಜಗದ್ವಿಲಕ್ಷಣವಾದ, **ಪಾದಃ** = ನಿಯಾಮಕ ರೂಪವು, **ಇಹ** = ಈ ಜಗತ್ತಿನಲ್ಲಿ, **ಅಭವತ್** = ಯಾವಾಗಲೂ ಇರುತ್ತದೆ, ಜಗತ್ತಿನಲ್ಲಿಯೂ ಮೇರು, ಸೂರ್ಯ, ಅಗ್ನಿಲೋಕ, ಧ್ರುವಲೋಕಾದಿಗಳಲ್ಲೂ ಇರುತ್ತದೆ. **ತತಃ** = ಇಂತಹ ನಿಯಮ್ಯ ಶಕ್ತಿಯುಳ್ಳದ್ದರಿಂದಲೇ, **ವಿಶ್ವಙ್** = ಸರ್ವತ್ರ ವ್ಯಾಪಿಸಿಕೊಂಡಿರುವ, **ತ್ರಿಪಾತ್** = ನಾರಾಯಣ–ವಾಸುದೇವ ವೈಕುಂಠ ರೂಪತ್ರಯವುಳ್ಳ ಭಗವಂತನು; **ಸಾಶನ** = ಊಟ ಮಾಡಿದರೂ, **ಅನಶನ** = ಊಟ ಮಾಡದಿದ್ದರೂ, **ಅಭೀಃ** = ಭಯರಹಿತನಾಗಿರುವನು, ಅಥವಾ **ಸಾಶನ** = ಅನ್ನವನ್ನು ಉಪಜೀವಿಸಿರುವ ಮನುಷ್ಯ ಋಷ್ಯಾದಿಗಳು, **ಅನಶನ** = ಅಮೃತಾಂಧಸರಾದ ದೇವತೆಗಳು ಇವರನ್ನು, **ಅಭೀಃ** = ಉದ್ಧಾರಕ್ಕಾಗಿ, **ವ್ಯಕ್ರಾಮತ್** = ಎಲ್ಲೆಡೆಯಲ್ಲೂ ವ್ಯಾಪಿಸಿಕೊಂಡಿರುವನು ॥ 4 ॥

**ತಸ್ಮಾತ್** = ಪುರುಷರೂಪಿ ನಾರಾಯಣನಿಂದಲೇ, **ವಿರಾಟ್** = ಸುವರ್ಣಾತ್ಮಕ ಬ್ರಹ್ಮಾಂಡವು, **ಅಜಾಯತ** = ಜನಿಸಿತು, **ವಿರಾಜಃ** = ಬ್ರಹ್ಮಾಂಡದಿಂದ, **ಪುರುಷಃ** = ವಿರಾಟ್ ನಾಮಕ ಬ್ರಹ್ಮದೇವನು, **ಅಧಿ** = ಅಧಿಪತಿಯಾಗಿ, **ಅಜಾಯತಃ** = ಜನಿಸಿದನು, **ತಸ್ಮಾತ್** = ಪದ್ಮನಾಭರೂಪಿ ನಾರಾಯಣನಿಂದ, **ವಿರಾಟ್‌ಪುರುಷ** = ಜೀವಾಭಿಮಾನಿ ಚತುರ್ಮುಖನು, **ಅಜಾಯತ** = ಪುನಃ ಹುಟ್ಟಿದನು, **ತಸ್ಮಾತ್** = ಹೀಗೆ ಭಗವಂತನಿಂದ ಹುಟ್ಟಿದ್ದರಿಂದಲೇ, **ವಿರಾಜಃ** = ವಿರಾಟ್ ಬ್ರಹ್ಮನಿಗಿಂತಲೂ, **ಪುರುಷಃ** = ಪುರುಷರೂಪಿ ನಾರಾಯಣನು, **ಅಧಿ** = ಅಧಿಕನಾಗಿರುವನು, **ಸಃ** = ಭಗವಂತನು, ಎರಡು ಬಾರಿ ಜನಿಸಿದ ಚತುರ್ಮುಖ ಬ್ರಹ್ಮದೇವನು, **ಪಶ್ಚಾತ್** = ತನ್ನ ಅನಂತರ ಹುಟ್ಟಿದ, **ಭೂಮಿಂ** = ಭೂಮಿ

**ಓಂ ಯತ್ ಪುರುಷೇಣ ಹವಿಷಾ ದೇವಾ ಯಜ್ಞಮತನ್ವತ ।**

**ವಸಂತೋ ಅಸ್ಯಾಸೀದಾಜ್ಯಂ ಗ್ರೀಷ್ಮ ಇಧ್ಮಃ ಶರದ್ಧವಿಃ ॥ ೬ ॥**

**ಓಂ ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ ಪುರುಷಂ ಜಾತಮಗ್ರತಃ ।**

**ತೇನ ದೇವಾ ಅಯಜಂತ ಸಾಧ್ಯಾ ಋಷಯಶ್ಚ ಯೇ ॥ ೭ ॥**

---

ಶಬ್ದಿತ ಬ್ರಹ್ಮಾಂಡವನ್ನು, **ಅಥೋ** = ಹಾಗೂ, **ಪುರಃ** = ತನಗಿಂತ ಮೊದಲು ಹುಟ್ಟಿದ ಬ್ರಹ್ಮಾಂಡವನ್ನೂ, **ಅತ್ಯರಿಚ್ಯತ** = ಮೀರಿ ಶ್ರೇಷ್ಠವಾಗಿ ಇದ್ದನು ॥ **5** ॥

**ಯತ್ ಯದಾ** = ಯಾವಾಗ, **ದೇವಾಃ** = ಬ್ರಹ್ಮಸೃಷ್ಟ ದೇವತೆಗಳು, **ಪುರಷೇಣ** = ಪುರುಷನೆಂಬ ಹೆಸರುಳ್ಳ ಚತುರ್ಮುಖನನ್ನೇ, **ಹವಿಷಾ** = ಮನಸ ಸಂಕಲ್ಪಿಸಿದ ಹವಿಸ್ಸಿನಿಂದ, **ಯಜ್ಞಂ** = ಯಜ್ಞವನ್ನು, **ಅತನ್ವತ** = ಮಾಡಿದರೋ, (ತದಾ= ಆವಾಗ), **ಅಸ್ಯ** = ಆ ಯಜ್ಞಕ್ಕೆ, **ವಸಂತಃ** = ಬೆಳೆಯ ಸಮೃದ್ಧಿವುಳ್ಳ ವಸಂತ ಋತುವಿನ ಅಭಿಮಾನಿಯು, **ಆಜ್ಯಂ** = ತುಪ್ಪವಾಗಿಯೂ, **ಗ್ರೀಷ್ಮ** = ಒಣಗಿರುವ ಕಟ್ಟಿಗೆ ವಿಪುಲವಾಗಿ ಸಿಗುವ ಗ್ರೀಷ್ಮ ಋತುವಿನ ಅಭಿಮಾನಿಯು, **ಇಧ್ಮಃ** = ಇಂಧನವಾಗಿಯೂ, **ಶರತ್** = ಧಾನ್ಯಾದಿಗಳ ಅಭಿವೃದ್ಧಿಯುಳ್ಳ ಶರದೃತುವಿನ, ಅಭಿಮಾನಿಯೂ, **ಹವಿಃ** = ಪುರೋಡಾಶವಾಗಿಯೂ, **ಆಸೀತ್** = ಆಗಿದ್ದಿತು. (ಹೋಮಕ್ಕೆ ಬೇಕಾದ ವಸ್ತು ಸಿದ್ಧವಾಗಿರಲ್ಲವಾದ್ದರಿಂದ ಆಯಾಯ ವಸ್ತುಗಳ ಅಭಿಮಾನಿಗಳನ್ನೇ ಹೋಮದ್ರವ್ಯಗಳಾಗಿ ಅನುಸಂಧಾನಿಸಿ ಮಾನಸಿಕ ಯಜ್ಞದಿಂದ ಹರಿಯನ್ನರ್ಚಿಸಿದರೆಂದರ್ಥ) ॥ **6** ॥

**ಅಗ್ರತಃ** = ಮೊದಲು, **ಜಾತಂ** = ಭಗವಂತನಿಂದ ಜನಿಸಿದ, **ತಂ** = ಹಿಂದೆ ಹೇಳಿದ, **ಯಜ್ಞಂ** = ಯಜ್ಞದಲ್ಲಿ ಪಶುವನ್ನಾಗಿ ಸಂಕಲ್ಪಿಸಿದ, **ಪುರುಷಂ** = ಪುರುಷನಾಮಕ ಚತುರ್ಮುಖನನ್ನು, ಬರ್ಹಿಷಿ = ತಮ್ಮ ಮಾನಸಿಕ ಯಜ್ಞದಲ್ಲಿ ಅಥವಾ ದರ್ಭೆಗಳಲ್ಲಿ, **ಪ್ರೌಕ್ಷನ್** = ಸಂಸ್ಕಾರಕ್ಕಾಗಿ ಪ್ರೋಕ್ಷಿಸಿದರು. ಅಥವಾ ಬ್ರಹ್ಮದೇವರು, **ಅಗ್ರತಃ ಜಾತಂ ಪುರುಷಂ** = ಮೊದಲು ಬ್ರಹ್ಮನಿಂದ ಜನಿಸಿದ ರುದ್ರದೇವನನ್ನು ಬರ್ಹಿಷಿ, ಪ್ರೌಕ್ಷನ್ ಎಂದು ವ್ಯಾಖ್ಯಾನಿಸಬಹುದು.

**ತೇನ** = ಆ ಬ್ರಹ್ಮದೇವನಿಂದಲೇ, **ಯೇ** = ಯಾವ, **ದೇವಾಃ** = ದೇವತೆಗಳು, **ಸಾಧ್ಯಃ** = ಸಾಧ್ಯರೆಂಬ ಗಣಗಳೂ, **ಋಷಯಶ್ಚ** = ಋಷಿಗಳಿರುವರೋ ಅವರೆಲ್ಲರೂ, **ಯಜ್ಞಂ** = ಯಜ್ಞನಾಮಕ ಶ್ರೀಹರಿಯನ್ನು, **ಅಯಜಂತ** = ಆರಾಧನೆ ಮಾಡಿದರೋ (ಹಾಗೆ ಭಕ್ತರೇ, ನೀವು ಪೂಜಾದಿಗಳಿಂದ ಭಗವಂತನನ್ನು ಅರ್ಚಿಸಿರಿ) ॥ **7** ॥

ಓಂ ತಸ್ಮಾದ್ ಯಜ್ಞಾತ್ ಸರ್ವಹುತಃ ಸಂಭೃತಂ ಪೃಷದಾಜ್ಯಮ್ ।
ಪಶೂನ್ ತಾನ್ ಶ್ಚಕ್ರೇ ವಾಯವ್ಯಾನಾರಣ್ಯಾನ್ ಗ್ರಾಮ್ಯಾಶ್ಚ ಯೇ ॥ ೮ ॥

ಓಂ ತಸ್ಮಾದ್ ಯಜ್ಞಾತ್ ಸರ್ವಹುತ ಋಚಃ ಸಾಮಾನಿ ಜಜ್ಞಿರೇ ।
ಛಂದಾಂಸಿ ಜಜ್ಞಿರೇ ತಸ್ಮಾದ್ ಯಜುಸ್ತಸ್ಮಾದಜಾಯತ ॥ ೯ ॥

---

**ಸರ್ವಹುತಃ** = ಸರ್ವದೇವತೆಗಳಿಂದಲೂ ಆಹ್ವಾನಿಸಲ್ಪಟ್ಟ, **ತಸ್ಮಾತ್, ಯಜ್ಞಾತ್** = ಆ ಯಜ್ಞನಾಮಕ ಭಗವಂತನಿಂದ ಅಥವಾ **ಸರ್ವಹುತಃ** = ತಸ್ಮಾತ್, **ಯಜ್ಞಾತ್** = ಸರ್ವರಿಂದಲೂ ಆರಾಧಿಸಲ್ಪಡಬೇಕಾದ ಮಾನಸಿಕ ಯಜ್ಞದಿಂದ, **ಪೃಷದಾಜ್ಯಂ** = ಹಾಲು, ಮೊಸರು ಮೊದಲಾದ ಯಜ್ಞೀಯ ವಸ್ತುಗಳು, **ಸಂಭೃತಂ** = ಸೃಷ್ಟಿಸಲ್ಪಟ್ಟಿತು.

ಹಾಗೆಯೇ, **ವಾಯವ್ಯಾನ್** = ವಾಯುದೇವತಾಕವಾದ ಪ್ರಾಣಿಗಳನ್ನು, **ಆರಣ್ಯಾನ್** = ಕಾಡಿನಲ್ಲಿಯೇ ಹುಟ್ಟಿ ಬೆಳೆಯುವ ಹುಲಿ, ಜಿಂಕೆ ಮೊದಲಾದ ಪ್ರಾಣಿಗಳನ್ನು, **ಯೇಚ ಗ್ರಾಮ್ಯಾಃ** = ಗ್ರಾಮಗಳಲ್ಲಿ ವಾಸಿಸುವ ಪ್ರಾಣಿಗಳಾದ, **ತಾಂಶ್ಚ ಪಶೂನ್** = ಪ್ರಸಿದ್ಧಗಳಾದ ದನ, ಕುರಿ, ಆಡು ಇವುಗಳನ್ನು, **ಚಕ್ರೆ** = ಭಗವಂತನು ಸೃಷ್ಟಿಸಿದನು ॥ **8** ॥

**ಸರ್ವಹುತಃ** = ಸರ್ವರಿಗೂ ಉಪಜೀವ್ಯನಾದ, **ತಸ್ಮಾತ್ಯಜ್ಞಾತ್** = ಯಜ್ಞನಾಮಕ ಭಗವಂತನಿಂದ, **ಋಚಃ** = **ಋಗ್ವೇದ** ಮಂತ್ರಗಳು, ತದಾಭಿಮಾನಿಗಳು, **ಸಾಮಾನಿ** = ಸಾಮವೇದ ಮಂತ್ರಗಳು, **ಜಜ್ಞಿರೇ** = ಅಭಿವ್ಯಕ್ತವಾದವು, **ತಸ್ಮಾತ್** = ಆ ಭಗವಂತನಿಂದಲೇ, **ಛಂದಾಂಸಿ** = ಗಾಯತ್ರೀ ಮೊದಲಾದ ಛಂದಸ್ಸುಗಳೂ, **ಜಜ್ಞಿರೇ** = ಪ್ರಕಾಶಕ್ಕೆ ಬಂದವು, **ತಸ್ಮಾತ್** = ಅವನಿಂದಲೇ, **ಯಜುಃ** = ಯಜುರ್ವೇದ ಮಂತ್ರಗಳೂ, **ಅಜಾಯತ** = ವ್ಯಕ್ತವಾದವು ॥ **9** ॥

ಓಂ ತಸ್ಮಾದಶ್ವಾ ಅಜಾಯಂತ ಯೇ ಕೇ ಚೋಭಯಾದತಃ।
ಗಾವೋ ಹ ಜಜ್ಞಿರೇ ತಸ್ಮಾತ್ ತಸ್ಮಾಜ್ಜಾತಾ ಅಜಾವಯಃ
॥ ೧೦ ॥

ಓಂ ಯತ್ ಪುರುಷಂ ವ್ಯದಧುಃ ಕತಿಧಾ ವ್ಯಕಲ್ಪಯನ್।
ಮುಖಂ ಕಿಮಸ್ಯ ಕೌ ಬಾಹೂ ಕಾ ಊರೂ ಪಾದಾ ಉಚ್ಯೇತೇ
॥ ೧೧ ॥

---

**ತಸ್ಮಾತ್** = ಭಗವಂತನಿಂದಲೇ, **ಅಶ್ವಾಃ** = ಅಶ್ವಮೇಧಕ್ಕೆ ಬೇಕಾದ ಕುದುರೆಗಳೂ, **ಯೇ ಕೇ ಚ** = ಯಾವ ಪ್ರಾಣಿಗಳು, **ಉಭಯಾದತಃ** = ಮೇಲೆ ಕೆಳಗೆ ಹಲ್ಲುಗಳಿವೆಯೋ ಅಂತ ಕತ್ತೆ ಮೊದಲಾದ ಪ್ರಾಣಿಗಳು, **ಅಜಾಯಂತ** = ಸೃಷ್ಟವಾದವು, **ತಸ್ಮಾದ್ ಹ** = ಆ ಭಗವಂತನಿಂದಲೇ, **ಗಾವಃ** = ಯಜ್ಞೋಪಯೋಗಿ ಹಸುಗಳು, **ಜಾತಾಃ** = ಹುಟ್ಟಿದವು, **ತಸ್ಮಾತ್** = ಆ ಭಗವಂತನಿಂದಲೇ, **ಅಜಾವಯಃ** = ಆಡು, ಕುರಿಗಳು, **ಜಾತಾಃ** = ಹುಟ್ಟಿದವು ॥ 10 ॥

**ಯತ್ ಯದಾ** = ಯಾವಾಗ, **ಪುರುಷಂ** = ಪುರುಷನಾಮಕ ಭಗವಂತನನ್ನು, **ವ್ಯದಧುಃ** = ಮಾನಸಿಕ ಯಜ್ಞ ಮಾಡಲು ನಿಶ್ಚಯಿಸಿದರೋ ಆಗ, **ಕತಿಧಾವ್ಯಕಲ್ಪಯನ್** = ಎಷ್ಟು ರೀತಿಯಿಂದ ಕಲ್ಪಿಸಿಕೊಂಡರು (ತದಾ = ಆವಾಗ), **ಅಸ್ಯ** = ಭಗವಂತನ, **ಮುಖಂ** = ಮುಖವನ್ನು, **ಕಿಂ** = ಏನೆಂದು, ಕಲ್ಪಿಸಿಕೊಂಡರು, **ಬಾಹೂ** = ಎರಡು ಬಾಹುಗಳನ್ನು, **ಕೌ** = ಯಾವ ರೀತಿ ಚಿಂತಿಸಿದರು. **ಪಾದೌ ಕೌ** = ಅವನ ಪಾದಗಳನ್ನು, **ಕೌ** = ಏನೆಂದು, **ಉಚ್ಯತೇ** = ಹೇಳಲ್ಪಡುತ್ತವೆ ॥ 11 ॥

**ಓಂ ಬ್ರಾಹ್ಮಣೋಽಸ್ಯ ಮುಖಮಾಸೀದ್ ಬಾಹೂ ರಾಜನ್ಯಃ ಕೃತಃ ।**

**ಊರೂ ತದಸ್ಯ ಯದ್ ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ ॥ ೧೨ ॥**

**ಓಂ ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ ।**

**ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ ವಾಯುರ-ಜಾಯತ ॥೧೩॥**

---

**ಅಸ್ಯ** = ಈ ಪುರುಷನ, **ಮುಖಂ** = ಮುಖದಿಂದ, ಬ್ರಾಹ್ಮಣಃ **ಆಸೀತ್** = ಬ್ರಾಹ್ಮಣಜಾತ್ಯಭಿಮಾನಿ ಚತುರ್ಮುಖ ಬ್ರಹ್ಮನು ಹುಟ್ಟಿದನು. **ಬಾಹೂ** = ತೋಳುಗಳಿಂದ, **ರಾಜನ್ಯಃ** = ಕ್ಷತ್ರಿಯ ಜಾತಿಯೂ, ಹಾಗೂ ತದಭಿಮಾನಿ ವಾಯುವು ಜನಿಸಿದನು, **ವೈಶ್ಯ ಇತಿಯತ್** = ವೈಶ್ಯಜಾತಿ ಹಾಗೂ ತದಭಿಮಾನಿ ಎಂದು ಯಾರೂ ಪ್ರಸಿದ್ಧರೋ ಅವರು, **ಊರೂ** =ತೊಡೆಗಳಿಂದ ಹುಟ್ಟಿದರು, **ಶೂದ್ರಃ** = ಶೂದ್ರಜಾತಿ ಹಾಗೂ ತದಭಿಮಾನಿ ಅಶ್ವಿನ್ಯಾದಿಗಳು, **ಪದ್ಭ್ಯಾಂ** = ಪಾದದಿಂದ, **ಅಜಾಯತ** = ಹುಟ್ಟಿದರು ॥ 12 ॥

**ನಾಭ್ಯಾ** = ನಾಭಿಯಿಂದ, **ಅಂತರಿಕ್ಷಂ** = ಅಂತರಿಕ್ಷಲೋಕ ಹಾಗೂ ಅಂತರಿಕ್ಷಾಭಿಮಾನಿ ದೇವತೆಯು, **ಆಸೀತ್** = ಜನಿಸಿತು, **ಶೀರ್ಷ್ಣಃ** = ತಲೆಯಿಂದ, **ದ್ಯೌಃ** = ಸ್ವರ್ಗಲೋಕ ಹಾಗೂ ದ್ಯುಲೋಕಾಭಿಮಾನಿಯು, **ಸಮವರ್ತತ** = ಹುಟ್ಟಿದವು, **ಪದ್ಭ್ಯಾಂ** = ಪಾದಗಳೆರಡರಿಂದ, **ಭೂಮಿಃ** = ಭೂಮಿ ಹಾಗೂ ತದಭಿಮಾನಿಯಾದ, ಧರಾದೇವಿಯರು, **ಶ್ರೋತ್ರಾತ್** = ಕಿವಿಯಿಂದ, **ದಿಶಃ** = ದಿಕ್ಕುಗಳು, ಹಾಗೂ ತದಭಿಮಾನಿ ಇಂದ್ರಾದಿಗಳು, **ತಥಾ** = ಹಾಗೆಯೇ, **ಲೋಕಾನ್** = ಉಳಿದ ಹನ್ನೊಂದು ಲೋಕಗಳನ್ನೂ, ಸೃಷ್ಟಿಸಿದನೆಂದು, **ಅಕಲ್ಪಯನ್** = ಮನಸ್ಸಿನಲ್ಲಿ ಧ್ಯಾನಿಸಿದರು. ॥ 13 ॥

ಓಂ ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋ ದ್ಯೌಃ ಸಮವರ್ತತ।
ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್ ತಥಾ ಲೋಕಾ ಅಕಲ್ಪ
ಯನ್ ॥ ೧೪ ॥

ಓಂ ಸಪ್ತಾಸ್ಯಾಸನ್ ಪರಿಧಯಸ್ತ್ರಿಃ ಸಪ್ತ ಸಮಿಧಃ ಕೃತಾಃ।
ದೇವಾ ಯದ್ ಯಜ್ಞಂ ತನ್ವಾನಾ ಅಬಧ್ನನ್ ಪುರುಷಂ
ಪಶುಮ್ ॥ ೧೫ ॥

---

**ಮನಸಃ** = ಭಗವಂತನ ಮನಸ್ಸಿನಿಂದ, **ಚಂದ್ರಮಾಃ** = ಚಂದ್ರನು, **ಜಾತಃ** = ಹುಟ್ಟಿದನು, **ಚಕ್ಷೋಃ** = ಕಣ್ಣುಗಳಿಂದ, **ಸೂರ್ಯಃ** = ಸೂರ್ಯದೇವನು, **ಅಜಾಯತ** = ಹುಟ್ಟಿದನು, **ಮುಖಾತ್** = ಮುಖದಿಂದ, (ಬಾಯಿಯಿಂದ) **ಇಂದ್ರಶ್ಚ, ಅಗ್ನಿಶ್ಚ** = ಇಂದ್ರಾಗ್ನಿ ದೇವತೆಗಳು, **ಪ್ರಾಣಾತ್** = ಪ್ರಾಣದಿಂದ, **ವಾಯುಃ** = ಮುಖ್ಯ ಪ್ರಾಣನೂ, **ಅಜಾಯತ** = ಹುಟ್ಟಿದರು ॥ 14 ॥

**ಯತ್** = ಯಾವಾಗ, **ದೇವಾಃ** = ರುದ್ರಾದಿಗಳು, **ಯಜ್ಞಂ** = ಮಾನಸಿಕ ಯಜ್ಞವನ್ನು, **ತನ್ವಾನಾಃ** = ಭಗವಂತ ಪ್ರೀತಿಗಾಗಿ ಮಾಡುವವರಾಗಿ, **ಪುರುಷಂ** = ಚತುರ್ಮುಖ ಬ್ರಹ್ಮನನ್ನೆ, **ಪಶುಂ** = ಯಜ್ಞದ ಪಶುವೆಂಬುದಾಗಿ ಭಾವಿಸಿ, **ಅಬಧ್ನನ್** = ಕಂಬಕ್ಕೆ ಕಟ್ಟಿದಂತೆ ಚಿಂತಿಸಿದರೋ ಆಗ, **ಅಸ್ಯ** = ಈ ಯಜ್ಞದಲ್ಲಿ, **ಸಪ್ತ** = ಸಪ್ತ ಛಂದಸ್ಸುಗಳು, **ಪರಿಧಯಃ** = ಪರಿಸ್ತರಣಗಳಾಗಿ, **ಆಸನ್** = ಅದವು, **ತ್ರಿಸ್ಸಪ್ತ** = ಇಪ್ಪತ್ತೊಂದು ವಸ್ತುಗಳು, **#ಸಮಿಧಃ** = ಸಮಿತ್ತುಗಳಾಗಿ, **ಆಸನ್** = ಚಿಂತಿಸಲ್ಪಟ್ಟವು, (ಯಾವುದೇ ವಸ್ತುಗಳು ಇಲ್ಲದಿದ್ದಾಗ ಆ ಕರ್ಮವನ್ನು ಬಿಡದೆ ಮಾನಸಿಕೋಪಚಾರಗಳಿಂದಾದರೂ ಪೂಜಿಸಬೇಕೆಂಬ ಶಿಕ್ಷಣವನ್ನು ದೇವತೆಗಳು ಮಾನವರಿಗೆ ನೀಡಿದ್ದಾರೆ) ॥ 15 ॥

**ಓಂ ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ।**

**ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥ ೧೬ ॥ ಹರಿಃ ಓಮ್ ॥**

---

**ದೇವಾಃ** = ಬ್ರಹ್ಮಾದಿಗಳು, **ಯಜ್ಞಂ** = ಯಜ್ಞನಾಮಕ ಶ್ರೀಹರಿಯನ್ನು, **ಯಜ್ಞೇನ** = ಮಾನಸಿಕ ಯಜ್ಞದಿಂದ, **ಅಯಜಂತ** = ಆರಾಧಿಸಿದರು, (ನಾವು ಅಧ್ಯಯನಾದಿಗಳಿಂದ ಆರಾಧಿಸೋಣ), **ತಾನಿಧರ್ಮಾಣಿ** = ಅವರು ಆಚರಿಸಿದ ಧರ್ಮಗಳೇ, **ಪ್ರಥಮಾನಿ ಆಸನ್** = ಶ್ರೇಷ್ಠವಾಗಿ ಇತರರಿಗೂ ಆಚರಣೆಗೆ ಯೋಗ್ಯವಾದವು, **ಹ** = ಹಾಗೆ ಧರ್ಮಾನುಷ್ಠಾನ ಮಾಡಿದ್ದರಿಂದಲೇ, **ಮಹಿಮಾನಃ** = ಮಹಿಮೆಯುಳ್ಳವರಾದ, **ತೇ** = ದೇವರ್ಷ್ಯಾದಿಗಳೆಲ್ಲರೂ, **ಯತ್ರ** = ಯಾವ ಸ್ಥಾನದಲ್ಲಿ, **ಪೂರ್ವೇ** = ಹಿಂದಿನ ಕಲ್ಪಗಳಲ್ಲಿ ಮುಕ್ತರಾದ, **ಸಾಧ್ಯಾಃ** = ಸಾಧ್ಯನಾಮಕ **ದೇವಾಃ** = ದೇವತೆಗಳು, **ಸಂತಿ** = ಇರುವರೋ, ಅಂತಹ, **ನಾಕಂ** = ಪುನರಾವೃತ್ತಿ-ರಹಿತವಾದ್ದರಿಂದ ದುಃಖಲೇಶವೂ ಇಲ್ಲದ ಮೋಕ್ಷವನ್ನು, **ಸಚಂತ** = ಪಡೆದರು. ॥ 16 ॥

## ಅಲಂಕಾರ ಪೂಜೆ

**39. ವಸ್ತ್ರ ಸಮರ್ಪಣಮ್ :**[20] (ವಸ್ತ್ರವನ್ನು ಸಮರ್ಪಿಸುವುದು)

**ಔಚಥ್ಯೋ ದೀರ್ಘತಮಾ-ತ್ರಿಷ್ಟುಪ್-ಮಿತ್ರಾವರುಣೌ - ವಸ್ತ್ರಸಮರ್ಪಣೆ ವಿನಿಯೋಗಃ ।**

**ಓಂ ಯುವಂ ವಸ್ತ್ರಾಣಿ ಪೀವಸಾ ವಸಾಥೇ ಯುವೋರಚ್ಛಿದ್ರಾ ಮಂತವೋ ಹ ಸರ್ಗಾಃ ।**

**ಅವಾತಿರತಮನೃತಾನಿ ವಿಶ್ವ ಋತೇನ ಮಿತ್ರಾವರುಣಾ ಸಚೇಥೇ॥** -ಋ-1/152/1

**ಓಂ ನಮೋ ನಾರಾಯಣಾಯ ವಸ್ತ್ರಾರ್ಥೇ ತುಲಸೀಂ ಸಮರ್ಪಯಾಮಿ ॥**

---

39. **ವಸ್ತ್ರ ಸಮರ್ಪಣೆ ಅರ್ಥ :**

**ಮಿತ್ರಾವರುಣಾ** = ಮಿತ್ರಾವರುಣರೇ, **ಪೀವಸಾ** = ದೃಢದೇಹವುಳ್ಳ, **ಯುವಂ** = ನೀವಿಬ್ಬರೂ, **ವಸ್ತ್ರಾಣಿ** = ವಸ್ತ್ರಗಳನ್ನು, **ವಸಾಥೆ** = ಧರಿಸಿದ್ದೀರಿ, **ಯುವೋಃ** = ನಿಮ್ಮೀರ್ವರ, **ಸರ್ಗಾಃ** = ಸೃಷ್ಟಿಗಳು, **ಅಚ್ಛಿದ್ರಾಃ** = ಕಲಂಕರಹಿತವಾಗಿಯೂ, **ಮಂತವಃ** = ಸುಂದರವಾಗಿಯೂ, **ಹ** = ಇರುವವು ನೀವು, **ವಿಶ್ವಾ** = ಸಮಸ್ತವಾದ, **ಅನೃತಾನಿ** = ಸುಳ್ಳಿನಿಂದ ಉಂಟಾದ ಪಾಪಗಳನ್ನು, **ಅವಾತಿರತಂ** = ಪರಿಹರಿಸುವಿರಿ.

---

20. ಸ್ನಾನಾನಂತರ ಪ್ರತಿಮೆಗಳನ್ನು ಒರೆಸಿ ಪೀಠದಲ್ಲಿರಿಸಿ ವಸ್ತ್ರಗಳನ್ನು ಅರ್ಪಿಸಬೇಕು.
**ತತೋಽಂಗ ಮಾರ್ಜನಂ ವಸ್ತ್ರಂ ಪೀತಂ ಚ ಪರಿಧಾನಕಂ ।**
ಪ್ರತಿಮೆಯನ್ನು ಮಾತ್ರ ಒರೆಸಿಡಬೇಕು. ಸಾಲಿಗ್ರಾಮವನ್ನು ವಸ್ತ್ರದಿಂದ ಒರೆಸಿ ಇಡಬಾರದು. ಇದು ನಮ್ಮ ಅನುಕೂಲಕ್ಕಾಗಿ
**ಪ್ರತಿಮಾ ಮಾರ್ಜನಂ ಕುರ್ಯಾತ್ ಸಾಲಿಗ್ರಾಮಸ್ಯ ನೈವ ತತ್ ॥**

## 40. ಯಜ್ಞೋಪವೀತ ಸಮರ್ಪಣೆ :[21]

ಪರಬ್ರಹ್ಮಋಷಿಃ = ಪರಮಾತ್ಮ – ತ್ರಿಷ್ಟುಪ್

**ಓಂ ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇರ್ಯತ್ ಸಹಜಂ ಪುರಸ್ತಾತ್ । ಆಯುಷ್ಯಮಗ್ರ್ಯಂ ಪ್ರತಿಮುಂಚ ಶುಭ್ರಂ ಯಜ್ಞೋಪವೀತಂ ಬಲಮಸ್ತು ತೇಜಃ ।**

**ಓಂ ನಮೋ ನಾರಾಯಣಾಯ ಯಜ್ಞೋಪವೀತಂ ಸಮರ್ಪಯಾಮಿ॥**

---

**40. ಯಜ್ಞೋಪವೀತ ಅರ್ಪಣೆಯ ಮಂತ್ರಾರ್ಥ :**

**ಯಜ್ಞೋಪವೀತಂ** = ಯಜ್ಞೋಪವೀತವು, **ಪರಮಂ** = ಅತ್ಯಂತವಾಗಿ, **ಪವಿತ್ರಂ** = ಪವಿತ್ರವಾಗಿದೆ, (ಪವಿ = ವಜ್ರ, ತ್ರ = ರಕ್ಷಣೆ) **ಯತ್** = ಯಾವ್ ಜನಿವಾರವು, **ಪ್ರಜಾಪತೇಃ** = ಬ್ರಹ್ಮದೇವನಿಗೆ, **ಪುರಸ್ತಾತ್ ಸಹಜಂ** = ಹುಟ್ಟಿದಾಗಿನಿಂದಲೂ ಸ್ವಾಭಾವಿಕವಾಗಿಯೇ ಇದೆಯೋ, ಹಾಗೂ **ಆಯುಷ್ಯಂ** = ಆಯುಸ್ಸನ್ನು ಹೆಚ್ಚಿಸುವಂತಹದ್ದೂ, **ಅಗ್ರ್ಯಂ** = ಇತರ ಸೂತ್ರಗಳಿಗಿಂತಲೂ ಶ್ರೇಷ್ಠವಾದದ್ದು, **ಬಲಂ** = ಬಲಪ್ರದವಾದ, **ಯಜ್ಞೋಪವೀತಂ** = ಯಜ್ಞೋಪವೀತವನ್ನು ಭಗವಂತನೇ ನೀನು, ಧರಿಸು, **ತೇಜಃ** = ಅದಕ್ಕೆ ಪ್ರತಿಯಾಗಿ ಬ್ರಹ್ಮತೇಜಸ್ಸನ್ನು ಕೊಟ್ಟು ಪಾಪಗಳನ್ನು, **ಪ್ರತಿಮುಂಚ** = ಬಿಡಿಸು.

---

21. ಯಜ್ಞೋಪವೀತವೆಂದರೆ ಯಜ್ಞಯಾಗಾದಿಗಳಿಗಾಗಿ ಅರ್ಹತೆ ನೀಡುವ ಅಧಿಕಾರ ಸೂತ್ರವಾಗಿದೆ. ಯಜ್ಞ ನಾಮಕ ಭಗವಂತನ ಸಮೀಪಕ್ಕೆ ಕರೆದೊಯ್ಯುವಂತಹದ್ದು ಹೌದು. ಯಜ್ಞೋಪವೀತವನ್ನು ಲಕ್ಷ್ಮೀ ಮೊದಲಾದ ದೇವತಾ ಪೂಜೆಯಲ್ಲೂ ಅರ್ಪಿಸಬೇಕು. ಇವರಿಗೆ ವೇದ ವಿದ್ಯಾಧಿಕಾರವಿರುವುದರಿಂದ, ಅರ್ಪಿಸಿದರೆ ತಪ್ಪಾಗುವುದಿಲ್ಲ. ಇದನ್ನು ಅರ್ಪಿಸದಿದ್ದರೆ ಹದಿನಾರು ಪೂಜೆ ಅರ್ಪಿಸಿ-ದಂತಾಗುವುದಿಲ್ಲ.

## 41. ಆಭರಣ ಸಮರ್ಪಣೆ :[22]

**ಹಿರಣ್ಯರೂಪಃ –ಗೃತ್ಸಮದಃ –ತ್ರಿಷ್ಟುಪ್ –ಅಪಾಂನಪಾತ್ ದೇವತಾ – ಆಭರಣ ಸಮರ್ಪಣೇ ವಿನಿಯೋಗಃ।**

**ಓಂ ಹಿರಣ್ಯ ರೂಪಃ ಸ ಹಿರಣ್ಯ ಸಂದೃಗಪಾಂ ನಪಾತ್ಸೇದು ಹಿರಣ್ಯವರ್ಣಃ । ಹಿರಣ್ಯಯಾತ್ ಪರಿ ಯೋನೇರ್ನಿಷದ್ಯಾ ಹಿರಣ್ಯದಾ ದದತ್ಯನ್ನ ಮಸ್ಮೈ ॥ ಓಂ ॥**

**ಕೌಸ್ತುಭಾದ್ಯಾಭರಣಾನಿ, ಚಕ್ರದ್ಯಾಯುಧಾನಿ ಚ ಸಮರ್ಪಯಾಮಿ।**

---

41. **ಆಭರಣ ಸಮರ್ಪಣೆ ಅರ್ಥ : ಅಪಾಂ ನ ಪಾತ್** = ನೀರಿನಂತೆ ಜೀವನಾಧಾರನಾದ ಭಗವಂತನು ಅಥವಾ ಅಪಾಂನಪಾತೆಂಬ ದೇವತೆಗಳು, **ಹಿರಣ್ಯವರ್ಣಃ** = ಬಂಗಾರದಂತೆ ಬಣ್ಣವುಳ್ಳವನು (ರು), **ಹಿರಣ್ಯ ಸಂದೃಗ್** = ಬಂಗಾರದಂತೆ ಇರುವ ಇಂದ್ರಿಯಗಳುಳ್ಳವನು (ರು), **ಹಿರಣ್ಯಯಾತ್ ಯೋನೇಃ ಪರಿ** = ಸುವರ್ಣಮಯವಾದ ಸಿಂಹಾಸನದ ಮೇಲೆ, **ನಿಷದ್ಯ** = ಕುಳಿತುಕೊಂಡು, ಕುಳಿತಲ್ಲಿಂದಲೇ ಜಗತ್ತನ್ನು ನಿಯಮಿಸುತ್ತಾನೆ, **ಅಸ್ಮೈ** = ಈ ಭಗವಂತನಿಗೆ, **ಹಿರಣ್ಯದಾಃ** = ಸುವರ್ಣವನ್ನು ಕೊಡುವ ಶ್ರೀಲಕ್ಷ್ಮೀ ರೂಪಗಳು, ಹಾಗೂ ದೇವತೆಗಳು ಪೂಜಕರು, **ಅನ್ನಂ** = ಪೂಜಾ ರೂಪವಾದ ಅನ್ನವನ್ನು, **ದದತಿ** = ಅರ್ಪಿಸುತ್ತಾಳೆ, (ವರು)

---

22. ಭಗವಂತನಿಗೆ ಈ ಆಭರಣಗಳನ್ನು ಅರ್ಪಿಸಬೇಕು.ಕಿರೀಟ, ಮುಕುಟ, ಹಾರ, ಕುಂಡಲಗಳು, ಬಳೆಗಳು, ಉಂಗುರುಗಳು, ತೋಳ್ಬಳೆ, ಒಡ್ಯಾಣ, ಕಾಲ್ಗೆಜ್ಜೆ ಮೊದಲಾದವುಗಳನ್ನು ಕೌಸ್ತಭಾದಿ ಆಭರಣಗಳನ್ನು ಅರ್ಪಿಸಬೇಕು.
ಕಿರೀಟಂ ಮುಕುಟಂ ಹಾರಂ ಮಕರೇ ಕುಂಡಲೇ ತಥಾ।
ಕಟಕ ಅಂಗುಲೀಯ ವಲಯ – ಮೇಖಲಾ – ನೂಪುರಾದಿಕಂ॥
ಈ ಆಭರಣಗಳನ್ನು ಪ್ರತಿದಿನವು ತೊಳೆದು ಅರ್ಪಿಸಬಹುದು. ಇದು ನಿರ್ಮಾಲ್ಯವಾಗುವುದಿಲ್ಲ.
ನ ನಿರ್ಮಾಲ್ಯಂ ಭವೇತ್ ತಾವತ್ ಸ್ವರ್ಣ–ವಸ್ತ್ರ – ವಿಭೂಷಣಮ್॥
ಆಭರಣಾದಿಗಳನ್ನು ಅರ್ಪಿಸುವಾಗ ಆಯಾಯ ಆಭರಣಗಳು ಅಲಭ್ಯವಾದಾಗ ಮೂಲಮಂತ್ರ ಹೇಳಿ ತುಲಸೀದಳವನ್ನೇ ಹಾಕಿದರೆ ಅದನ್ನೇ ಭಗವಂತನು ಸ್ವೀಕರಿಸುತ್ತಾನೆ. ಅಥವಾ ಮುದ್ರೆಗಳನ್ನಾದರೂ ತೋರಿಸಬಹುದು. ಉದಾ. : ಮಧ್ಯಮ ಬೆರಳಿನ ಮೇಲಿನ ಪರ್ವದ ಮೇಲೆ ಅಂಗುಷ್ಠದ ತುದಿಯನ್ನು ಸೇರಿಸಿದರೆ ಯಜ್ಞೋಪವೀತ ಮುದ್ರೆಯಾಗುತ್ತದೆ. ಅಂಗುಷ್ಠವನ್ನು ಕಿರುಬೆರಳಿನ ತುದಿಗೆ ಮುಟ್ಟಿಸಿದರೆ "ಅಲಂಕಾರಮುದ್ರೆ"ಯಾಗುತ್ತದೆ.

## 42. ಗಂಧ ಸಮರ್ಪಣೆ :[23]

**ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಮ್ । ಈಶ್ವರೀಂ ಸರ್ವಭೂತಾನಾಂ ತಾಮಿಹೋಪ ಹ್ವಯೇ ಶ್ರಿಯಮ್ । ಗಂಧಾನ್ ಧಾರಯಾಮಿ ।**

---

42. ಗಂಧಾರ್ಪಣೆಯ ಮಂತ್ರಾರ್ಥ :

**ಗಂಧದ್ವಾರಾ** = ಸುಗಂಧಮಯಗಳಾದ ನವದ್ವಾರಗಳುಳ್ಳ, **ದುರಾಧರ್ಷಾಂ** = ಯಾರಿಂದಲೂ ಬಲತ್ಕಾರಿಸಲಾಗದಿರುವ, **ನಿತ್ಯಪುಷ್ಟಾಂ** = ಅನಾದಿ ಕಾಲದಿಂದಲೂ ಹೃಷ್ಟಪುಷ್ಟಗಳಾಗಿರುವ, **ಕರೀಷಿಣೀಂ** = ಸಕಲ ಸಸ್ಯಗಳ ವೃದ್ಧಿಗಾಗಿ ಗೋಮಯದಲ್ಲಿ ಸನ್ನಿಹಿತಳಾಗಿರುವ, **ಸರ್ವ ಭೂತಾನಾಂ** = ಸಮಸ್ತ ಪ್ರಾಣಿ ಸಮೂಹಕ್ಕೆ, **ಈಶ್ವರೀಂ** = ಒಡೆಯಳಾಗಿರುವ, **ತಾಂ ಶ್ರಿಯಂ** = ಗುಣಪರಿಪೂರ್ಣಳಾದ ಲಕ್ಷ್ಮೀದೇವಿಯನ್ನು, **ಇಹ** = ಈ ಪೂಜೆಯಲ್ಲಿ ಅರ್ಪಿತವಾಗುತ್ತಿರುವ ಗಂಧದಲ್ಲಿ, **ಉಪಹ್ವಯೆ** = ಸನ್ನಿಹಿತಳಾಗುವಂತೆ ಬೇಡುತ್ತೇನೆ.

---

23. ಗಂಧವನ್ನು ಅರ್ಪಿಸುವಾಗ ಮೂಲಮಂತ್ರದಿಂದ ಅರ್ಪಿಸಬೇಕು. ಹೀಗೆಯೇ ಪುಷ್ಪಗಳನ್ನೂ ಮೂಲಮಂತ್ರದಿಂದಲೇ ಅರ್ಪಿಸುವುದು. ಪುಷ್ಪವನ್ನು ಅರ್ಪಿಸುವಾಗ ಮೊದಲು ತುಲಸಿಯನ್ನು ಅರ್ಪಿಸಿ ನಂತರ ಪುಷ್ಪವನ್ನು ಅರ್ಪಿಸಬೇಕು.

ತತಃ ಪುಷ್ಪಂ ತುಲಸೀ ಮಿಶ್ರಮೇವ ಸಮರ್ಪಯೇತ್ ।

## 43. ಅಕ್ಷತಾದಿಪುಷ್ಪಸಮರ್ಪಣೆ :

ಆಯನೇತೇ-ಸ್ತಂಭಮಿತ್ರ ಋಷಿಃ – ಅನುಷ್ಟುಪ್ ಅಗ್ನಿರ್ದೇವತಾ– ಪುಷ್ಪಾರ್ಪಣೇ ವಿನಿಯೋಗಃ।

**ಓಂ ಆಯನೇ ತೇ ಪರಾಯಣೇ ದೂರ್ವಾ ರೋಹಂತು ಪುಷ್ಪಿಣೀಃ । ಹ್ರದಾಶ್ಚ ಪುಂಡರೀಕಾಣಿ ಸಮುದ್ರಸ್ಯ ಗೃಹಾ ಇಮೇ॥**

ಓಂ ನಮೋ ನಾರಾಯಣಾಯ–ದೂರ್ವಾದಿ ಸರ್ವಪುಷ್ಪಾಣಿ ಸಮರ್ಪಯಾಮಿ।

## 44. ಪುಷ್ಪಾರ್ಪಣೆ :

ಮಾಲ್ಯಾದೀನಿ ಸುಗಂಧೀನಿ ಮಾಲತ್ಯಾದೀನಿ ವೈ ಪ್ರಭೋ।
ಮಯಾಹೃತಾನಿ ಪೂಜಾರ್ಥಂ ಪುಷ್ಪಾಣಿ ಪ್ರತಿಗೃಹ್ಯತಾಮ್ ॥

---

43. ಅಕ್ಷತಾದಿಪುಷ್ಪ ಮಂತ್ರಾರ್ಥ:
**ಅಗ್ನೆ** = ಅಗ್ನ್ಯಂತರ್ಗತ ಶ್ರೀಹರಿಯೇ, **ತೇ** = ನಿನ್ನ, **ಆಯನೇ** = ಬರುವಿಕೆಯಲ್ಲಿ, **ಪರಾಯಣೇ** = ಹೋಗುವಿಕೆಯಲ್ಲಿ, **ದೂರ್ವಾಃ** = ದೂರ್ವೆ ಮೊದಲಾದ ಸಸ್ಯಗಳು, **ಪುಷ್ಪಿಣೀಃ** = ಪುಷ್ಪಾದಿಫಲಭರಿತಳಾಗಿ, **ರೋಹಂತು** = ಬೆಳೆಯುತ್ತವೆ (ಬೆಳೆಯಲಿ), **ಹ್ರದಾಶ್ಚ** = ಸರೋವರಗಳಲ್ಲಿ, **ಪುಂಡರೀಕಾಣಿ** = ಕಮಲಗಳು, **ರೋಹಂತು** = ಬೆಳೆಯಲಿ, **ಇಮೇಗೃಹಾಃ** = ಈ ನಮ್ಮ ಮನೆಗಳು, **ಸಮುದ್ರಸ್ಯ** = ಸಮುದ್ರಿಕ್ತ ಗುಣವುಳ್ಳ ನಾರಾಯಣನ ಮನೆಗಳಾಗಿ, **ರೋಹಂತು** = ಬೆಳೆಯಲಿ, ಈ ಮಂತ್ರದಿಂದ ನಾರಾಯಣನಿಗೆ ಗರಿಕೆ ಮೊದಲಾದ ಸಕಲ ಪುಷ್ಪಗಳನ್ನು ಅರ್ಪಿಸುವುದು.

---

44. ಪುಷ್ಪಾರ್ಪಣೆಯ ಮಂತ್ರಾರ್ಥ :
**ಪ್ರಭೋ** = ದೇವದೇವನೇ, **ಸುಗಂಧೀನಿ** = ಪರಿಮಳಯುಕ್ತಗಳಾದ, **ಮಾಲತ್ಯಾದೀನಿ** = ಮಾಲತೀ ಪುಷ್ಪವೆ ಮೊದಲಾದ, **ಪುಷ್ಪಾಣಿ** = ಪುಷ್ಪಗಳು, **ಮಾಲ್ಯಾದೀನಿ** = ಹೂವಿನ ಹಾರಗಳ ಸಹ, **ಮಯಾ** = ನನ್ನಿಂದ, **ಪೂಜಾರ್ಥಂ** = ನಿನ್ನ ಪೂಜೆಗೋಸ್ಕರ, **ಆಹೃತಾನಿ** = ಸಂಗ್ರಹಿಸಲ್ಪಟ್ಟಿದೆ ಅದನ್ನು, **ಪ್ರತಿಗೃಹ್ಯತಾಂ** = ಸ್ವೀಕರಿಸುವವನಾಗು.

## 45. ಆಯುಧ ದೇವತಾಪೂಜೆ :

(ಭಗಂವತನ ಆಯುಧದೇವತೆಗಳ ಪೂಜೆ)[24]

ಓಂ ಚಕ್ರಾದಿದೇವ್ಯೈ ಶ್ರೀ ದುರ್ಗಾಯೈ ನಮಃ।

ಓಂ ಶಂಖಾದಿದೇವ್ಯೈ ಶ್ರಿಯೈ ನಮಃ।

ಓಂ ಗದಾಧಿದೇವಾಯ ಶ್ರೀ ವಾಯವೇ ನಮಃ।

ಓಂ ಪದ್ಮಾಭಿಮಾನಿನ್ಯೈ ಶ್ರೀ ಭೂಮ್ಯೈ ನಮಃ।

ಓಂ ಖಡ್ಗಾಭಿಮಾನಿನ್ಯೈ ಶ್ರೀ ದುರ್ಗಾಯೈ ನಮಃ।

ಓಂ ಶಾರ್ಙ್ಗಾಭಿಮಾನಿನ್ಯೈ ಶ್ರೀ ಸರಸ್ವತ್ಯೈ ನಮಃ।

ಓಂ ಪಂಚಬಾಣಾಧಿದೇವತಾಭ್ಯ ಪಂಚಪ್ರಾಣೇಭ್ಯೋ ನಮಃ।

ಓಂ ಕೌಸ್ತುಭರತ್ನಾಭಿಮಾನಿನೇ ಶ್ರೀ ವಿರಿಂಚಾಯ ನಮಃ।

ಓಂ ವನಮಾಲಾಬಿಮಾನಿನ್ಯೈ ಶ್ರಿಯೈ ನಮಃ।

ಓಂ ಶ್ರೀವತ್ಸಾಭಿಮಾನಿನ್ಯೈ ಶ್ರೀ ಲಕ್ಷ್ಮ್ಯೈ ನಮಃ।

---

**45. ಆಯುಧದೇವತಾ ಪೂಜೆ ಅರ್ಥ :**

1. **ಚಕ್ರಾದಿದೇವ್ಯೈ ಶ್ರೀ ದುರ್ಗಾಯೈ ನಮಃ** = ಚಕ್ರಕ್ಕೆ ದೇವತೆಯಾದ ಶ್ರೀ ದುರ್ಗಾದೇವಿಗೆ ನಮಸ್ಕಾರವು
2. ಶಂಖಕ್ಕೆ ಅಭಿಮಾನಿಯಾದ ಶ್ರೀದೇವಿಗೆ ನಮಸ್ಕಾರ
3. ಗದೆಗೆ ಅಭಿಮಾನಿಯಾದ ಶ್ರೀವಾಯುದೇವನಿಗೆ ನಮಸ್ಕಾರ
4. ಪದ್ಮಕ್ಕೆ ಅಭಿಮಾನಿಯಾದ ಶ್ರೀಭೂದೇವಿಗೆ ನಮಸ್ಕಾರ
5. ನಂದಕವೆಂಬ ಖಡ್ಗಕ್ಕೆ ಅಭಿಮಾನಿಯಾದ ದುರ್ಗೆಗೆ ನಮಸ್ಕಾರ
6. ಶಾರ್ಙ್ಗವೆಂಬ ಧನುಸ್ಸಿಗೆ ಅಭಿಮಾನಿಯಾದ ಸರಸ್ವತಿಗೆ ನಮಸ್ಕಾರ
7. ಪಂಚಬಾಣಗಳಿಗೆ ಅಭಿಮಾನಿಗಳಾದ ಪ್ರಾಣಾದಿ ಪಂಚಪ್ರಾಣಗಳಿಗೆ ನಮಸ್ಕಾರ
8. ಕೌಸ್ತುಭರತ್ನಕ್ಕಭಿಮಾನಿಯಾದ ಬ್ರಹ್ಮದೇವನಿಗೆ ನಮಸ್ಕಾರ
9. ವನಮಾಲೆಗೆ ಅಭಿಮಾನಿಯಾದ ಶ್ರೀದೇವಿಗೆ ನಮಸ್ಕಾರ
10. ಶ್ರೀವತ್ಸಕ್ಕೆ ಅಭಿಮಾನಿಯಾದ ಲಕ್ಷ್ಮೀದೇವಿಗೆ ನಮಸ್ಕಾರ

---

24. ತತಶ್ಚಕ್ರಾಯುಧಾದೀನಿ ಪೂಜಯೇತ್ ಕ್ರಮಶೋ ದಶ । ಎಂಬಂತೆ ಹತ್ತು ಆಯುಧಾಭಿಮಾನಿಗಳನ್ನು ಭಗವಂತನ ಆಯುಧಾಭಿಮಾನಿಗಳಾದ ದುರ್ಗಾದಿ ರೂಪಗಳನ್ನು ಪೂಜಿಸುವುದು ಪೂಜಾಂಗವಾಗಿದೆ.

## 46. ನಾಮಪೂಜಾ :

(ತುಳಸಿಯಿಂದ ಈ ಮಂತ್ರ ಪಠಿಸುತ್ತಾ ದೇವರ ಮೇಲೆ ಅರ್ಚಿಸಬೇಕು)

ತುಲಸೀದಲಂ ಸಮರ್ಪ್ಯ

ಓಂ ಅಥಾऽತೋ ಬ್ರಹ್ಮಜಿಜ್ಞಾಸಾ ಓಂ । ಓಂ ಜನ್ಮಾದ್ಯಸ್ಯ ಯತಃ ಓಂ। ಓಂ ಶಾಸ್ತ್ರಯೋನಿತ್ವಾತ್ । ಓಂ ಓಂ ತತ್ತು ಸಮನ್ವಯಾತ್ ಓಂ । ಈಕ್ಷತೇರ್ನಾಶಬ್ಧಮ್ ಓಂ । ಓಂ ಗೌಣಶ್ಚೇನ್ನಾತ್ಮಶಬ್ದಾತ್ ಓಂ । ಓಂ ತನ್ನಿಷ್ಠಸ್ಯ ಮೋಕ್ಷೋಪದೇಶಾತ್ ಓಂ । ಓಂ ಹೇಯತ್ವಾವಚನಾಚ್ಚ ಓಂ। ಓಂ ಗತಿಸಾಮಾನ್ಯತ್ ಓಂ । ಓಂ ಶ್ರುತತ್ವಾಚ್ಚ ಓಂ ॥ 1 ॥

ಕೇಶವಾಯ ನಮಃ । ನಾರಾಯಣಾಯ ನಮಃ । ಮಾಧವಾಯ ನಮಃ। ಗೋವಿಂದಾಯ ನಮಃ । ವಿಷ್ಣವೇ ನಮಃ । ಮಧುಸೂದನಾಯ ನಮಃ। ತ್ರಿವಿಕ್ರಮಾಯ ನಮಃ । ವಾಮನಾಯ ನಮಃ । ಶ್ರೀಧರಾಯ ನಮಃ । ಹೃಷೀಕೇಶಾಯ ನಮಃ । ಪದ್ಮನಾಭಾಯ ನಮಃ । ದಾಮೋದರಾಯ ನಮಃ। ಸಂಕರ್ಷಣಾಯ ನಮಃ । ಶ್ರೀ ವಾಸುದೇವಾಯ ನಮಃ । ಪ್ರದ್ಯುಮ್ನಾಯ ನಮಃ । ಅನಿರುದ್ಧಾಯ ನಮಃ । ಪುರುಷೋತ್ತಮಾಯ ನಮಃ । ಅಧೋಕ್ಷಜಾಯ ನಮಃ । ನಾರಸಿಂಹಾಯ ನಮಃ । ಅಚ್ಯುತಾಯ ನಮಃ । ಜನಾರ್ದನಾಯ ನಮಃ । ಉಪೇಂದ್ರಾಯ ನಮಃ। ಶ್ರೀಹರಯೇ ನಮಃ । ಶ್ರೀ ಕೃಷ್ಣಾಯ ನಮಃ।

---

ಸುದರ್ಶನಂ ಪಾಂಚಜನ್ಯಂ ಗದಾಸೀಷು ಧನುರ್ಹಲಾನ್ ।
ಮುಸಲಂ ಕೌಸ್ತುಭಂ ಮಾಲಾಂ ಶ್ರೀವತ್ಸಂ ಜಾನು ಪೂಜಯೇತ್ ॥
ಎಂದು ಭಾಗವತದಲ್ಲಿ (11-27-27) ಭಗವಂತನ ಆಯುಧಗಳನ್ನು ತಿಳಿಸಿದ್ದಾರೆ. ಆಯುಧಾಭಿಮಾನಿಗಳನ್ನು ಪದ್ಮಮಾಲೆಯಲ್ಲಿ ಹೀಗೆ ಹೇಳಲಾಗಿದೆ.
ದುರ್ಗಾ ಚಕ್ರಾಧಿ ದೇವಿ ಸ್ಯಾತ್ ಶ್ರೀಶ್ಚ ಶಂಖಾಧಿದೇವತಾ ।
ವಾಯುಃ ಗದಾಧಿದೇವಃ ಸ್ಯಾದ್ ಭೂಮಿಃ ಪದ್ಮಾಭಿಮಾನಿನೀ ॥
ದುರ್ಗೈವ ಖಡ್ಗದೇವೀ ಸ್ಯಾತ್ ಶಾರ್ಙ್ಗಂ ಚೈವ ಸರಸ್ವತೀ ॥
ಪಂಚ ಪ್ರಾಣಾಃ ಪಂಚಬಾಣಾಃ ವಿರಿಂಚಃ ಕೌಸ್ತುಭಾತ್ಮಕಃ ।
ಶ್ರೀರೇವ ವನಮಾಲಾಯಾಂ ಲಕ್ಷ್ಮೀಃ ಶ್ರೀವತ್ಸ ಸಂಸ್ಥಿತಾ ॥ – ಪದ್ಮಮಾಲಾ –79–80

ಓಂ ಮತ್ಸ್ಯಾಯ ನಮಃ । ಕೂರ್ಮಾಯ ನಮಃ । ವರಾಹಾಯ ನಮಃ। ನಾರಸಿಂಹಾಯ ನಮಃ । ವಾಮನಾಯ ನಮಃ । ಪರಶುರಾಮಾಯ ನಮಃ । ರಾಮಾಯ ನಮಃ । ಕೃಷ್ಣಾಯ ನಮಃ । ಬುದ್ಧಾಯ ನಮಃ । ಕಲ್ಕೀನೇ ನಮಃ। ಓಂ ವಿಶ್ವಾಯ ನಮಃ ।

ಇತಿ ಏಕೈಕವಾರ ತುಲಸೀ–ಪುಷ್ಪಾಣಿ ಸಮರ್ಪಯೇತ್ । ತಥಾ ವೆಂಕಟೇಶ ಸ್ತೋತ್ರ, ಕೃಷ್ಣಾಷ್ಟೋತ್ತರ, ವಿಷ್ಣುಸಹಸ್ರನಾಮಾವಳಿಭಿಃ, ಬ್ರಹ್ಮಸೂತ್ರೈಶ್ಚ ಯಥಾಶಕ್ತಿ ಪುಷ್ಪಾದಿಭಿಃ ಅರ್ಚಯೇತ್ ॥

## 47. ಆವರಣ ಪೂಜಾ :

ಪ್ರಥಮಾವರಣ ಪೂಜಾ –

ಮಧ್ಯೇ–ಓಂ ಪರಮಪುರುಷಾಯ ನಮಃ ।

ವಾಮೇ ಶ್ರೀಂ ಲಕ್ಷ್ಮ್ಯೈ ನಮಃ । ದಕ್ಷಿಣೇ ಧರಾಯೈ ನಮಃ ।

ಪೀಠಾದ್ಬಹಿಃ ಪೂರ್ವಾದಿ ದಿಕ್ಷು – ಓಂ ಕೃದ್ಧೋಲ್ಕಾಯ ನಮಃ । ದಕ್ಷಿಣೇ – ಓಂ ಮಹೋಲ್ಕಾಯ ನಮಃ । ಪಶ್ಚಿಮೆ ಓಂ ವೀರೋಲ್ಕಾಯ ನಮಃ । ಉತ್ತರೇ – ಓಂ ದ್ಯೂಲ್ಕಾಯ ನಮಃ । ಆಗ್ನೇಯಾದಿಷು ಓಂ ಸಹಸ್ರೋಲ್ಕಾಯ ನಮಃ ।

ಇತಿ ಪ್ರಥಮಾವರಣಮ್ ।[25]

---

47. ಆವರಣ ಪೂಜಾ ಅರ್ಥ : ಪ್ರಥಮಾವರಣ ಪೂಜೆ ಅರ್ಥ :

**ಮಧ್ಯೆ** = ಯೋಗ ಪೀಠದ ಮಧ್ಯದಲ್ಲಿ, ಕುಳಿತಿರುವ ಪರದೇವತೆಯಾದ ನಾರಾಯಣನಿಗೆ ನಮಸ್ಕಾರ, **ವಾಮೇ** = ಎಡಭಾಗದಲ್ಲಿರುವ, **ಲಕ್ಷ್ಮ್ಯೈ ನಮಃ** = ಲಕ್ಷ್ಮೀದೇವಿಗೆ ನಮಸ್ಕಾರ, **ದಕ್ಷೇ** = ಬಲಭಾಗದಲ್ಲಿರುವ, **ಧರಾಯೈ ನಮಃ** = ಧರಾದೇವಿಗೆ ನಮನ, **ಪೀಠಾದ್ ಬಹಿಃ** = ಪೀಠದಿಂದ ಹೊರಗೆ, **ಪೂರ್ವಾದಿದಿಕ್ಷು** = ಪೂರ್ವಾದಿ ದಿಕ್ಕಿನಲ್ಲಿ, ಕ್ರಮವಾಗಿ ಕೃದ್ಧೋಲ್ಕ, ಮಹೋಲ್ಕ, ವೀರೋಲ್ಕ, ದ್ಯುಲ್ಕ, ಇವರಿಗೆ ನಮಸ್ಕಾರ, ಹಾಗೆಯೇ ಆಗ್ನೇಯಾದಿ ದಿಕ್ಕುಗಳಲ್ಲೂ ಕ್ರಮವಾಗಿ ಸಹಸ್ರೋಲ್ಕನಿಗೆ ನಮಸ್ಕಾರ. (ಪ್ರಥಮಾವರಣ ಪೂಜೆ)

---

25. ಧರಾಂ ದಕ್ಷಿಣೇ ಪಾರ್ಶ್ವೇ ತಥಾಃ ಪೂರ್ವಾದಿ ದಿಕ್ಷು ಚ ।
ಕೃದ್ಧೋಲ್ಕಾಯ ಮಹೋಲ್ಕಾಯ ವೀರೋಲ್ಕಾಯ ನಮಸ್ತತಃ ॥

ದ್ವಿತೀಯಾವರಣ ಪೂಜಾ –

ಪೂರ್ವೇ–ವಾಸುದೇವಾಯ ನಮಃ । ಆಗ್ನೇಯೇ–ಮಾಯಾಯೈ ನಮಃ। ದಕ್ಷಿಣೇ–ಸಂಕರ್ಷಣಾಯ ನಮಃ । ನೈರುತ್ಯೇ–ಜಯಾಯೈ ನಮಃ । ಪಶ್ಚಿಮೇ–ಪ್ರದ್ಯುಮ್ನಾಯ ನಮಃ । ವಾಯವ್ಯೇ–ಕೃತ್ಯೈ ನಮಃ । ಉತ್ತರೆ– ಅನಿರುದ್ಧಾಯ ನಮಃ । ಐಶಾನೇ–ಶಾಂತ್ಯೈ ನಮಃ ।

ಇತಿ ದ್ವಿತೀಯಾವರಣಂ

ತೃತೀಯಾವರಣ ಪೂಜಾ –

ತದ್ಬಹಿಃ–ಪೂರ್ವೇ ಶ್ರೀಕೇಶವಾಯ ನಮಃ । ಶ್ರೀನಾರಾಯಣಾಯ ನಮಃ ।

ಆಗ್ನೇಯೇ–ಶ್ರೀ ಮಾಧವಾಯ ನಮಃ । ದಕ್ಷಿಣೇ–ಶ್ರೀಗೋವಿಂದಾಯ ನಮಃ ।

ಶ್ರೀ ವಿಷ್ಣವೇ ನಮಃ । ನೈರುತ್ಯೆ – ಶ್ರೀ ಮಧುಸೂದನಾಯ ನಮಃ ।

ಪಶ್ಚಿಮೇ – ಶ್ರೀ ತ್ರಿವಿಕ್ರಮಾಯ ನಮಃ । ಶ್ರೀ ವಾಮನಾಯ ನಮಃ ।

---

**ದ್ವಿತೀಯಾವರಣ ಪೂಜೆ :**

ಪ್ರಥಮಾವರಣದ ನಂತರ, ಪೂರ್ವಾದಿ ದಿಕ್ಕುಗಳಲ್ಲಿ ಕ್ರಮವಾಗಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧನಿಗೆ ನಮನ ಆಗ್ನೇಯಾದಿ ವಿದಿಕ್ಕುಗಳಲ್ಲಿರುವ, ಲಕ್ಷ್ಮೀದೇವಿಯ ರೂಪಗಳಾದ ಮಾಯಾ, ಜಯಾ, ಕೃತಿ, ಶಾಂತಿ ಇವರಿಗೆ ನಮಸ್ಕಾರ

**ತೃತೀಯಾವರಣ ಪೂಜೆ :**

**ತದ್ಬಹಿಃ** = ದ್ವಿತೀಯಾವರಣದ ಹೊರಗೆ, **ಪೂರ್ವೇ** = ಪೂರ್ವದಲ್ಲಿ ಕೇಶವ, ನಾರಾಯಣನಿಗೆ ನಮನ, **ಆಗ್ನೇಯೇ** = ಆಗ್ನೇಯ ದಿಕ್ಕಿನಲ್ಲಿ ಮಾಧವನಿಗೆ, **ದಕ್ಷಿಣೇ** = ದಕ್ಷಿಣದಲ್ಲಿ ಗೋವಿಂದ ಹಾಗೂ ವಿಷ್ಣುವಿಗೆ, **ನೈರುತ್ಯೆ** =ನೈರುತ್ಯದಲ್ಲಿ,

---

ದ್ವ್ಯೊಲ್ಕಾಯ ಚ ನಮಸ್ಕುರ್ಯಾತ್ ಉದೀಚ್ಯಾಂ ದಿಶಿ ಚ ಕ್ರಮಾತ್ ॥
ಸಹಸ್ರೋಲ್ಕಾಯೇತಿ ಚತುಃ ಆಗ್ನೇಯಾದಿ ವಿದಿಕ್ಷು ಚ ।
ದ್ವಂದ್ವಶೋ ದಿಕ್ಷು ಸಂಪೂಜ್ಯಂ ಏಕೈಕಂ ಕೋಣಕೇಷು ಚ ॥ – ಪಂಚರಾತ್ರ

ವಾಯವ್ಯೇ – ಶ್ರೀ ಶ್ರೀಧರಾಯ ನಮಃ। ಉತ್ತರೆ – ಶ್ರೀ ಹೃಷಿಕೇಶಾಯ ನಮಃ।

ಪದ್ಮನಾಭಾಯ ನಮಃ। ಈಶಾನ್ಯೆ – ಶ್ರೀ ದಾಮೋದರಾಯ ನಮಃ।

ಇತಿ ತೃತೀಯಾವರಣಂ

**ಚತುರ್ಥಾವರಣ ಪೂಜಾ –**

ತದ್ಬಹಿಃ–ಪೂರ್ವೇ– ಶ್ರೀ ಸಂಕರ್ಷಣಾಯ ನಮಃ।

ವಾಸುದೇವಾಯ ನಮಃ । ಆಗ್ನೇಯೇ–ಶ್ರೀ ಪ್ರದ್ಯುಮ್ನಾಯ ನಮಃ । ದಕ್ಷಿಣೇ– ಶ್ರೀ ಅನಿರುದ್ಧಾಯ ನಮಃ। ಶ್ರೀಪುರುಷೋತ್ತಮಾಯ ನಮಃ। ನೈಋತ್ಯೆ– ಶ್ರೀ ಅಧೋಕ್ಷಜಾಯ ನಮಃ। ಪಶ್ಚಿಮೇ ಶ್ರೀನಾರ–ಸಿಂಹಾಯ ನಮಃ। ಶ್ರೀ ಅಚ್ಯುತಾಯ ನಮಃ।

ವಾಯವ್ಯೇ–ಶ್ರೀಜನಾರ್ಧನಾಯ ನಮಃ। ಉತ್ತರೇ–ಶ್ರೀಉಪೇಂದ್ರಾಯ ನಮಃ। ಶ್ರೀಹರಿಯೇ ನಮಃ। ಈಶಾನ್ಯೇ– ಶ್ರೀಕೃಷ್ಣಾಯ ನಮಃ।

ಇತಿ ಚತುರ್ಥಾವರಣಂ

---

ಮಧುಸೂದನನಿಗೆ, **ಪಶ್ಚಿಮೆ** = ಪಶ್ಚಿಮದಲ್ಲಿ ತ್ರಿವಿಕ್ರಮನಿಗೆ, ವಾಮನಿಗೆ, **ವಾಯವ್ಯೇ** = ವಾಯವ್ಯದಿಕ್ಕಿನಲ್ಲಿ ಶ್ರೀಧರನಿಗೆ, **ಉತ್ತರೇ** = ಉತ್ತರದಲ್ಲಿ ಹೃಷಿಕೇಶ, ಪದ್ಮನಾಭನಿಗೆ, **ಐಶಾನ್ಯೇ** = ಐಶಾನ್ಯದಲ್ಲಿ ದಾಮೋದರನಿಗೂ, **ನಮಃ** = ನಮಸ್ಕಾರವು.

**ಚತುರ್ಥಾವರಣ ಪೂಜೆ :**

**ತದ್ಬಹಿಃ** = ಮೂರನೇ ಆವರಣದ ಹೊರಗೆ, **ಪೂರ್ವೇ** = ಪೂರ್ವದಲ್ಲಿ, ಸಂಕರ್ಷಣ ಹಾಗೂ ವಾಸುದೇವನಿಗೆ, **ನಮಃ** = ನಮಸ್ಕಾರವು, **ಆಗ್ನೇಯೇ** = ಆಗ್ನೇಯದಲ್ಲಿ ಪ್ರದ್ಯುಮ್ನನಿಗೆ, **ದಕ್ಷಿಣೇ** = ದಕ್ಷಿಣದಲ್ಲಿ ಅನಿರುದ್ಧನಿಗೆ ಹಾಗೂ ಪುರುಷೋತ್ತಮನಿಗೆ, **ನೈರುತ್ಯೆ** = ನೈರುತ್ಯ ದಿಕ್ಕಿನಲ್ಲಿ ಅಧೋಕ್ಷಜನಿಗೂ, **ಪಶ್ಚಿಮೇ** = ಪಶ್ಚಿಮ ದಿಕ್ಕಿನಲ್ಲಿ ನಾರಸಿಂಹ ಹಾಗೂ ಅಚ್ಯುತನಿಗೂ ನಮನ, **ವಾಯವ್ವೇ** = ವಾಯವ್ಯ ದಿಕ್ಕಿನಲ್ಲಿ ಜನಾರ್ದನನಿಗೆ ನಮನ, **ಉತ್ತರೇ** = ಉತ್ತರ ದಿಕ್ಕಿನಲ್ಲಿ ಉಪೇಂದ್ರ ಹಾಗೂ ಹರಿಗೆ ನಮಸ್ಕಾರ, **ಐಶಾನ್ಯ** = ಈಶಾನ್ಯ ದಿಕ್ಕಿನಲ್ಲಿ ಶ್ರೀಕೃಷ್ಣನಿಗೆ ನಮಸ್ಕಾರ.

**ಪಂಚಮಾವರಣ ಪೂಜಾ –**

ತದ್ಬಹಿಃ – ಪೂರ್ವೇ ಓಂ ಮತ್ಸ್ಯಾಯ ನಮಃ। ಓಂ ಕೂರ್ಮಾಯ ನಮಃ। ಆಗ್ನೇಯೇ – ಶ್ರೀವರಾಹಾಯ ನಮಃ। ದಕ್ಷಿಣೇ–ಶ್ರೀನರ–ಸಿಂಹಾಯ ನಮಃ। ವಾಮನಾಯ ನಮಃ। ನೈಋತ್ಯೇ – ಶ್ರೀ ಪರಶು–ರಾಮಾಯ ನಮಃ। ಪಶ್ಚಿಮೇ – ಶ್ರೀರಾಮಾಯ ನಮಃ। ಶ್ರೀಕೃಷ್ಣಾಯ ನಮಃ। ವಾಯವ್ಯೇ – ಶ್ರೀ ಬುದ್ಧಾಯ ನಮಃ। ಉತ್ತರೇ – ಶ್ರೀಕಲ್ಕಿನೇ ನಮಃ। ಶ್ರೀ ಅನಂತಾಯ ನಮಃ ।ಈಶಾನ್ಯೇ – ಶ್ರೀ ವಿಶ್ವರೂಪಾಯ ನಮಃ॥

ಇತಿ ಪಂಚಮಾವರಣಂ

**ಷಷ್ಠಾವರಣ ಪೂಜಾ –**

ಪ್ರಾಚ್ಯಾಂ – ಓಂ ಅನಂತಾಯ ನಮಃ । ಆಗ್ನೇಯೇ – ವಾರುಣ್ಯೈ ನಮಃ । ದಕ್ಷಿಣೇ – ಓಂ ಬ್ರಹ್ಮಣೇ ನಮಃ । ನೈರುತ್ಯೇ – ಗಾಯತ್ರ್ಯೈ ನಮಃ। ಪ್ರತೀಚ್ಯಾಂ – ಓಂ ವಾಯವೇ ನಮಃ। ವಾಯುವ್ಯೆ – ಭಾರತ್ಯೈ ನಮಃ ।ಉತ್ತರೇ – ಈಶನಾಯ ನಮಃ । ಗಿರಿಜಾಯ್ಯೆ ನಮಃ । ದೇವಸ್ಯಾಗ್ರೇ ಓಂ ಗರುಡಾಯ ನಮಃ । ತದ್ವಾಮೇ – ಸೌಪರ್ಣ್ಯೇ ನಮಃ।

ಇತಿ ಷಷ್ಠಾವರಣಂ

---

**ಪಂಚಮಾವರಣ ಪೂಜೆ : ತದ್ಬಹಿ** = ಚತುರ್ಥಾವರಣದ ಹೊರಗೆ, ಪಂಚಮಾವರಣದಲ್ಲಿ, **ಪೂರ್ವೇ** = ಪೂರ್ವ ದಿಕ್ಕಿನಲ್ಲಿ ಮತ್ಸ್ಯ ಹಾಗೂ ಕೂರ್ಮನಿಗೆ ನಮಸ್ಕಾರ, **ಆಗ್ನೇಯೇ** = ಆಗ್ನೇಯ ದಿಕ್ಕಿನಲ್ಲಿ ವರಾಹನಿಗೆ, **ದಕ್ಷಿಣೆ** = ದಕ್ಷಿಣದಲ್ಲಿ ನರಸಿಂಹ ಹಾಗೂ ವಾಮನನಿಗೂ ನಮಸ್ಕಾರ, **ನೈರುತ್ಯೆ** = ನೈರುತ್ಯದಲ್ಲಿ ಪರಶುರಾಮನಿಗೆ, **ಪಶ್ಚಿಮೇ** = ಪಶ್ಚಿಮದಲ್ಲಿ ರಾಮ ಹಾಗೂ ಕೃಷ್ಣನಿಗೆ ನಮಸ್ಕಾರ, **ವಾಯವ್ಯೇ** = ವಾಯವ್ಯ ದಿಕ್ಕಿನಲ್ಲಿ ಬುದ್ಧನಿಗೆ ನಮಸ್ಕಾರ, **ಐಶಾನ್ಯೆ** = ಈಶಾನ್ಯ ದಿಕ್ಕಿನಲ್ಲಿ ವಿಶ್ವರೂಪನಿಗೆ ನಮನ

**ಷಷ್ಠಾವರಣ ಪೂಜೆ : ತದ್ಬಹಿಃ** = ಪಂಚಮಾವರಣದ ಹೊರಗೆ ಆರನೇ ಆವರಣದಲ್ಲಿರುವ, **ಪೂರ್ವಾದಿ ದಿಕ್ಷು** = ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ, ಕ್ರಮವಾಗಿ, ವಾರುಣಿ, ಸರಸ್ವತಿ, ಭಾರತೀ, ಪಾರ್ವತಿಯನ್ನು ಪೂಜಿಸಿ ನಮಿಸುವುದು, **ದೇವಸ್ಯಾಗ್ರೇ** = ದೇವರ ಎದುರಿಗೆ, ಇರುವ ಗರುಡನಿಗೆ ನಮನ, **ತದ್ವಾಮಪಾರ್ಶ್ವೇ** = ಗರುಡನ ಎಡಭಾಗದಲ್ಲಿ ಸೌಪರ್ಣಿಗೆ ನಮಸ್ಕಾರವು.

**ಸಪ್ತಮಾವರಣ ಪೂಜೆ –**

**ತದ್ವಹಿಃ ಪೂರ್ವಾದಿದಿಕ್ಷು – ಓಂ ಲಾಂ ಇಂದ್ರಾಯ ಸುರಾಧಿಪತಯೇ – ಪೀತವರ್ಣಾಯ – ವಜ್ರಾಭಯಹಸ್ತಾಯ ಕಿರೀಟಾದಿ ವಿಭೂಷಿತಾಯ – ಶಚೀ ಸಹಿತಾಯ – ಸಪರಿವಾಯ ಶ್ರೀವಿಷ್ಣುಪಾರ್ಷದಾಯ ನಮಃ।**

**ಆಗ್ನೇಯೇ – ಓಂ ರಾಂ ಅಗ್ನಯೇ –ತೇಜೋಧಿಪತಯೇ ರಕ್ತವರ್ಣಾಯ – ಶಕ್ತಿಹಸ್ತಾಯ – ಮೇಷವಾಹನಾಯ – ಸ್ವಾಹಾಸಹಿತಾಯ – ಸಪರಿವಾರಾಯ ತ್ರಿನೇತ್ರಾಯ – ಶ್ರೀವಿಷ್ಣು ಪಾರ್ಷದಾಯ ನಮಃ।**

---

**ಸಪ್ತಮಾವರಣ ಪೂಜೆ :**

**ತದ್ಬಹಿಃ** = ಆರನೆಯ ಆವರಣದ ಹೊರಗಿರುವ ಏಳನೇ ಆವರಣದ, **ಪೂರ್ವಾದ್ಯಷ್ಟದಿಕ್ಷು** = ಪೂರ್ವವೆ ಮೊದಲಾದ ಎಂಟು ದಿಕ್ಕುಗಳಲ್ಲಿ, **ಪ್ರಾಚ್ಯಾಂದಿಶಿ** = ಪೂರ್ವದಿಕ್ಕಿನಲ್ಲಿ ಕೈಗೆ ಜೋಡಿಸಿ ನಿಂತಿರುವ, **ಸುರಾಧಿಪತಯೇ** = ದೇವತೆಗಳಿಗೆ ಪತಿಯಾದ, **ಪೀತ ವರ್ಣಾಯ** = ಹಳದಿಬಣ್ಣವುಳ್ಳ, **ವಜ್ರಾಭಯಹಸ್ತಾಯ** = ವಜ್ರ ಹಾಗೂ ಅಭಯ ಹಸ್ತನಾದ, **ಶಚೀಸಹಿತಾಯ** = ಪತ್ನಿ ಶಚಿದೇವಿಯಿಂದ ಸಹಿತನಾದ, **ಐರಾವತ ವಾಹನಾಯ** = ಐರಾವತವನ್ನು ವಾಹನವಾಗಿಯುಳ್ಳ, **ಸಪರಿವಾರಾಯ** = ಪರಿವಾರ ಸಹಿತನಾದ, **ವಿಷ್ಣುಪಾರ್ಷದಾಯ** = ವಿಷ್ಣುವಿನ ಸೇವಕನಾದ, **ಇಂದ್ರಾಯ ನಮಃ** = ಇಂದ್ರದೇವನಿಗೆ ನಮಸ್ಕಾರವು

**ಆಗ್ನೇಯೇ** = ಆಗ್ನೇಯದಲ್ಲಿ, **ತೇಜೋಧಿಪತಯೇ** = ತೇಜಸ್ಸಿಗೆ ದೇವತೆಯಾದ ರಕ್ತವರ್ಣನಾದ, ಶಕ್ತಿಯನ್ನು ಹಿಡಿದಿರುವ, ಮೇಷವನ್ನು ವಾಹನವಾಗಿವುಳ್ಳ, ಸ್ವಾಹಾವೆಂಬ ಪತ್ನಿ ಸಹಿತನಾದ, ಪರಿವಾರ ಸಹಿತನಾದ, ವಿಷ್ಣು ಸೇವಕನಾದ ಅಗ್ನಿದೇವನಿಗೆ ನಮಸ್ಕಾರ,

ದಕ್ಷಿಣೇ – ಓಂ ಯಾಂ ಯಮಾಯ –ಧರ್ಮಾಧಿಪತಯೇ – ಕಾಲಮೇಘ ಸದೃಶವಿಗ್ರಹಾಯ – ದಂಡಹಸ್ತಾಯ ಮಹಿಷವಾಹನಾಯ – ಶ್ಯಾಮಲಾ ಸಹಿತಾಯ – ಭೂಷಣೋಜ್ವಲಾಯ – ತ್ರಿಲೋಚನಾಯ – ಸಪರಿವಾರಾಯ – ಶ್ರೀವಿಷ್ಣು ಪಾರ್ಷದಾಯ ನಮಃ।

ನೈರುತ್ಯ – ಓಂ ಕ್ಷಾಂ ನಿರ್ಋತಯೇ – ರಕ್ಷೋಧಿಪತಯೇ ಧೂಮ್ರವರ್ಣಾಯ – ಅತಿಭೀಷಣಾಕೃತಯೇ – ಹಸ್ತಿಸಂಸ್ಥಿತಾಯ – ಖಡ್ಗಾಯುಧಾಯ – ದೀರ್ಘಗ್ರೀವಾ ಕಾಲಿಕಾ ಸಹಿತಾಯ – ಸಾಯುಧಾಯ–ಸಪರಿವಾರಾಯ ಶ್ರೀವಿಷ್ಣುಪಾರ್ಷದಾಯ ನಮಃ।

ಪ್ರತೀಚ್ಯಾಂ – ಓಂ ವಾಂ ವರುಣಾಯ – ಜಲಾಧಿಪತಯೇ – ಇಂದು – ಕುಂದವರ್ಣಾಯ – ಪಾಶಹಸ್ತಾಯ – ಮಹಾಮಣಿಮಾಲಾ–ಭೂಷಿತಾಯ – ಪದ್ಮಿನೀ ಸಹಿತಾಯ ಮಕರವಾಹನಾಯ – ಸಪರಿವಾರಾಯ – ಶ್ರೀ ವಿಷ್ಣುಪಾರ್ಷದಾಯ ನಮಃ

---

**ದಕ್ಷಿಣೇ** = ದಕ್ಷಿಣ ದಿಕ್ಕಿನಲ್ಲಿರುವ, ಪ್ರೇತಾಧಿಪತಿಯಾದ, ಕಪ್ಪುವರ್ಣವುಳ್ಳ, ದಂಡಹಸ್ತನಾದ, ಮಹಿಷವಾಹನನಾದ, ಶ್ಯಾಮಲೆಯಿಂದ ಕೂಡಿರುವ, ಸಪರಿವಾರನಾದ, ವಿಷ್ಣು ಪಾರ್ಷದನಿಗೆ ನಮಸ್ಕಾರ,

**ನೈರುತ್ಯೆ** = ನೈರುತ್ಯದಲ್ಲಿ, ರಕ್ಷೋಧಿಪತಿಯಾದ ಕಂದು ಬಣ್ಣ ದೇಹವುಳ್ಳ, ಆನೆಯ ಮೇಲೆ ಕುಳಿತಿರುವ, ಖಡ್ಗವನ್ನು ಹಿಡಿದಿರುವ, ನರವಾಹನನಾದ, ಕಾಲಿಕಾ ಸಹಿತನಾದ, ಪರಿವಾರ ಸಹಿತ ವಿಷ್ಣು ಪಾರ್ಷದನಾದ ನಿರ್ಋತಿಗೆ ನಮಸ್ಕಾರ.

**ಪಶ್ಚಿಮೇ** : ಜಲಾಧಿಪತಿಯಾದ, ಚಂದ್ರನಂತೆ ಸ್ವಚ್ಛವರ್ಣವುಳ್ಳ, ಪಾಶವನ್ನು ಹಿಡಿದಿರುವ, ಪತ್ನಿಯಾದ ಪದ್ಮಿನೀ ಸಹಿತನಾದ, ಮಕರ ವಾಹನನಾದ (ಮೊಸಳೆ) ಪರಿವಾರ ಸಹಿತನಾದ ವಿಷ್ಣು ಪಾರ್ಷದನಾದ ವರುಣನಿಗೆ ನಮಸ್ಕಾರವು.

**ವಾಯವ್ಯೇಃ – ಓಂ ವಾಂ ಪ್ರವಹವಾಯವೇ – ಪ್ರಾಣಾಧಿಪತಯೇ – ಧೂಮ್ರವರ್ಣಾಯ – ಗದಾಂಕುಶಾಯುಧಾಯ –ತ್ರಿಲೋಚನಾಯ– ಹರಿಣ ವಾಹನಾಯ – ಮೋಹಿನೀ ಸಹಿತಾಯ ಸಪರಿವಾರಾಯ ಶ್ರೀ ವಿಷ್ಣುಪಾರ್ಷದಾಯ ನಮಃ।**

**ಉದೀಚ್ಯಾಂ – ಓಂ ಸಾಂ ಸೋಮಾಯ – ತಾರಕಾಧಿಪತಿಯೆ ರಜತಾದ್ರಿ ರುಚಿರವರ್ಣಾಯು – ತುರಂಗವಾಹನಾಯು ಗದಾಯುಧಾಯ –ರೋಹಿಣೀ ಸಹಿತಾಯ – ಸಪರಿವಾರಾಯ – ಶ್ರೀವಿಷ್ಣುಪಾರ್ಷದಾಯ ನಮಃ।**

**ಈಶಾನ್ಯೆ – ಹಾಂ ರುದ್ರಾಯ –ಭೂತಾಧಿಪತಯೇ ಶ್ವೇತವರ್ಣಾಯ – ಚಂದ್ರೇಶೇಖರಾಯ– ತ್ರಿಶೂಲಧರಾಯ ವೃಷಭವಾಹನಾಯ – ಪಾರ್ವತೀ ಪ್ರಿಯಾಯ – ಸಪರಿವಾರಾಯ ಶ್ರೀವಿಷ್ಣುಪಾರ್ಷದಾಯ ನಮಃ।**

---

**ವಾಯವ್ಯೇ** : ಪ್ರಾಣಕ್ಕೆ ಅಧಿಪತಿಯಾದ, ಹೊಗೆಯ ಬಣ್ಣದಂತಿರುವ ದೇಹವುಳ್ಳ, ಗದೆ ಹಾಗೂ ಅಂಕುಶ ಹಿಡಿದಿರುವ, ಜಿಂಕೆಯೇ ವಾಹನವಾಗಿರುವ, ಮೋಹಿನೀ ಸಹಿತನಾದ, ಶ್ರೀವಿಷ್ಣುಪಾರ್ಷದನಾದ ಪ್ರವಹವಾಯುವಿಗೆ ನಮಸ್ಕಾರ.

**ಉತ್ತರ** : ಉತ್ತರ ದಿಕ್ಕಿನಲ್ಲಿ ನಕ್ಷತ್ರಗಳಿಗೆ ಅಧಿಪತಿಯಾದ, ರಜತದಂತೆ ಕಾಂತಿಯುಳ್ಳ, ಹತ್ತು ಬಿಳಿ ಕುದುರೆಗಳೇ, ವಾಹನವಾಗಿವುಳ್ಳ, ಗದೆಯನ್ನು ಆಯುಧವಾಗಿ ಹೊಂದಿರುವ, ಪತ್ನಿ ರೋಹಿಣೀ ಸಹಿತನಾದ, ಪರಿವಾರ ಸಹಿತನಾದ, ಶ್ರೀವಿಷ್ಣು ಸೇವಕನಾದ ಚಂದ್ರದೇವನಿಗೆ ನಮಸ್ಕಾರವು.

**ಐಶಾನ್ಯೆ** : ಈಶಾನ್ಯ ದಿಕ್ಕಿನಲ್ಲಿರುವ, ಭೂತಗಳಿಗೆ ಸ್ವಾಮಿಯಾದ, ಬಿಳಿವರ್ಣ ದೇಹವುಳ್ಳ, ಚಂದ್ರನನ್ನು ಮುಡಿಯಲ್ಲಿಟ್ಟ, ತ್ರಿಶೂಲಧರನಾದ, ವೃಷಭ (ನಂದಿ) ವಾಹನನಾದ, ಪತ್ನಿಯಾದ ಪಾರ್ವತಿಯಿಂದ ಕೂಡಿರುವ, ವಿಷ್ಣು ಪಾರ್ಷದನಾದ ರುದ್ರದೇವನಿಗೆ ನಮಸ್ಕಾರವು.

ನಿರ್ಋತಿ – ವರುಣಯೋಃ ಮಧ್ಯೇ – ಓಂ ಆಂ ಅನಂತಾಖ್ಯ ಶೇಷಾಯ – ನಾಗಾಧಿಪತಯೇ – ಕ್ಷೀರಸಾಗರ ನಿಭಾಯ ಶುಭ್ರವರ್ಣಾಯ – ನಾಗಿನೀ ಸಹಿತಾಯ (ವಾರುಣಿ) ಸಹಸ್ರಫಣಾಯ – ಸಪರಿವಾರಾಯ – ಶ್ರೀವಿಷ್ಣುಪಾರ್ಷದಾಯ ನಮಃ।

ಇಂದ್ರ – ಈಶಾನಯೋಃ ಮಧ್ಯೇ – ಓಂ ಹ್ರೀಂ ಬ್ರಹ್ಮಣೇ ಸತ್ಯಲೋಕಾಧಿಪತಯೇ – ಹಂಸವಾಹನಾಯ – ಗಾಯತ್ರೀ– ಸಹಿತಾಯ – ಸಾಯುಧಾಯ ಸಪರಿವಾರಾಯ – ಶ್ರೀವಿಷ್ಣುಪಾರ್ಷದಯ ನಮಃ॥

ತನ್ಮಧ್ಯೇ – ಏಕೀಭೂತಸ್ವಾವತಾರಾಯ – ಸಸ್ತ್ರೀಕಾಯ ಸಪರಿವಾರಾಯ ಶ್ರೀ ಲಕ್ಷ್ಮೀನಾರಾಯಣಾಯ ನಮಃ।

ಇತಿ ಆವರಣ ಪೂಜಾ ಸಮಾಪ್ತಾ

---

**ಅಧೋದೇಶೇ** : ಕೆಳಗಡೆಯಲ್ಲಿ, **ನಿರ್ಋತಿ–ವರುಣಯೋಃ–ನಿರ್ಋತಿ** ಹಾಗೂ **ವರುಣರ, ಮಧ್ಯೇ** = ಮಧ್ಯದಲ್ಲಿ ನಾಗಾಧಿಪತಿಯಾದ, ನಾಗವಾಹನನಾದ, ಚಕ್ರಧರನಾದ, ವಾರುಣೀ ಸಹಿತನಾದ, ಸಾವಿರ ಹೆಡೆಯುಳ್ಳ, ಶ್ರೀವಿಷ್ಣುಪಾರ್ಷದನಾದ ಶೇಷನಿಗೆ ನಮಸ್ಕಾರ.

**ಊರ್ಧ್ವದೇಶೇ** : ಮೇಲೆ, ಇಂದ್ರೇಶಾನಯೋಃ, ಮಧ್ಯೇ = ಇಂದ್ರ ಹಾಗೂ ರುದ್ರ ದೇವರ ಮಧ್ಯದಲ್ಲಿ, ಸತ್ಯಲೋಕಾಧಿಪತಿಯಾದ, ಸುವರ್ಣಬಣ್ಣ ದೇಹವುಳ್ಳ ಹಂಸವಾಹನನಾದ, ಕಮಲಧರಿಸಿರುವ, ಸರಸ್ವತಿ ಸಹಿತನಾದ, ಶ್ರೀವಿಷ್ಣುಪಾರ್ಷದನಾದ ಶ್ರೀಬ್ರಹ್ಮದೇವನಿಗೆ ನಮಸ್ಕಾರ.

ಇತಿ ಆವರಣ ಪೂಜಾ ಸಮಾಪ್ತಾ#

---

\# ಆವರಣ ಪೂಜೆಯ ವಿಶೇಷಾಂಶವನ್ನು ಪರಿಶಿಷ್ಟದಲ್ಲಿ ತಿಳಿಯುವುದು. ಅರ್ಥವು ಸ್ಪಷ್ಟವಿದೆ.

## 48. ಧೂಪ-ದೀಪ ಸಮರ್ಪಣಮ್ :[26]

**ಧೂಪಮಂತ್ರ –**

ವನಸ್ಪತ್ಯುದ್ಭವೋ ದಿವ್ಯೋ ಗಂಧಾಢ್ಯೋ ಗಂಧ ಉತ್ತಮಃ ।
ಆಘ್ರೇಯಃ ಸರ್ವದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಂ ॥

ಓಂ ನಮೋ ನಾರಾಯಣಾಯ ಧೂಪಮ್ ಆಘ್ರಾಪಯಾಮಿ ।

**ಏಕಾರ್ತಿಕ್ಯ ದೀಪಮಂತ್ರ –** (ಏಕಾರತಿಯನ್ನು ಮಾಡುವುದು)

ಸಾಜ್ಯಂ ತ್ರಿವರ್ತಿಸಂಯುಕ್ತಂ ವಹ್ನಿನಾ ಯೋಜಿತಂ ಮಯಾ ।
ಗೃಹಾಣ ಮಂಗಳಂ ದೀಪಂ ತ್ರೈಲೋಕ್ಯ ತಿಮಿರಾಪಹ ।
ಓಂ ನಮೋ ನಾರಾಯಣಾಯ ಏಕಾರ್ತಿಕ್ಯ ದೀಪಂ ಸಮರ್ಪಯಾಮಿ ।

---

**48. ಧೂಪ-ದೀಪ ಸಮರ್ಪಣ ಅರ್ಥ :**

**ವನಸ್ಪತ್ಯುದ್ಭವಃ** = ವೃಕ್ಷದ ರಸದಿಂದ ಉತ್ಪನ್ನವಾದ, **ದಿವ್ಯಃ** = ದಿವ್ಯವಾದ, **ಗಂಧಾಢ್ಯ** = ಸುಗಂಧದಿಂದ ಯುಕ್ತವಾದ, **ಸರ್ವದೇವಾನಾಂ** = ಸಕಲ ದೇವತೆಗಳಿಗೂ, **ಆಘ್ರೇಯಃ** = ಆಘ್ರಾಣಿಸಲು ಯೋಗ್ಯವೆನಿಸಿದ, **ಉತ್ತಮಃ ಗಂಧಃ** = ಶ್ರೇಷ್ಠಗಂಧವುಳ್ಳ, **ಅಯಂಧೂಪಃ** = ಈ ಮುಂದೆ ಇಟ್ಟಿರುವ ಧೂಪವು, **ಪ್ರತಿಗೃಹ್ಯತಾಮ್** = ಸ್ವೀಕರಿಸಲ್ಪಡಲಿ.

**ಏಕಾರ್ತಿಕ್ಯ ದೀಪ ಮಂತ್ರಾರ್ಥ :**

**ಸಾಜ್ಯಂ** = ತುಪ್ಪದಿಂದ ತೋಯಿಸಿಟ್ಟ, **ತ್ರಿವರ್ತಿಸಂಯುಕ್ತಂ** = ಮೂರು ಬತ್ತಿಗಳಿಂದ ಕೂಡಿರುವ, **ಮಯಾ** = ನನ್ನಿಂದ, **ಅಗ್ನಿನಾ ಯೋಜಿತಂ** = ಅಗ್ನಿಯ ಸಂಪರ್ಕವುಳ್ಳದಂತೆ ಮಾಡಲಾದ, **ಮಂಗಳಂದೀಪಂ** = ಮಂಗಳ ದೀಪವನ್ನು ತ್ರೈಲೋಕ್ಯ, **ತಿಮಿರಾಪಹ** = ಮೂರು ಲೋಕದ ಕತ್ತಲೆಯೂ ಪರಿಹರಿಸುವ ನೀನು, **ಗೃಹಾಣ** = ಸ್ವೀಕರಿಸು.

---

26. **ಧೂಪ-ದೀಪವಿಲ್ಲದೆ ಪೂಜೆ ಮಾಡಬಾರದು.**

**ಧೂಪಹೀನೇ ಶ್ರಿಯಂ ಹಂತಿ ದೀಪ ಹೀನೇ ಮತಿಭ್ರಮಃ ।** –ಪರಮಪುರುಷ ಸಂಹಿತಾ
**ತ್ರಿವರ್ತಿ ದೀಪನಾಶೇ ತು ಬುದ್ಧಿಪೂರ್ವಂ ಕೃತೇ ಸತಿ ।**
**ದೇವಾಃ ಗೃಹ್ಣಂತಿ ತಂ ದೀಪಂ ರಾಕ್ಷಸಾದ್ಯಾಃ ತದನ್ಯಥಾ ॥**
**ಸ್ವಯಮೇವ ವಿನಷ್ಟಂ ತು ದೀಪಂ ಗೃಹ್ಣಂತಿ ರಾಕ್ಷಸಾಃ ॥**

**49. ದ್ವಾದಶಸ್ತೋತ್ರ :** (ನೈವೇದ್ಯ ಕಾಲದಲ್ಲಿ ದ್ವಾದಶಸ್ತೋತ್ರ ಪಠನ)

[ಪರಿಶಿಷ್ಟದಲ್ಲಿ ಪೂರ್ಣ ಪಾಠವಿದೆ]

**ಓಂ ವಂದೇ ವಂದ್ಯಂ ಸದಾನಂದಂ ವಾಸುದೇವಂ ನಿರಂಜನಂ**

**ಇಂದಿರಾಪತಿಮಾದ್ಯಾದಿ ವರದೇಶ ವರಪ್ರದಮ್ ॥ 1 ॥**

**ನಮಾಮಿ ನಿಖಿಲಾಧೀಶ ಕಿರೀಟಾಘೃಷ್ಟ ಪೀಠವತ್ ।**

**ಹೃತ್ತಮ ಶ್ಶಮನೇಽರ್ಕಾಭಂ ಶ್ರೀಪತೇ ಪಾದಪಂಕಜಮ್ ॥ 2 ॥**

**ಜಾಂಬೂನದಾಂಬರಾಧಾರಂ ನಿತಂಬಂ ಚಿಂತ್ಯಮೀಶಿತುಃ ।**

**ಸ್ವರ್ಣಮಂಜೀರ ಸಂವೀತಮಾರೂಢಂ ಜಗದಂಬಯಾ ॥ 3 ॥**

---

49. ದ್ವಾದಶಸ್ತೋತ್ರದ ಅರ್ಥ :

**ವಂದ್ಯಂ** = ಸರ್ವರಿಂದ ವಂದ್ಯನಾದ, **ಸದಾನಂದಂ** = ನಿರ್ದುಷ್ಟವಾದ ಆನಂದದಿಂದ ಕೂಡಿದ, **ನಿರಂಜನಂ** = ದೋಷರಹಿತನಾದ, **ಆದ್ಯಾದಿವರದೇಶ** = ಬ್ರಹ್ಮದೇವರೆ ಆದಿಯಾಗುಳ್ಳ ವರವನ್ನು ಕೊಡುವ ದೇವತೆಗಳಿಗೂ, **ವರಪ್ರದಂ** = ವರವನ್ನು ನೀಡುವ, **ಇಂದಿರಾಪತಿಂ** = ಲಕ್ಷ್ಮೀಪತಿಯಾದ, ವಾಸುದೇವನನ್ನು, **ವಂದೇ** = ನಮಸ್ಕರಿಸುತ್ತೇನೆ ॥ 1 ॥

**ನಿಖಿಲಾಧೀಶ** = ಸಮಸ್ತತತ್ವಾಭಿಮಾನಿಗಳ, **ಕಿರೀಟಾಘೃಷ್ಟ** = ಕಿರೀಟದಿಂದ ಸ್ಪರ್ಶ ಮಾಡಲ್ಪಟ್ಟ, **ಪೀಠವತ್** = ಪಾದಪೀಠವುಳ್ಳ, **ಹೃತ್ತಮಃಶಮನೇ** = ಹೃದಯದಲ್ಲಿರುವ ಅಜ್ಞಾನವೆಂಬ ಕತ್ತಲೆಯನ್ನು ಪರಿಹರಿಸುವುದರಲ್ಲಿ, **ಅರ್ಕಾಭಂ** = ಸೂರ್ಯನ ಕಾಂತಿಯಂತಿರುವ, **ಶ್ರೀಪತೇ** = ಲಕ್ಷ್ಮೀಪತಿಯ, **ಪಾದಪಂಕಜಂ** = ಪಾದಕಮಲಗಳನ್ನು, **ನಮಾಮಿ** = ನಮಸ್ಕರಿಸುತ್ತೇನೆ ॥ 2 ॥

**ಜಾಂಬೂನದ** = ಬಂಗಾರದ, **ಅಂಬರ** = ವಸ್ತ್ರಕ್ಕೆ, **ಆಧಾರಂ** = ಆಶ್ರಯವಾಗಿರುವ, **ಸ್ವರ್ಣ** = ಸುವರ್ಣದ, **ಮಂಜೀರ** = ಒಡ್ಯಾಣದಿಂದ, **ಸಂವೀತಂ** = ಸುತ್ತುವರೆಯಲ್ಪಟ್ಟಿರುವ, **ಜಗದಂಬಯಾ** = ಜಗನ್ಮಾತೆಯಾದ ಲಕ್ಷ್ಮೀಯಿಂದ, **ಆರೂಢಂ**= ಏರಿರುವ, **ಈಶಿತುಃ** = ಸರ್ವಸ್ವಾಮಿಯಾದ, ಭಗವಂತನ, **ನಿತಂಬಂ** = ಕಟಿ ಭಾಗವನ್ನು (ಸೊಂಟ), **ಚಿಂತ್ಯಂ** = ಧ್ಯಾನ ಮಾಡಬೇಕು ॥ 3 ॥

**ಉದರಂ ಚಿಂತ್ಯ ಮೀಶಸ್ಯ ತನುತ್ವೇಽಪ್ಯಖಿಲಂ ಭರಮ್ ।**
**ವಲಿತ್ರಯಾಂಕಿತಂ ನಿತ್ಯ ಮುಪಗೂಢಂ ಶ್ರಿಯೈಕಯಾ ॥ 4 ॥**

**ಸ್ಮರಣೀಯ ಮುರೋ ವಿಷ್ಣೋಃ ಇಂದಿರಾವಾಸಮುತ್ತಮಂ ।**
**ಅನಂತಮಂತವದಿವ ಭುಜಯೋರಂತರಂ ಗತಮ್ ॥ 5 ॥**

**ಶಂಖಚಕ್ರಗದಾಪದ್ಮಧರಾಶ್ಚಿಂತ್ಯಾ ಹರೇರ್ಭುಜಾಃ ।**
**ಪೀನವೃತ್ತಾ ಜಗದ್ರಕ್ಷಾ ಕೇವಲೋದ್ಯೋಗಿನೋಽನಿಶಂ ॥ 6 ॥**

---

**ಯತ್** = ಯಾವುದು, **ತನುತ್ವೇಽಪಿ** =ಸಣ್ಣದಾಗಿದ್ದರೂ, **ಅಖಿಲಂಭರಂ** = ಸಮಸ್ತಲೋಕಗಳನ್ನೂ ಧರಿಸಿರುವ, **ವಲಿತ್ರಯಾಂಕಿತಂ** = ಮೂರು ರೇಖೆಗಳಿಂದ ಚಿಹ್ನಿತವಾಗಿರುವ, **ನಿತ್ಯ** = ಯಾವಾಗಲೂ, (ಪ್ರಲಯ ಕಾಲದಲ್ಲೂ) ಏಕಯಾ, **ಶ್ರಿಯಾ** = ಕೇವಲ ಲಕ್ಷ್ಮಿಯಿಂದ, **ಉಪಗೂಢಂ** = ಆಲಿಂಗಿತವಾಗಿರುವ, **ಈಶಸ್ಯ** = ಭಗವಂತನ, **ಉದರಂ** = ಉದರವನ್ನು, **ಚಿಂತ್ಯಂ** = ಧ್ಯಾನಿಸಬೇಕು ॥ 4 ॥

**ಯತ್** = ಯಾವುದು, **ಉತ್ತಮಂ** = ಶ್ರೇಷ್ಠವಾಗಿದ್ದು, **ಇಂದಿರಾವಾಸಂ** = ಲಕ್ಷ್ಮೀದೇವಿಯ ವಾಸಕ್ಕೆ ಯೋಗ್ಯವಾದ, ಶ್ರೀವತ್ಸಚಿಹ್ನಾಂಕಿತವಾದದ್ದೇ, **ಅನಂತಂ** = ದೇಶಕಾಲದ ಪರಿಮಿತಿರಹಿತವಾಗಿದ್ದರೂ, **ಅಂತವತ್** = ಪರಿಮಾಣಕ್ಕೆ ಸಿಲುಕಿದಂತೆ, **ಭುಜಯೋಃ** = ಎರಡು ಭುಜಗಳ, **ಅಂತರಂ** = ಮಧ್ಯದಲ್ಲಿ, **ಗತಂ** = ಸಿಕ್ಕಿಹಾಕಿಕೊಂಡಂತೆ ಪರಿಮಿತಯುಳ್ಳದ್ದಾಗಿ ತೋರುವುದೋ, ಅಂತಹ, **ಈಶಿತುಃ** = ಸರ್ವಸ್ವಾಮಿಯಾದ, **ವಿಷ್ಣೋಃ** = ಶ್ರೀವಿಷ್ಣುವಿನ, **ಉರಃ** = ಎದೆಯು, **ಸ್ಮರಣೀಯಂ** = ಧ್ಯಾನಿಸಬೇಕು ॥ 5 ॥

**ಯೇ** = ಯಾವುವು, **ಶಂಖ–ಚಕ್ರ–ಗದಾ–ಪದ್ಮಧರಾಃ** = ಶಂಖ, ಚಕ್ರ, ಗದೆ ಹಾಗೂ ಪದ್ಮಗಳನ್ನು ಧರಿಸಿವೆಯೋ, **ಪೀನವೃತ್ತಾಃ** = ದಪ್ಪವಾಗಿದ್ದು ವೃತ್ತಾಕಾರವಾಗಿವೆಯೋ, **ಅನಿಶಂ** = ಯಾವಾಗಲೂ, **ಜಗದ್‌ರಕ್ಷಾಃ** = ಜಗತ್ತಿನ ರಕ್ಷಣೆಯ ವಿಷಯದಲ್ಲಿ, **ಕೇವಲೋದ್ಯೋಗಿನಃ** = ಕೇವಲ ಉದ್ಯೋಗವುಳ್ಳವುಗಳೋ, ಅಂತಹ, **ಹರೇಃ** = ಶ್ರೀಹರಿಯ, **ಭುಜಾಃ** = ಚತುರ್ಭುಜಗಳು, **ಚಿಂತ್ಯಾಃ** = ಧ್ಯಾನಿಸಲ್ಪಡಬೇಕು ॥ 6 ॥

**ಸಂತತಂ ಚಿಂತಯೇತ್ ಕಂಠಂ ಭಾಸ್ವತ್ ಕೌಸ್ತುಭ ಭಾಸಕಂ ।**

**ವೈಕುಂಠಸ್ಯಾಖಿಲಾ ವೇದಾಃ ಉದ್ಗೀರ್ಯಂತೇಽನಿಶಂ ಯತಃ ॥ 7 ॥**

**ಸ್ಮರೇತ ಯಾಮಿನೀನಾಥ ಸಹಸ್ರಾಮಿತ ಕಾಂತಿಮತ್ ।**

**ಭವ ತಾಪಾಪನೋದೀಡ್ಯಂ ಶ್ರೀಪತೇಃ ಮುಖ ಪಂಕಜಂ ॥ 8 ॥**

**ಪೂರ್ಣಾನನ್ಯ ಸುಖೋದ್ಭಾಸಿ ಮಂದಸ್ಮಿತಮಧೀಶಿತುಃ ।**

**ಗೋವಿಂದಸ್ಯ ಸದಾ ಚಿಂತ್ಯ ನಿತ್ಯಾನಂದ ಪದಪ್ರದಂ ॥ 9 ॥**

**ಸ್ಮರಾಮಿ ಭವಸಂತಾಪ ಹಾನಿದಾಮೃತಸಾಗರಂ ।**

**ಪೂರ್ಣಾನಂದಸ್ಯ ರಾಮಸ್ಯ ಸಾನುರಾಗಾವಲೋಕನಂ ॥ 10 ॥**

---

**ಯತ್** = ಯಾವುದು, **ಭಾಸ್ವತ್ ಕೌಸ್ತುಭಭಾಸಕಂ** = ಭಾಸ್ವತ್ ಪ್ರಕಾಶಿಸುವ, **ಕೌಸ್ತುಭ** = ಕೌಸ್ತುಭಮಣಿಗೂ, **ಭಾಸಕಂ** = ಪ್ರಕಾಶಕವಾದ, **ಯತಃ** = ಯಾವ ಕಂಠದಿಂದ, **ಅನಿಶಂ** = ಯಾವಾಗಲೂ, **ಅಖಿಲಾಃ ವೇದಾಃ** = ಅನಂತ ವೇದಗಳೂ, **ಉದ್ಗೀರ್ಯಂತೇ** = ಹೊರಹೊಮ್ಮುತ್ತಿರುವುದೋ, ಅಂತಹ, **ವೈಕುಂಠಸ್ಯ** = ನಾರಾಯಣನ, **ಕಂಠಂ** = ಕಂಠವನ್ನು, **ಸಂತತಂ** = ಯಾವಾಗಲೂ, **ಚಿಂತಯೇತ್** = ಚಿಂತಿಸಲ್ಪಡಬೇಕು. ॥ 7 ॥

**ಯಾಮಿನೀನಾಥ ಸಹಸ್ರ** = ಸಾವಿರಾರು ಚಂದ್ರರ ಕಾಂತಿಗಿಂತಲೂ, **ಅಮಿತಕಾಂತಿಮತ್** = ಅನಂತಾಕಾಂತಿವುಳ್ಳ, **ಭವತಾಪಾಪನೋದಿ** = ಸಂಸಾರ-ತಾಪ ಪರಿಹರಿಸುವ, **ಈಡ್ಯಂ** = ಸ್ತುತ್ಯವಾದ, **ಶ್ರೀಪತೇಃ** = ಲಕ್ಷ್ಮೀಪತಿಯಂ, **ಮುಖಪಂಕಜಂ** = ಮುಖವನ್ನು, **ಸ್ಮರೇತ್** = ಸ್ಮರಿಸಬೇಕು ॥ 8 ॥

**ಯತ್** = ಯಾವುದು, **ಪೂರ್ಣನ್ಯಸುಖೋದ್ಭಾಸಿ** = ಪೂರ್ಣವಾದ ಹಾಗೂ ಸುಖವನ್ನು ಹೊರಸೂಸುತ್ತಿರುವ, **ನಿತ್ಯಾನಂದಪದಪ್ರದಂ** = ನಿತ್ಯವಾದ ಆನಂದವನ್ನು (ಮೋಕ್ಷವನ್ನು) ಕೊಡಲು ಸಮರ್ಥವಾದ, **ಅಧೀಶಿತುಃ** = ಜಗನ್ನಾಥನಾದ, **ಗೋವಿಂದಸ್ಯ** = ಗೋವಿಂದನ, **ಮಂದಸ್ಮಿತಂ** = ಮಂದಹಾಸವನ್ನು, **ಸದಾ** = ಯಾವಾಗಲೂ, **ಚಿಂತ್ಯಂ** = ಧ್ಯಾನಿಸಬೇಕು ॥ 9 ॥

**ಯತ್** = ಯಾವುದು, **ಭವಸಂತಾಪ** = ಸಂಸಾರತಾಪವನ್ನು, **ಹಾನಿದ** = ನಾಶ ಮಾಡುವ, **ಅಮೃತಸಾಗರಂ** = ಕ್ಷೀರ ಸಮುದ್ರದಂತಿರುವ, **ಪೂರ್ಣಾನಂದಸ್ಯ** = ಪೂರ್ಣಾನಂದ ಭರಿತನಾದ, **ರಾಮಸ್ಯ** = ರಾಮನ, **ಸಾನುರಾಗ** = ಕರುಣೆಯಿಂದ ಕೂಡಿರುವ, **ಅವಲೋಕನಂ** = ಕೃಪಾಕಟಾಕ್ಷವನ್ನು, **ಸ್ಮರಾಮಿ** = ಸ್ಮರಿಸುತ್ತೇನೆ ॥ 10 ॥

**ಧ್ಯಾಯೇದ್ ಅಜಸ್ರಮೀಶಸ್ಯ ಪದ್ಮಜಾದಿ ಪ್ರತೀಕ್ಷಿತಂ।**
**ಭ್ರೂಭಂಗಂ ಪಾರಮೇಷ್ಠ್ಯಾದಿ ಪದದಾಯಿ ವಿಮುಕ್ತಿದಂ ॥ 11 ॥**

**ಸಂತತಂ ಚಿಂತಯೇಽನಂತಂ ಅಂತಕಾಲೇ ವಿಶೇಷತಃ।**
**ನೈವೋದಾಪುಃ ಗೃಣಂತೋಽಂತಂ ಯದ್ಗುಣಾನಾಮಜಾದಯಃ ॥ 12॥**

ಇತಿ ಶ್ರೀಮದಾನಂದತೀರ್ಥ ವಿರಚಿತೇ
ದ್ವಾದಶಸ್ತೋತ್ರೇ ಪ್ರಥಮೋಽಧ್ಯಾಯಃ ॥

---

**ಯತ್** = ಯಾವುದು, **ಅಜಸ್ರಂ** = ಯಾವಾಗಲೂ, **ಪದ್ಮಜಾದಿ** = ಬ್ರಹ್ಮದೇವನೇ ಮೊದಲಾದ ದೇವತೆಗಳಿಂದ, **ಪ್ರತೀಕ್ಷಿತಂ** = ಪ್ರತೀಕ್ಷೆ ಮಾಡಲ್ಪಟ್ಟ, **ಪಾರಮೇಷ್ಠ್ಯಾದಿ ಪದದಾಯಿ** = ಬ್ರಹ್ಮಪದವೆ ಮೊದಲಾದ ಸ್ಥಾನಗಳನ್ನು ಕೊಡಲು ಸಮರ್ಥವಾದ, **ವಿಮುಕ್ತಿದ** = ಮೋಕ್ಷವನ್ನೇ ಕೊಡಬಲ್ಲ, **ಈಶಸ್ಯ** = ಸಮರ್ಥನಾರಾಯಣನ, **ಭ್ರೂಭಂಗಂ** = ಭ್ರೂವಿಲಾಸವನ್ನು, **ಧ್ಯಾಯೇತ್** = ಧ್ಯಾನಿಸಬೇಕು ॥ 11 ॥

**ಅಜಾದಯಃ** = ಬ್ರಹ್ಮಾದಿಗಳು, **ಯದ್** = ಯಾವ ಭಗವಂತನ, **ಗುಣಾನಾಂ** = ಗುಣಗಳನ್ನು, **ಗೃಣಂತಃ** = ನಿರಂತರ ಸ್ತುತಿಸುತ್ತಿದ್ದರೂ, **ಅಂತಂ** = ಕಡೆಯನ್ನು, **ನೈವ ಉದಾಪುಃ** = ಹೊಂದಲೇ ಇಲ್ಲವೋ, **ತಂ** = ಅಂತಹ, **ಅನಂತಂ** = ನಾಶವಿಲ್ಲದ, ಇನಂ = ಭಗವಂತನನ್ನು, **ಸಂತತಂ** = ಯಾವಾಲೂ, **ಚಿಂತಯ** = ಧ್ಯಾನಿಸು, **ವಿಶೇಷತಃ** = ಇನ್ನೂ ವಿಶೇಷವಾಗಿ, **ಅಂತಕಾಲೇ** = ಮರಣ ಕಾಲದಲ್ಲಿ, **ಚಿಂತಯ** = ಚಿಂತಿಸು ॥ 12 ॥

ಇತಿ ಶ್ರೀಮದಾನಂದತೀರ್ಥ ವಿರಚಿತೇ
ದ್ವಾದಶಸ್ತೋತ್ರೇ ಪ್ರಥಮೋಽಧ್ಯಾಯಃ ॥

## 50. ನೈವೇದ್ಯ ಸಮರ್ಪಣಮ್ :[27]

**ದೇವಸ್ಯ ದಕ್ಷಿಣೇ ಭಾಗೇ ಚತುರಸ್ರ ಮಂಡಲಂ ಕೃತ್ವಾ।**
**ತನ್ಮಧ್ಯೇ ಪ್ರಣವಂ ವಿಲಿಖ್ಯ ಶ್ರೀಬೀಜಂ ತಸ್ಯ ಪಾರ್ಶ್ವಯೋಃ ಸಂಲಿಖೇತ್ ॥**

**ಪ್ರಣವೇನ ಅಭಿಘಾರ್ಯ, ತುಲಸೀದಳಂ * ನಿಧಾಯ, ಪ್ರೋಕ್ಷಣೀ-ಯೋದಕಂ ಗೃಹೀತ್ವಾ, ಗಾಯತ್ರ್ಯಾ ಮೂಲಮಂತ್ರಂ ಚ ಸಮುಚ್ಚರನ್, ಅನ್ನಾದಿಷು ಪ್ರೋಕ್ಷಯೇತ್ ॥ 1 ॥**

50. ನೈವೇದ್ಯ ಸಮರ್ಪಣದ ಅರ್ಥ : 1) **ದೇವಸ್ಯ** = ಭಗವಂತನ, **ದಕ್ಷಿಣೇ ಭಾಗೇ** = ಬಲಭಾಗದಲ್ಲಿ, **ಚತುರಸ್ರಂಮಂಡಲಂ** = ಚಚ್ಚೌಕ ಮಂಡಲವನ್ನು, **ಕೃತ್ವಾ** = ಮಾಡಿ, **ತನ್ಮಧ್ಯೇ** = ಅದರ ಮಧ್ಯದಲ್ಲಿ, **ರಂಗವಲ್ಯಾ** = ರಂಗೋಲಿಯಿಂದ, **ಪ್ರಣವಂ** = ಓಂಕಾರ ಬೀಜಾಕ್ಷರವನ್ನು, **ವಿಲಿಖ್ಯ** = ಬರೆದು, **ತಸ್ಯ** = ಓಂಕಾರದ, **ಪಾರ್ಶ್ವಯೋಃ** = ಎಡಬಲಗಳಲ್ಲಿ, **ಶ್ರೀಬೀಜಂ** = ಶ್ರೀ ಎಂಬ ಬೀಜಾಕ್ಷರವನ್ನು, **ಸಂಲಿಖೇತ್** = ಬರೆಯಬೇಕು, **ಪ್ರಣವೇನ** = ಓಂಕಾರವನ್ನು ಉಚ್ಚರಿಸುತ್ತಾ, **ಅಭಿಘಾರ್ಯ** = ನೈವೇದ್ಯದ ಮೇಲೆ ತುಪ್ಪದಿಂದ ಅಭಿಘಾರ ಮಾಡಿ, **ತುಲಸೀದಲಂ** = ನೈವೇದ್ಯದ ಮೇಲೆ, ತುಲಸೀದಳವನ್ನು, **ನಿಧಾಯ** = ಹಾಕಿ, **ಪ್ರೋಕ್ಷಣೀಯ ಉದಕಂ** = ನೀರನ್ನು, **ಗೃಹೀತ್ವಾ** = ಕೈಯಲ್ಲಿ ಉದ್ಧರಣೆಯಿಂದ ಹಾಕಿಕೊಂಡು, **ಗಾಯತ್ರ್ಯಾ** = ವಿಷ್ಣು ಗಾಯತ್ರೀ ಮಂತ್ರದಿಂದ, **ಚ** = ಹಾಗೆಯೇ,

---

27. ನೈವೇದ್ಯ ನೆಲವನ್ನು ಗೋಮಯದಿಂದ ಶುದ್ಧಿ ಮಾಡಿ ಚಚ್ಚೌಕ ಮಾಡಿ "ಶ್ರೀ"ಕಾರವನ್ನು ರಂಗೋಲಿಯಿಂದ ಬರೆಯಬೇಕು. ಒಂದು ಮಂಡಲದಲ್ಲಿ ಹಾಲು, ಹಣ್ಣು, ತಾಂಬೂಲ ಇವುಗಳನ್ನು ಇಡಬೇಕು. ನೈವೇದ್ಯಗಳಲ್ಲಿ "ಓಂ" ಎನ್ನುತ್ತಾ ಅಭಿಘಾರ ಮಾಡಿ ತುಲಸೀದಳಗಳನ್ನು ಹಾಕಬೇಕು. ಯಥಾಶಕ್ತಿ ದ್ವಾದಶಸ್ತೋತ್ರ ಪಠಿಸುವುದು. ವಿಷ್ಣು ಗಾಯತ್ರಿಯಿಂದ ನೈವೇದ್ಯ ಪ್ರೋಕ್ಷಿಸಬೇಕು. ತಾರ್ಕ್ಷ್ಯಾದಿ ಮುದ್ರೆ ತೋರಿಸಬೇಕು. ನಂತರ ಗಾಯತ್ರಿಯಿಂದ ಪರಿಷೇಕ ಮಾಡಿ, ಮಹಾಲಕ್ಷ್ಮಿಯ ಹಸ್ತದಿಂದ ಆಪೋಶನವನ್ನು ಹಾಕಿ ಆ ಜಲವನ್ನು ಅರ್ಘ್ಯ ಪಾತ್ರದಲ್ಲಿ ಹಾಕಬೇಕು. ಪಂಚಪ್ರಾಣಾಹುತಿಗಳನ್ನು ಅರ್ಘ್ಯ ಪಾತ್ರೆಗೆ ಹಾಕಿ, ಮುಖವನ್ನು ವಸ್ತ್ರದಿಂದ ಮುಚ್ಚಿಕೊಂಡು ನೂರೆಂಟು ಬಾರಿ ಮೂಲಮಂತ್ರವನ್ನು ಜಪಿಸಬೇಕು. ತುಲಸೀದಳ-ವಿಲ್ಲದೆ ಹರಿಯು ನೈವೇದ್ಯ ಸ್ವೀಕರಿಸುವುದಿಲ್ಲ. ಬದಲಾಗಿ ಅಪ್ರಸನ್ನನಾಗುವನು ಎಂದು ಲಕ್ಷ್ಮೀ ಸಂಹಿತೆಯಲ್ಲಿದೆ.

* ದಿವ್ಯಾನ್ನಮಪಿ ರಾಜೇಂದ್ರ ತುಲಸೀದಲವರ್ಜಿತಂ।
ನ ಗೃಹ್ಣಾತಿ ಹರಿರ್ದೇವಃ ವಿಷಮಂ ಚ ಕರೋತಿ ಸಃ ॥ – ಲಕ್ಷ್ಮೀ ಸಂಹಿತಾ 2/6/28

ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ । ತನ್ನೋ ವಿಷ್ಣುಃ ಪ್ರಚೋದಯಾತ್ – ಹೀಗೆ ನೈವೇದ್ಯದ ಮೇಲೆ ಪ್ರೋಕ್ಷಿಸಬೇಕು.

ಅಮೃತೀಕರಣಾರ್ಥಂ ಧೇನುಮುದ್ರಾಂ ಪ್ರದರ್ಶಯೇತ್ ।

ಪವಿತ್ರೀಕರಣಾರ್ಥಂ ಶಂಖಮುದ್ರಾಂ ಪ್ರದರ್ಶಯೇತ್ ।

ಸಂರಕ್ಷಣಾರ್ಥಂ ಚಕ್ರಮುದ್ರಾಂ ಪ್ರದರ್ಶಯೇತ್ ।

ನಿರ್ವಿಷೀಕರಣಾರ್ಥಂ ತಾರ್ಕ್ಷ್ಯಮುದ್ರಾಂ ಪ್ರದರ್ಶಯೇತ್ ।

ಅಭಿವೃದ್ಧ್ಯರ್ಥಂ ಗಿರಿಮುದ್ರಾಂ ಪ್ರದರ್ಶಯೇತ್ ।

ಶೈತಲ್ಯಾರ್ಥಂ ಶಶಿಮುದ್ರಾಂ ಪ್ರದರ್ಶಯೇತ್ ।

ಓಂ ನಮೋ ನಾರಾಯಣಾಯ ॥ 2 ॥

ಓಂ ಭೂರ್ಭುವಸ್ಸ್ವಃ । ತತ್ಸವಿತುರ್ವರೇಣ್ಯಂ । ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್।

ಸತ್ಯಂ ತ್ವರ್ತೇನ ಪರಿಷಿಂಚಾಮಿ ।

ಸಪರಿವಾರಾಯ ಶ್ರೀಲಕ್ಷ್ಮೀನಾರಾಯಣಾಯ ಮಹಾನೈವೇದ್ಯಂ ಸಮರ್ಪಯಾಮಿ, ಅಮೃತೋಪಸ್ತರಣಮಸಿ ಸ್ವಾಹಾ ।

---

**ಮೂಲಮಂತ್ರಂ** = ಮೂಲಮಂತ್ರವನ್ನು, **ಸಮುಚ್ಚರನ್** = ಉಚ್ಚರಿಸುತ್ತಾ, **ಅನ್ನಾದಿಷು** = ಅನ್ನಾದಿ ನೈವೇದ್ಯದ ಮೇಲೆ, **ಪ್ರೋಕ್ಷಯೇತ್** = ಪ್ರೋಕ್ಷಿಸಬೇಕು.

2) **ಅಮೃತೀಕರಣಾರ್ಥಂ** = ಅಮೃತವನ್ನಾಗಿಸಲು ಧೇನುಮುದ್ರೆಯನ್ನು, ಪವಿತ್ರೀಕರಿಸಲು ಶಂಖಮುದ್ರೆಯನ್ನು ತೋರಿಸಬೇಕು. ಸಂರಕ್ಷಣೆಗಾಗಿ ಚಕ್ರಮುದ್ರೆಯನ್ನು ತೋರಿಸಬೇಕು. ವಿಷ ಹೋಗಲಾಡಿಸಲು ಗರುಡ ಮುದ್ರೆ ತೋರಿಸಬೇಕು. ನೈವೇದ್ಯ ಅಭಿವೃದ್ಧಿಗೊಳಿಸಲು ಮೇರು ಮುದ್ರೆಯನ್ನು ತೋರಿಸಬೇಕು. ಬಿಸಿಯಾಗಿರುವ ನೈವೇದ್ಯ ತಂಪಾಗಿಸಲು ಚಂದ್ರಮುದ್ರೆಯನ್ನು ತೋರಿಸುವುದು. ಪರಿವಾರದಿಂದ ಸಹಿತರಾದ ಲಕ್ಷ್ಮೀನಾರಾಯಣರಿಗೆ ನೈವೇದ್ಯವನ್ನು ಅರ್ಪಿಸುತ್ತೇನೆ.

3) **ಅಮೃತ** = ವಾಯುದೇವನೇ, **ತ್ವಂ** = ನೀನು, **ಉಪಸ್ತರಣಮಸಿ** = ಉಡುವ ವಸ್ತ್ರವಾಗಿರುವೆ, **ಸ್ವಾಹಾ** = ನಿನಗೆ ಸ್ವಾಗತ, ರಮಾಪತಿಯಾದ, **ದೇವ** =

**ಮಹಾಲಕ್ಷ್ಮೀ ಸಮೇತಸ್ಯ ವಿಷ್ಣೋ ತೇ ದಕ್ಷಿಣೇ ಕರೇ ।**

**ಆಪೋಶನಂ ದೀಯಮಾನಂ ಪಿಬ ದೇವ ರಮಾಪತೇ ॥ 3 ॥**

**ಸುಧಾರಸಂ ಸುವಿಪುಲಂ ಆಪೋಶನಮಿದಂ ತವ ।**

**ಗೃಹಾಣ ಕಲಶಾನೀತಂ ಯಥೇಷ್ಟಂ ಉಪಭುಜ್ಯತಾಂ ॥ 4 ॥**

**(ಇತಿ ಲಕ್ಷ್ಮೀ ಹಸ್ತೇನ ಆಪೋಶನಂ ದತ್ವಾ, ಆಪೋಶನೋಚ್ಚಿಷ್ಟಂ ಪಾತ್ರಾಂತರೇ ಕ್ಷಿಪೇತ್)**

**ಆಪೋಶನ ಮಂತ್ರಾಃ** : [5 ಬಾರಿ ಅರ್ಘ್ಯ ಪಾತ್ರೆಯಲ್ಲಿ ನೀರು ಬಿಡುವುದು]

**ಪ್ರಾಣಾಯ ಸ್ವಾಹಾ – ಪ್ರಾಣಾತ್ಮನೇ ಅನಿರುದ್ಧಾಯ ಇದಂ ನ ಮಮ ।**

**ಅಪಾನಾಯ ಸ್ವಾಹಾ–ಅಪಾನಾತ್ಮನೇ ಪ್ರದ್ಯುಮ್ನಾಯ ಇದಂ ನ ಮಮ।**

**ವ್ಯಾನಾಯ ಸ್ವಾಹಾ – ವ್ಯಾನಾತ್ಮನೇ ಸಂಕರ್ಷಣಾಯ ಇದಂ ನ ಮಮ॥**

---

ವಿಷ್ಣುವೇ, **ಅನಘ** = ದೋಷರಹಿತನಾದ, **ದೇವ** = ರಮಾಪತೇ, **ಮಹಾಲಕ್ಷ್ಮಾ** = ಮಹಾಲಕ್ಷ್ಮೀದೇವಿಯಿಂದ, **ತೇ** = ನಿನ್ನ, ದಕ್ಷಿಣೇ, **ಕರೇ** = ಬಲಗೈಯಲ್ಲಿ, ದೀಯಮಾನಂ ಕೊಡುತ್ತಿರುವ, **ಸುಧಾರೂಪಂ** = ಅಮೃತರೂಪವಾದ, **ಆಪೋಶನಂ** = ಕುಡಿಯಲು ಯೋಗ್ಯವಾದ ನೀರನ್ನು, ಪಿಬ = ಸ್ವೀಕರಿಸು॥

4) **ಭಗವಂತನೇ, ಸುಧಾರಸಂ** = ಅಮೃತದರಸದಂತಿರುವ, **ಸುವಿಪುಲಂ** = ಅಧಿಕವಾಗಿರುವ, **ಇದಂ** = ಈ, **ಕಲಶಾನೀತಂ** = ಕಲಶದಿಂದ ತಂದಿರುವ, **ಆಪೋಶನಂ** = ಆಪೋಶನ ಜಲವನ್ನು, **ಗೃಹಾಣ** = ಸ್ವೀಕರಿಸು, **ಇತಿ** = ಹೀಗೆ, **ಲಕ್ಷ್ಮೀಹಸ್ತೇನ** = ಲಕ್ಷ್ಮಿಹಸ್ತದಿಂದ, **ಆಪೋಶನಂ** = ಆಪೋಶನ ಹಾಕಿದ ಮೇಲೆ ಉಳಿದ ನೀರನ್ನು, **ಪಾತ್ರಾಂತರೇ** = ಇನ್ನೊಂದು ಪಾತ್ರೆಯಲ್ಲಿ (ಅರ್ಘ್ಯಪಾತ್ರೆ) ಹಾಕಬೇಕು.

5) **ಪ್ರಾಣಾಯ** = ಪ್ರಾಣನಾಮಕ ಭಗವಂತನಿಗೆ, **ಸ್ವಾಹಾ** = ಆಹುತಿ ಕೊಡುತ್ತಿರುವೆನು, **ಇದಂ** = ಇದು, **ಪ್ರಾಣಾತ್ಮನೇ ಅನಿರುದ್ಧಾಯ** = ಪ್ರಾಣಾನಾಮಕ ಅನಿರುದ್ಧನಿಗೆ, **ನ, ಮಮ** = ನನ್ನದಲ್ಲ, **ಅಪಾನಾಯ ಸ್ವಾಹಾ** = ಅಪಾನನಾಮಕ ಪ್ರದ್ಯುಮ್ನನಿಗೆ, **ಸ್ವಾಹಾ** = ಆಹುತಿಯು, **ಇದಂ ನಮಮ** = ನನ್ನದಲ್ಲ.

**ವ್ಯಾನಾಯ ಸ್ವಾಹಾ** = ವ್ಯಾನನಾಮಕ ಸಂಕರ್ಷಣನಿಗೆ, **ಸ್ವಾಹಾ** = ಆಹುತಿಯನ್ನರ್ಪಿಸುವೆ, **ಇದಂ** = ಇದು, **ನಮಮ** = ನನ್ನದಲ್ಲ, **ಉದಾನಾಯಸ್ವಾಹಾ** = ಉದಾನ ನಾಮಕ ವಾಸುದೇವನಿಗೆ ಅರ್ಪಿಸುವೆ, **ಇದಂ ನಮಮ** = ಇದು ನನ್ನದಲ್ಲ,

**ಉದಾನಾಯಸ್ವಾಹಾ – ಉದಾನಾತ್ಮನೇ ವಾಸುದೇವಾಯ ಇದಂ ನ ಮಮ ।**

**ಸಮಾನಾಯ ಸ್ವಾಹಾ – ಸಮಾನಾತ್ಮನೇ ನಾರಾಯಣಾಯ ಇದಂ ನ ಮಮ ।**

**ಶಂಕಸ್ಥಿತೋದಕಂ ಪಾತ್ರಾಂತರೇ ಕ್ಷಿಪೇತ್ ॥ 5 ॥**

[ಕೆಳಗಿನ ಮಂತ್ರವನ್ನು ಹೇಳಿ ತುಲಸೀದಳವನ್ನು ನೈವೇದ್ಯ ತಟ್ಟೆಯಲ್ಲಿ ಹಾಕುವುದು]

**ಅಂಜಲಿಮುದ್ರಯಾ ತುಲಸೀದಲಂ ಗೃಹೀತ್ವಾ ।**[28]

**ಅದ್ಯತಿಷ್ಠತಿ ಯತ್ ಕಿಂಚಿತ್ ಕಲ್ಪಿತಂ ಚಾಪರೇ ಗೃಹೇ ।**

**ಪಕ್ವಮನ್ನಂ ಸಪಾನೀಯಂ ಸರ್ವೋಪಸ್ಕರಸಂಯುತಂ ॥ 6 ॥**

**ಯಥಾಕಾಲಂ ಮನುಷ್ಯಾದ್ಯೈಃ ಭೋಕ್ಷಮಾಣಂ ಸುರೈರಪಿ ।**

**ತತ್ಸರ್ವಂ ವಿಷ್ಣುಪೂಜಾಸ್ತು ಪ್ರೀಯತಾಂ ಮೇ ಜನಾರ್ದನಃ ॥**

---

**ಸಮಾನಾಯಸ್ವಾಹಾ** = ಸಮಾನನಾಮಕ ನಾರಾಯಣನಿಗೆ ಅರ್ಪಿಸುವೆನು, **ಇದಂ ನ ಮಮ** = ಇದು ನನ್ನದಲ್ಲ, **ಇತಿ** = ಹೀಗೆಂದು, **ಶಂಕಸ್ಥಿತೋದಕಂ** = ಶಂಖ ನೀರನ್ನು, **ಪಾತ್ರಾಂತರ** = ಅರ್ಘ್ಯ ಪಾತ್ರೆಯಲ್ಲಿ, **ಕ್ಷಿಪೇತ್** = ಹಾಕಬೇಕು.

6) **ಅಂಜಲಿಮುದ್ರಯಾ** = ಅಂಜಲಿಮುದ್ರೆಯಿಂದ, (ಬೊಗಸೆಯಲ್ಲಿ), **ತುಲಸೀದಲಂ** = ತುಲಸೀದಲವನ್ನು, **ಗೃಹಿತ್ವಾ** = ಹಿಡಿದುಕೊಂಡು, **ಅದ್ಯ** = ಈ ದಿನ, **ಗೃಹೇ** = ನಮ್ಮ ಮನೆಯಲ್ಲಿ, **ಯತ್** = ಯಾವ, **ಕಿಂಚಿತ್** = ಭಗವಂತನು ಕೊಟ್ಟಿದ್ದು, **ತಿಷ್ಠತಿ** = ತಯಾರಾಗಿದೆಯೋ, **ಅಪರೇ ಗೃಹೇ** = ಬೇರೆಯವರ ಮನೆಯಲ್ಲಿ, **ಯತ್** = ಯಾವ, ಸರ್ವೋಪಸ್ಕರ, **ಸಂಯುತಂ** = ಎಲ್ಲಾ ರೀತಿಯಾದ ವ್ಯಂಜನಗಳಿಂದ, ಕೂಡಿದ, **ಪಕ್ವಮನ್ನಂ** = ಪಕ್ವಾನ್ನವು, **ಸುಪಾನೀಯಂ** = ಶುದ್ಧೋದಕದಿಂದ ಕೂಡಿದ ವಸ್ತುಗಳು, **ಕಲ್ಪಿತಂ** = ತಯಾರಾಗಿದೆಯೋ ಹಾಗೆಯೇ, **ಮನುಷ್ಯಾದ್ಯೈಃ ಶರೀರಿಭಿಃ** = ಮನುಷ್ಯರೇ ಮೊದಲಾದ ಪ್ರಾಣಿಗಳಿಂದ, **ಯಥಾಕಾಲಂ** = ಕಾಲಕ್ಕೆ ತಕ್ಕಂತೆ, **ಭೋಕ್ಷ್ಯಮಾಣಂ** = ತಿನ್ನಲ್ಪಡುವ, **ತತ್ಸರ್ವಂ** = ಆ ಎಲ್ಲವೂ, **ವಿಷ್ಣು ಪೂಜಾ ಅಸ್ತು** = ವಿಷ್ಣು ಪೂಜೆಯಾಗಲಿ ಇದರಿಂದ, **ಜನಾರ್ದನಃ** = ಜನಾರ್ದನನು, **ಮೇ** = ನನ್ನ ಮೇಲೆ, **ಪ್ರೀಯತಾಂ** = ಪ್ರೀತನಾಗಲಿ

---

28. **ಆದ್ಯ ತಿಷ್ಠತಿ ಯತ್ ಕಿಂಚಿದಿತಿ ಮಂತ್ರೇಣಾಭಕ್ತಿತಃ ।**
**ತಥೈವ ಮಾನಸನ್ ಭಕ್ಷ್ಯ ಭೋಜ್ಯಾದೀನ್ ಬಹುಶೋಽರ್ಪಯೇತ್ ॥**

**ಅನ್ನಾನಿ ಪಾಯಸಮುಖಾನಿ ವಿಶುದ್ಧಮಂತಿ ಸ್ನಿಗ್ಧಾನಿ ಸತ್ಕದಲೀ ಮೋದಕಸಂಭೃತಾನಿ । ಸರ್ಪಿರ್ಗುಡೈಃ ಮಧುಭಿರಾರ್ದ್ರತಮಾನಿ ಭೂಯಃ ಸ್ವಾಮಿನ್ ಸಮರ್ಪಿತಮಿದಂ ಹಿ ನಮೋ ನಮಸ್ತೇ ॥ 7 ॥**

**ಸೌವರ್ಣೇ ಸ್ಥಾಲಿಸಂಘೇ ಮಣಿಗಣಖಚಿತೇ ಗೋಘೃತಾಕ್ತಾನ್ ಸುಪಕ್ವಾನ್ । ಭಕ್ಷ್ಯಾನ್ ಭೋಜ್ಯಾಂಶ್ಚ ಲೇಹ್ಯಾನ್ ಅಪರಮಪಿ ಮಹಚ್ಚೋಷ್ಯಮನ್ನಂ ವಿಧಾಯ। ನಾನಾಶಾಕೈಃ ಉಪೇತಂ ದಧಿಮಧುಸುಘೃತಂ ಕ್ಷೀರ ಪಾನೀಯಯುಕ್ತಂ ತಾಂಬೂಲಂ ಚಾಪಿ ವಿಷ್ಣೋಃ ಪ್ರತಿದಿವಸಮಹಂ ಮಾನಸೇ ಚಿಂತಯಾಮಿ ॥ 8 ॥**[29]

---

7) **ಸ್ವಾಮಿನ್** = ಭಗವಂತನೇ, **ವಿಶುದ್ಧಮಂತಿ** = ಶುದ್ಧರಾಗಿ ಮಾಡಿದ, **ಪಾಯಸಮುಖಾನಿ** = ಪಾಯಸವೆ ಮೊದಲಾದವುಗಳನ್ನು, **ಸ್ನಿಗ್ಧಾನಿ** = ಹಣ್ಣಾಗಿ ರಸವತ್ತಾದ, **ಸತ್‌ಕದಲೀ** = ಒಳ್ಳೆಯ ಬಾಳೇಹಣ್ಣುಗಳನ್ನು, **ಸರ್ಪಿರ್ಗುಡೈಃ** = ಬೆಲ್ಲ ಹಾಗೂ ತುಪ್ಪದಿಂದ, **ಮಧುಭಿಃ** = ಜೇನುತುಪ್ಪದಿಂದಲೂ, **ಭೂಯಃ** = ಇನ್ನೂ ಹೆಚ್ಚಾಗಿ, **ಆರ್ದ್ರತಮಾನಿ** = ಚೆನ್ನಾಗಿ ಮೃದುವಾದ, **ಮೋದಕ ಸಂಭೃತಾನಿ** = ಕಡುಬು ಮೊದಲಾದ, **ಇದಂ** = ಈ ನೈವೇದ್ಯ ವಸ್ತುಗಳು, **ಸಮರ್ಪಿತಂ** = ಅರ್ಪಿಸಲ್ಪಟ್ಟಿದೆ, **ತೇ** = ನಿನಗೆ, **ನಮೋ ನಮಃ** = ನಮಸ್ಕಾರವು.

8) **ಸೌವರ್ಣೇ** = ಸುವರ್ಣ ನಿರ್ಮಿತವಾದ, **ಮಣಿಗಣಖಚಿತೇ** = ಮಣಿಗಳಿಂದ ಕೆತ್ತಿರುವ, **ಸ್ಥಾಲಿಸಂಘೇ** = ಪಾತ್ರೆಗಳಲ್ಲಿ ಇಟ್ಟಿರುವ, **ಗೋಘೃತಾಕ್ತಾನ್** = ಗೋಘೃತದಿಂದ ಸಂಸ್ಕರಿಸಲ್ಪಟ್ಟ, **ಸುಪಕ್ವಾನ್** = ಚೆನ್ನಾಗಿ ಪಕ್ವ ಮಾಡಿದ, **ಭಕ್ಷ್ಯಾನ್** = ಭಕ್ಷ್ಯಗಳನ್ನು, **ಭೋಜ್ಯಾನ್** = ಅನ್ನ ಮೊದಲಾದ ಭೋಜ್ಯ ಪದಾರ್ಥಗಳನ್ನು, **ಲೇಹ್ಯಾನ್** = ಉಪ್ಪಿನ ಕಾಯಿ ಮೊದಲಾದ ಚಪ್ಪರಿಸಿ ತಿನ್ನುವ ವಸ್ತುಗಳನ್ನು, **ಚೋಷ್ಯಾನ್** = ಪಾಯಸ, ಪಾನಕ ಮೊದಲಾದ ಕುಡಿಯಲು ಯೋಗ್ಯವಸ್ತುಗಳನ್ನೂ, **ಅನ್ನಂ** = (ಪರಿತಃ) ಅನ್ನದ ಸುತ್ತಲೂ, **ನಿಧಾಯ** = ಇಟ್ಟು, **ನಾನಾಶಾಕೈಃ ಉಪೇತಂ** = ನಾನಾ ವಿಧ ತರಕಾರಿಗಳ ಪಲ್ಯೆಗಳಿಂದಲೂ, **ಕ್ಷೀರಪಾನೀಯಯುಕ್ತಂ** = ಹಾಲು ಹಾಗೂ ನೀರಿನಿಂದ ಕೂಡಿದ, **ದಧಿ-ಮಧು-ಸುಘೃತಂ** = ಮೊಸರು, ಜೇನುತುಪ್ಪ, ತುಪ್ಪಗಳಿಂದ ಕೂಡಿದ, **ತಾಂಬೂಲಂಚಾಪಿ** = ತಾಂಬೂಲವನ್ನೂ, **ಅಸ್ಯ ವಿಷ್ಣೋಃ** = ಈ ಬಿಂಬರೂಪಿ ಭಗವಂತನಿಗೆ, **ಮಾನಸೇ** = ಮನಸ್ಸಿನಲ್ಲಿ, **ಚಿಂತಯಾಮಿ** = ಚಿಂತಿಸುತ್ತೇನೆ.

---

29. ಚಾತುರ್ಮಾಸ್ಯದಲ್ಲಿ ಈ ಶ್ಲೋಕ ಪಠಿಸಬಾರದು – ಛಲಾರಿ

**ಶ್ರೀನಿವಾಸ ನಮಸ್ತುಭ್ಯಂ ಮಹಾನೈವೇದ್ಯ ಮುತ್ತಮಂ ।**
**ನಿತ್ಯತೃಪ್ತ ಗೃಹಾಣೇದಂ ಕೃಪಯಾ ಭಕ್ತವತ್ಸಲ ॥**

**ಭಗವಾನ್ ಶ್ರೀಪತೇ ನ್ಯಸ್ತಂ ನೈವೇದ್ಯಂ ತ್ವತ್‌ಪುರೋ ಮಯಾ ।**
**ಕಪಿಲಾತ್ಮಕ ದಿವ್ಯೇನ ಚಕ್ಷುಷಾ ತ್ವಂ ವಿಲೋಕಯ ॥**

**ಕೃತ್ವಾ ಪವಿತ್ರಂ ಪೂರ್ಣಂ ಚ ಸಾಧು ಸ್ವಾದುರಸೈರ್ಯುತಂ ।**
**ನೃಸಿಂಹಾತ್ಮಕರೂಪೇಣ ದಿವ್ಯ ಘ್ರಾಣೇಂದ್ರಿಯೇಣ ತು ॥**

**ತದ್ವಸ್ತುನಿಷ್ಠಗಂಧಂ ಚ ದಿವ್ಯ ಮಾಜಿಘ್ರ ಚಿನ್ಮಯ ।**
**ಭೃಗುರಾಮ ಸ್ವರೂಪೇಣ ದಿವ್ಯವಾಗಿಂದ್ರಿಯೇಣ ತು ॥**

9. **ಭಕ್ತವತ್ಸಲ** = ಭಕ್ತವತ್ಸಲನಾದ, **ಶ್ರೀನಿವಾಸ** = ಲಕ್ಷ್ಮೀಪತಿಯೇ, **ತುಭ್ಯಂ** = ನಿನಗೋಸ್ಕರ, **ನಮಃ** = ನಮಸ್ಕಾರವು, **ಸುರುಶ್ರೇಷ್ಠ** = ದೇವತಾಶ್ರೇಷ್ಠನೇ, **ಉತ್ತಮಂ** = ಉತ್ತಮವಾದ, **ಮಹಾನೈವೇದ್ಯಂ** = ಮಹಾನೈವೇದ್ಯವನ್ನು, **ನಿತ್ಯತೃಪ್ತ** = ನಿತ್ಯ ತೃಪ್ತನಾದ ನೀನು, **ಕೃಪಯಾ** = ನನ್ನ ಮೇಲಿನ ದಯೆಯಿಂದ, **ಗೃಹಾಣ** = ಸ್ವೀಕರಿಸು,

**ಹೇ ಭಗವನ್ ಶ್ರೀಪತೇ** = ಸರ್ವ ಸಮರ್ಥನಾದ ರಮಾಪತಿಯೇ, **ತತ್ಪುರಃ** = ನಿನ್ನ ಮುಂದೆ, **ಮಯಾ** = ನನ್ನಿಂದ, **ನ್ಯಸ್ತಂ** = ಇಡಲ್ಪಟ್ಟ, **ನೈವೇದ್ಯಂ** = ನೈವೇದ್ಯವನ್ನು, **ಕಪಿಲಾತ್ಮಕ ದಿವ್ಯೇನ** = ಕಪಿಲಾತ್ಮಕವಾದ ದಿವ್ಯವಾದ, **ಚಕ್ಷುಷಾ** = ಕಣ್ಣಿನಿಂದ, **ತ್ವಂ** = ನೀನು, **ವಿಲೋಕಯ** = ನೋಡಿ ಪವಿತ್ರಗೊಳಿಸು.

**ತಥಾ** = ಹಾಗೆಯೇ, **ಸಾಧು** = ಉತ್ತಮವಾದ, **ಪೂರ್ಣಂ** = ಪೂರ್ಣವಾದ, **ಸ್ವಾದು** = ಮಧುರವಾದ, **ರಸೈರ್ಯುತಂ** = ರಸಗಳಿಂದ ಕೂಡಿದ, ಈ ನೈವೇದ್ಯವನ್ನು, **ನೃಸಿಂಹಾತ್ಮಕರೂಪೇಣ** = ನೃಸಿಂಹ ರೂಪವಾದ, **ದಿವ್ಯಘ್ರಾಣೇಂದ್ರಿಯೇಣ** = ದಿವ್ಯವಾದ ಘ್ರಾಣೇಂದ್ರಿಯದಿಂದ, **ದಿವ್ಯಂ** = ದಿವ್ಯವಾದ, **ತದ್ವಸ್ತು ನಿಷ್ಠಗಂಧಂ** = ಆ ನೈವೇದ್ಯ ವಸ್ತುಗಳಲ್ಲಿರುವ ಸುಗಂಧವನ್ನು, **ಆಜಿಘ್ರ** = ಮೂಸಿ ನೋಡಿ ಪವಿತ್ರಗೊಳಿಸು.

**ಭೃಗುರಾಮನ ಸ್ವರೂಪೇಣ** = ಪರಶುರಾಮ ಸ್ವರೂಪದಿಂದ, **ದಿವ್ಯಂ** = ದಿವ್ಯವಾದ, **ವಾಗಿಂದ್ರಿಯೇಣ** = ಬಾಯಿಯಿಂದ, **ಭಕ್ತಂ** = ಭಕ್ತನಾದ, **ಮಾಂ** = ನನ್ನನ್ನು, **ಅನುಕಂಪಯಾ** = ದಯೆಯಿಂದ, **ಶ್ಲಕ್ಷ್ಣಯಾ ವಾಚಾ** = ಮೃದುವಾದ ಮಾತಿನಿಂದ, **ಭಕ್ತಂ** = ಭಕ್ತನಾದ ನನ್ನನ್ನು, **ಸಾಂತ್ವಯ** = ಸಮಾಧಾನಗೊಳಿಸು

**ಸಾಂತ್ವಯ ಶ್ಲಕ್ಷ್ಣಯಾ ವಾಚಾ ಭಕ್ತಂ ಮಾಮನುಕಂಪಯ ।**
**ಮಹಾಕೂರ್ಮಸ್ವರೂಪೇಣ ದಿವ್ಯಘ್ರಾಣೇಂದ್ರಿಯೇಣ ತು ॥**

**ಆಸ್ವಾದಯ ಸ್ವಾದುರಸಂ ಭುಂಕ್ಷ್ವ ದೇವ ರಮಾಪತೇ ।**
**ಅಗಣಯ್ಯ ಅಪರಾಧಾನ್ ಮೇ ಪ್ರಸಾದಂ ಕುರು ಕೇಶವ ॥ 9 ॥**

**ರಮಾ ಬ್ರಹ್ಮಾದಿಭಿರ್ದೇವೈಃ ನಿಯಮೇನ ಸಮರ್ಪಿತಂ ।**
**ಭಕ್ತಾನುಗ್ರಹಕಾಮೇನ ಸ್ವೀಕರ್ತವ್ಯಂ ತ್ವಯಾ ಹರೇ ॥**

**ಓಂ ನಮೋ ನಾರಾಯಣಾಯ । ಸರ್ವೋಪಸ್ಕರ ಸಂಯುತಂ ಅನ್ನಾದಿ ಮಹಾನೈವೇದ್ಯಂ ಸಮರ್ಪಯಾಮಿ । ತುಲಸೀದಲಂ ಸಮರ್ಪ್ಯ – ಮೂಲಮಂತ್ರಂ ಯಥಾಶಕ್ತಿ ಜಪೇತ್ ॥ 10 ॥**

[ವಸ್ತ್ರದಿಂದ ಮುಖ ಮುಚ್ಚಿಕೊಂಡು ಮೂಲಮಂತ್ರವನ್ನು 12 ಬಾರಿ ಪಠಿಸಬೇಕು]

---

**ಕೂರ್ಮಸ್ವರೂಪೇಣ** = ಕೂರ್ಮ ಸ್ವರೂಪವಾದ ನಿನ್ನ, ದಿವ್ಯ **ಜಿಹ್ವೇಂದ್ರಿಯೇಣ** = ದಿವ್ಯವಾದ ನಾಲಿಗೆಯಿಂದ, **ಸ್ವಾದುರಸಂ** = ರುಚಿಯಾದ ರಸವನ್ನು, **ಆಸ್ವಾದಯ** = ಆಸ್ವಾದಿಸು, ಹೇ ದೇವ, **ರಮಾಪತೇ** = ಕ್ರೀಡಾದಿ ಗುಣವಿಶಿಷ್ಟನಾದ, ರಮಾಪತಿಯೇ, **ಭುಂಕ್ಷ್ವ** = ನೈವೇದ್ಯವನ್ನು, ಸ್ವೀಕರಿಸು, **ಕೇಶವ** = ಕೇಶವನೇ, **ಮೇ** = ನನ್ನ, **ಅಪರಾಧಾನ್** = ಅಪರಾಧಗಳನ್ನು, **ಅಗಣಯ್ಯ** = ವಿಚಾರ ಮಾಡದೆ, **ಪ್ರಸಾದಂ ಕುರುಂ** = ಪ್ರಸನ್ನನಾಗು.

10) **ರಮಾಬ್ರಹ್ಮಾದಿಭಿಃ** = ರಮಾದೇವಿ, ಬ್ರಹ್ಮಾದಿದೇವತೆಗಳಿಂದ, **ನಿಯಮೇನ** = ವಿಧಿವತ್ತಾಗಿ, **ಸಮರ್ಪಿತಂ** = ಭಕ್ತ್ಯಾದರದಿಂದ ಅರ್ಪಿಸಲ್ಪಟ್ಟ, **ಭಕ್ತಾನುಗ್ರಹಕಾಮೇನ** = ಭಕ್ತನನ್ನು ಅನುಗ್ರಹಿಸುವ ಮನಸ್ಸಿನಿಂದ, **ತ್ವಯಾ** = ನಿನ್ನಿಂದ, **ಸ್ವೀಕರ್ತವ್ಯಂ** = ಸ್ವೀಕರಿಸಬೇಕು
ನಾರಾಯಣನಿಗೆ ಸಮಸ್ತ ವ್ಯಂಜನಗಳಿಂದ ಕೂಡಿದ ಅನ್ನಾದಿ ನೈವೇದ್ಯವನ್ನು ಸಮರ್ಪಿಸುತ್ತೇನೆ ಎಂದು ತುಳಸೀದಳವನ್ನು ಸಮರ್ಪಿಸಿ, ಯಥಾಶಕ್ತಿ ಮೂಲಮಂತ್ರವನ್ನು ಜಪಿಸಬೇಕು.

**ಉತ್ತರಾಪೋಶನಂ** (ಶಂಖದಿಂದ ಅರ್ಘ್ಯಪಾತ್ರೆಗೆ ನೀರನ್ನು ಬಿಡಬೇಕು)

**ಮಹಾಲಕ್ಷ್ಮ್ಯಾ ದೀಯಮಾನಂ ಕರೇ ತೇ ದಕ್ಷಿಣೇಽನಘ ।**
**ಉತ್ತರಾಪೋಶನಂ ದಿವ್ಯಂ ಪಿಬ ದೇವ ರಮಾಪತೇ ॥**
**ಅಮೃತಾಪಿಧಾನಮಸಿ ಸ್ವಾಹಾ – ಓಂ ನಮೋ ನಾರಾಯಣಾಯ ಉತ್ತರಾಪೋಶನಂ ಸಮರ್ಪಯಾಮಿ ॥ 11 ॥**

**ಹಸ್ತಪ್ರಕ್ಷಾಲನಂ :**

**ಹಸ್ತಪ್ರಕ್ಷಾಲನಂ ಸಮರ್ಪಯಾಮಿ । ಪಾದಪ್ರಕ್ಷಾಲನಂ ಸಮರ್ಪ–ಯಾಮಿ ।**
**(ವಾಮಭಾಗಸ್ಥಿತ ಗಂಡೂಷಪಾತ್ರೆ) ಗಂಡೂಷಂ ಸಮರ್ಪಯಾಮಿ ।**
**[30]ಕರೋದ್ವರ್ತನಕಂ ಸಮರ್ಪಯಾಮಿ । ದಂತಶೋಧನಂ ॥**
**ಮುಖವಸ್ತ್ರಂ ಸಮರ್ಪಯಾಮಿ ॥ 12 ॥ (ಪುಷ್ಪಂ ತ್ರಿಃ ನಿವೇದ್ಯ)**

---

11) **ಉತ್ತರಾಪೋಶನ ಮಂತ್ರಾರ್ಥ :** ಅನಘ = ದೋಷದೂರನೇ, **ತೇ** = ನಿನ್ನ, **ದಕ್ಷಿಣೇಕರೇ** = ಬಲಗೈಯಲ್ಲಿ, **ಮಹಾಲಕ್ಷ್ಮ್ಯಾ** = ರಮಾದೇವಿಯಿಂದ, **ದೀಯಮಾನಂ** = ಕೊಡಲ್ಪಡುವ, **ದಿವ್ಯಂ** = ಪವಿತ್ರವಾದ, **ಉತ್ತರಾಪೋಶನಂ** = ಭೋಜನದ ಕಡೆಯಲ್ಲಿ ಕೊಡಬೇಕಾದ ನೀರನ್ನು, **ಪಿಬ** = ಸ್ವೀಕರಿಸು.

12) **ಹಸ್ತಪಕ್ಷಾಲ ಮಂತ್ರಾರ್ಥ : ಹಸ್ತಪ್ರಕ್ಷಾಲನಂ** = ಕೈಯನ್ನು ತೊಳೆಯಲು ನೀರನ್ನು, **ಸಮರ್ಪಯಾಮಿ** = ಅರ್ಪಿಸುತ್ತೇನೆ, **ಪಾದಪ್ರಕ್ಷಾಲನಂ** = ಕಾಲಿಗೆ ನೀರನ್ನು, **ಸಮರ್ಪಯಾಮಿ** = ಅರ್ಪಿಸುತ್ತೇನೆ, **ವಾಮಭಾಗಸ್ಥಿತ** = ದೇವರ ಎಡಭಾಗದಲ್ಲಿಟ್ಟಿರುವ, **ಗಂಡೂಷಪಾತ್ರೆ** = ಬಾಯಿ ಮಕ್ಕಳಿಸುವುದಕ್ಕಾಗಿ ಪಾತ್ರೆಯಲ್ಲಿ, **ಗಂಡೂಷಂ** = ಬಾಯಿ ಮುಕ್ಕಳಿಸಲು ನೀರನ್ನು, **ಸಮರ್ಪಯಾಮಿ** = ಅರ್ಪಿಸುವೆನು, **ಕರೋದ್ವರ್ತನಕಂ** = ಕೈಯುಜ್ಜಿ ತೊಳೆಯಲು ಸುಗಂಧದ್ರವ್ಯದ ಪುಡಿಯನ್ನು, **ಸರ್ಮಪಯಾಮಿ** = ಅರ್ಪಿಸುವೆನು, **ಮುಖವಸ್ತ್ರಂ** = ಮುಖ ಒರೆಸಿಕೊಳ್ಳಲು ವಸ್ತ್ರವನ್ನು, **ಸಮರ್ಪಯಾಮಿ** = ಅರ್ಪಿಸುತ್ತೇನೆ. (ಹೂವನ್ನು ಮೂರು ದೇವರಿಗೆ ಅರ್ಪಿಸಬೇಕು)

---

೩೦. ಕರೋದ್ವರ್ತನಕ ಎಂದರೆ ಕೈಯಲ್ಲಿರುವ ಜಿಡ್ಡು ಹೋಗಲು ಕಡಲೆ ಹಿಟ್ಟು ಮೊದಲಾದವುಗಳಿಂದ ಉಜ್ಜಿ ತೊಳೆಯುವುದು. ಮಂತ್ರ ಹೀಗಿದೆ –
ಚಂದನಂ ಚ ಸಕರ್ಪೂರಂ ಕಸ್ತೂರ್ಯಾದಿ ಸಮನ್ವಿತಂ ।
ಕರೋದ್ವರ್ತನಕಂ ದೇವ ಪ್ರೀತ್ಯರ್ಥಂ ಪ್ರತಿಗೃಹ್ಯತಾಂ ॥

**ತಾಂಬೂಲಂ ಸಮರ್ಪಣಂ (ತಾಂಬೂಲವನ್ನು ನೀಡುವುದು)**

**ಪೂಗೀಫಲಸಮಾಯುಕ್ತಂ ನಾಗವಲ್ಲೀದಲೈರ್ಯುತಂ ।**
**ಕರ್ಪೂರಚೂರ್ಣಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಂ ॥**

**ಓಂ ನಮೋ ನಾರಾಯಣಾಯ । ತಾಂಬೂಲಂ ಸಮರ್ಪಯಾಮಿ ॥**

**ದಕ್ಷಿಣಾಂ ಸಮರ್ಪಣಂ –**

**ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ ।**
**ಪುನರ್ಧೂಪಂ ಸಮರ್ಪಯಾಮಿ ॥ 13 ॥**

**ಸುವರ್ಣ ಪುಷ್ಪದಕ್ಷಿಣಾ ಸಮರ್ಪಣಂ :**

**ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ ।**
**ಅನಂತಪುಣ್ಯ ಫಲದಂ ಅತಃ ಶಾಂತಿಂ ಪ್ರಯಚ್ಛ ಮೇ ॥ 14 ॥**

---

**ತಾಂಬೂಲ ಸಮರ್ಪಣೆ ಅರ್ಥ :** ವಿಭೋ = ಸಮರ್ಥನಾದ ಪ್ರಭುವೇ, **ಪೂಗೀಫಲಸಮಾಯುಕ್ತಂ** = ಅಡಿಕೆಯಿಂದ ಕೂಡಿರುವ, **ನಾಗವಲ್ಲೀದಲೈಃ** = ವೀಳ್ಯದ ಎಲೆಗಳಿಂದ ಯುಕ್ತವಾದ, **ಕರ್ಪೂರಚೂರ್ಣ, ಸಂಯುಕ್ತಂ** = ಪಚ್ಚಕರ್ಪೂರ ಹಾಗೂ ಸುಣ್ಣದಿಂದ ಕೂಡಿದ, **ತಾಂಬೂಲಂ** = ತಾಂಬೂಲವನ್ನು, **ಪ್ರತಿಗೃಹ್ಯತಾಂ** = ಸ್ವೀಕರಿಸು.

13) **ದಕ್ಷಿಣಾಸಮರ್ಪಣ ಮಂತ್ರಾರ್ಥ :** ನಾರಾಯಣನಿಗೆ ಸುವರ್ಣ ಪುಷ್ಪದಕ್ಷಿಣೆಯನ್ನು ಸಮರ್ಪಿಸುತ್ತೇನೆ, **ಪುನಃ** = ಮತ್ತೆಯೂ, **ಧೂಪಂ** = ಧೂಪವನ್ನು, **ಸಮರ್ಪ್ಯ** = ಸಮರ್ಪಿಸಿ

14) **ಸುವರ್ಣ ಪುಷ್ಪ ದಕ್ಷಿಣಾ ಸಮರ್ಪಣೆ : ಹಿರಣ್ಯಗರ್ಭ** = ಬ್ರಹ್ಮದೇವರ, **ಗರ್ಭಸ್ಥಂ** = ಗರ್ಭದಲ್ಲಿರುವ, **ವಿಭಾವಸೋಃ** = ಅಗ್ನಿದೇವನ, **ಬೀಜಂ** = ಬಂಗಾರದ ರೇತಸ್ಸಿನ ರೂಪವಾದ, **ಅನಂತಪುಣ್ಯಫಲದಂ** = ಅನಂತ ವಸ್ತುಗಳ ದಾನದಿಂದ ಬರುವ ಪುಣ್ಯವನ್ನು ಕೊಡುವ, **ಹೇಮ** = ಬಂಗಾರವನ್ನು (ದದಾಮಿ= ಕೊಡುತ್ತೇನೆ), **ಅತಃ** = ಈ ದಾನದಿಂದ, **ಮೇ** = ನನಗೆ, **ಶಾಂತಿಂ** = ಭಗವನ್ನಿಷ್ಠ ಬುದ್ಧಿಯನ್ನು, **ಪ್ರಯಚ್ಛ** = ಕೊಡು.

## 51. ಮಂಗಳ ನೀರಾಜನಂ :[31]

15) ಓಂ ಅರ್ಚತ ಪ್ರಾರ್ಚತ ಪ್ರಿಯಮೇಧಾಸೋ ಅರ್ಚತ ।

ಅರ್ಚಂತು ಪುತ್ರಕಾ ಉತ ಪುರಂ ನ ಧೃಷ್ಣ್ವರ್ಚತ ॥[31]

–ಋ – 8/69/8

16) ಶ್ರಿಯೇ ಜಾತಃ ಶ್ರಿಯ ಆ ನಿರಿಯಾಯ

ಶ್ರಿಯಂ ವಯೋ ಜರಿತೃಭ್ಯೋ ದಧಾತಿ ।

ಶ್ರಿಯಂ ವಸಾನಾ ಅಮೃತತ್ವಮಾಯನ್

ಭವಂತಿ ಸತ್ಯಾ ಸಮಿಥಾ ಮಿತದ್ರೌ ॥[32] –ಋ–9/94/4

52. ಮಂಗಲ ನೀರಾಜನದ ಅರ್ಥ :

15) **ಪ್ರಿಯಮೇಧಾಸಃ** = ಪ್ರಿಯನಾದ ಭಗವಂತನನ್ನು ತಿಳಿಯುವ ಮೇಧಾಶಕ್ತಿಯುಳ್ಳ ಪ್ರಿಯಜ್ಞಾನಿಗಳೇ, **ಧೃಷ್ಣು** = ಭಯಪಡದೆ ಸ್ಥಿರವಾಗಿರುವ ಭಗವಂತನನ್ನು, **ಅರ್ಚತ** = ಯಜ್ಞಾದಿಗಳಿಂದ ಪೂಜಿಸಿರಿ, **ಪ್ರಿಯಮೇಧಾಸಃ** = ಯಜ್ಞಾದಿ ಕರ್ಮಗಳಲ್ಲೇ ಆಸಕ್ತರಾದ ಮಧ್ಯಮಾಧಿಕಾರಿಗಳೇ, ನೀವೂ, **ಪ್ರಾರ್ಚತ** = ಜ್ಞಾನಾದಿಗಳಿಂದ ಸಹಿತರಾಗಿ ಪೂಜಿಸಿರಿ, **ಪುತ್ರಕಾಃ** = ಚಿಕ್ಕಮಕ್ಕಳೇ ನೀವು, **ಅಲ್ಪಕಾಃ** = ಅಲ್ಪಜ್ಞಾನ ಸಂಪಾದನೆ ಮಾಡಿದ್ದರೂ, **ಅರ್ಚಂತು** = ಪೂಜಿಸಿರಿ ಆದರೆ, **ಪುರಂ** = ಪ್ರತೀಕವನ್ನಾಗಲಿ, ದೇಹಾಭಿಮಾನಿ ಜೀವನನ್ನಾಗಲೀ, ದೇಹವನ್ನಾಗಲೀ, ನ **ಅರ್ಚತ** = ಅರ್ಚಿಸಬೇಡಿರಿ.

16) **ಯಃ** = ಯಾವನು, **ಶ್ರಿಯೇ ಜಾತಃ** = ಶ್ರೀದೇವಿಯ ಪೂಜೆಗಾಗಿಯೇ ಹುಟ್ಟಿರುವನೋ, ಹಾಗೆಯೇ, **ಶ್ರಿಯೇ** = ಲಕ್ಷ್ಮೀದೇವಿಗಾಗಿಯೇ, **ಆ ನಿರೀಯಾಯ** = ಮನೆಯಿಂದ ಹೊರಟಿರುವನೋ ಅಂತಹ, **ಜರಿತೃಭ್ಯಃ** =

31. ಋಗ್ವೇದ 8 ಮಂಡಲ, 69ನೇ ಸೂಕ್ತ, 8ನೇ ಮಂತ್ರ

32. ಋಗ್ವೇದ 9 ಮಂಡಲ, 94ನೇ ಸೂಕ್ತ, 4ನೇ ಮಂತ್ರ

17)ಜಯತ್ಯಜೋಽಖಂಡಗುಣೋರುಮಂಡಲಃ
ಸದೋದಿತೋ ಜ್ಞಾನಮರೀಚಿಮಾಲೀ ।
ಸ್ವಭಕ್ತಹಾರ್ದೋಚ್ಚತಮೋ ನಿಹಂತಾ
ವ್ಯಾಸಾವತಾರೋ ಹರಿರಾತ್ಮಭಾಸ್ಕರಃ ॥

18)ಜಯತ್ಯಜೋಽಕ್ಷಿಣ ಸುಖಾತ್ಮಬಿಂಬಃ
ಸ್ವೈಶ್ವರ್ಯಕಾಂತಿಪ್ರತತಃ ಸದೋದಿತಃ ।
ಸ್ವಭಕ್ತ ಸಂತಾಪದುರಿಷ್ಟ ಹಂತಾ
ರಾಮಾವತಾರೋ ಹರೀಶ ಚಂದ್ರಮಾಃ ॥

---

ಸ್ತೋತ್ರ ಮಾಡುವವನಿಗೆ, **ಶ್ರೀ** = ಲಕ್ಷ್ಮೀದೇವಿಯು, **ಶ್ರಿಯಂ** = ಸಮಸ್ತಸಂಪತ್ತನ್ನು, **ವಯಃ** = ದೀರ್ಘಾಯುಸ್ಸನ್ನೂ, **ದಧಾತಿ** = ಕೊಡುತ್ತಾಳೆ, ಇದು ಆಶ್ಚರ್ಯವೇನಲ್ಲ, ಏಕೆಂದರೆ, **ಶ್ರಿಯಂ ವಸಾನಾಃ** = ಲಕ್ಷ್ಮೀದೇವಿಯು, **ಶ್ರಿಯಂ** = ಸಮಸ್ತಸಂಪತ್ತನ್ನು, **ವಯಃ** = ದೀರ್ಘಾಯುಸ್ಸನ್ನೂ, **ದಧಾತಿ** = ಕೊಡುತ್ತಾಳೆ, ಇದು ಅಶ್ಚರ್ಯವೇನಲ್ಲ, ಏಕೆಂದರೆ, **ಶ್ರಿಯಂ ವಸಾನಾಃ** = ಲಕ್ಷ್ಮೀದೇವಿಯನ್ನು ಉಪಾಸಿಸುವವರು, **ಅಮೃತತ್ವಂ** = ಮೋಕ್ಷವನ್ನೇ, **ಆಯನ್** = ಹೊಂದಿದ್ದಾರೆ, **ಮಿತದ್ರೌ** = ಕ್ಷೀರ ಸಮುದ್ರಾಭಿಮಾನಿಯಾದ ಲಕ್ಷ್ಮೀದೇವಿಯು, ಪ್ರಸನ್ನಳಾದರೆ, **ಸಮಿಥಾಃ** = ಸಮಸ್ತ ಇಷ್ಟಾರ್ಥಗಳು, **ಸತ್ಯಾಃ ಭವಂತಿ** = ಸತ್ಯಗಳಾಗುತ್ತವೆ ಎಂದು ಪ್ರತ್ಯೇಕ ಹೇಳಬೇಕಿಲ್ಲ.

17) **ಅಜಃ** = ಜನ್ಮರಹಿತನಾದರೂ, **ಅಖಂಡಗುಣೋರುಮಂಡಲಃ** = ಅಖಂಡವಾದ, ಜ್ಞಾನಾನಂದಾದಿ ಗುಣಗಳೇ ದೇಹವಾಗಿರುವ, **ಸದಾ** = ಯಾವಾಗಲೂ, **ಉದಿತ** = ಉದಯಿಸಿರುವ, **ಜ್ಞಾನಮರೀಚಿಮಾಲೀ** = ಜ್ಞಾನವೆಂಬ ಕಿರಣಗಳ ಸಮೂಹವುಳ್ಳ, **ಸ್ವಭಕ್ತಹಾರ್ದೋಚ್ಚತಮೋ** = ಸ್ವಭಕ್ತ ತನ್ನವರಾದ ಭಕ್ತರ, **ಹಾರ್ದ** = ಹೃದಯದಲ್ಲಿರುವ, **ಉಚ್ಚ** = ದಟ್ಟವಾದ, **ತಮೋ** = ಅಜ್ಞಾನವನ್ನು, **ನಿಹಂತಾ** = ನಿಶ್ಶೇಷವಾಗಿ ಪರಿಹರಿಸುವ, **ಆತ್ಮಭಾಸ್ಕರಃ** = ವೇದವ್ಯಾಸಾವತಾರಿಯಾದ, **ಹರಿಃ** = ನಾರಾಯಣನು, **ಜಯತಿ** =ಉತ್ಕೃಷ್ಟನಾಗಿದ್ದಾನೆ

18) **ಅಜಃ** = ಜನ್ಮಲಯವಿಲ್ಲದಿದ್ದರೂ, **ಅಕ್ಷೀಣ** = ವೃದ್ಧಿಹ್ರಾಸವಿರದ, **ಸುಖಾತ್ಮಬಿಂಬಃ** = ಸುಖಾತ್ಮಕವಾದ ತನ್ನ ಸ್ವರೂಪವುಳ್ಳ, **ಸ್ವೈಶ್ವರ್ಯಕಾಂತಿ ಪ್ರತತಃ** = ಸ್ವೈಶ್ವರ್ಯ ಸ್ವರೂಪಭೂತವಾದ ಐಶ್ವರ್ಯ, **ಕಾಂತಿ** = ಕಾಂತಿಯು ಇವುಗಳಿಂದ, **ಪ್ರತತ** = ವ್ಯಾಪ್ತನಾದ, **ಸದೋದಿತಃ** = ಯಾವಾಗಲೂ ಉದಿಯಿಸೆ ಇರುವ, **ಸ್ವಭಕ್ತ ಸಂತಾಪ, ದುರಷ್ಟಹಂತಾ** = ತನ್ನ ಭಕ್ತರ ಸಂತಾಪಕ್ಕೆ

**19)ಜಯತ್ಯಸಂಖ್ಯೋರುಬಲಾಂಬುಪೂರೋ** [33]

**ಗುಣೋಚ್ಚರತ್ನಾಕರ ಆತ್ಮ ವೈಭವಃ ।**

**ಸದಾ ಸದಾತ್ಮಜ್ಞಾನದೀಭಿರಾಪ್ಯಃ**

**ಕೃಷ್ಣಾವತಾರೋ ಹರಿರೇಕ ಸಾಗರಃ ॥**

**ಓಂ ನಮೋ ನಾರಾಯಣಾಯ ಮಂಗಳ ನೀರಾಜನಂ ಸಮರ್ಪಯಾಮಿ॥**

---

ಕಾರಣವಾದ ಅನಿಷ್ಟವನ್ನು ಪರಿಹರಿಸುವ, **ಆತ್ಮಭಾಸ್ಕರಃ** = ಚಂದ್ರನಿಗೂ ಪ್ರಕಾಶಕನಾದ, **ರಾಮಾವತಾರಃ** = ರಾಮಚಂದ್ರ ಅವತಾರನೆಂಬ, **ಹರಿಃ** = ಮೂಲರೂಪಿಯು, **ಜಯತಿ** = ಉತ್ಕೃಷ್ಟನಾಗಿರುವನು

19) **ಅಸಂಖ್ಯೋರುಬಲಾಂಬುಪೂರಃ** = ಅಸಂಖ್ಯ ಅಪರಿಮಿತಗಳಾದ, **ಉರು** = ಉತ್ಕೃಷ್ಟಗಳಾದ, **ಬಲಾಂಬು** = ಬಲಗಳೆಂಬ ನೀರಿನ, **ಪೂರಃ** = ಪ್ರವಾಹವುಳ್ಳ, **ಗುಣೋಚ್ಚರತ್ನಾಕರಃ** = ಗುಣ ಜ್ಞಾನಾನಂದಾದಿ ಗುಣಗಳೆಂಬ, **ಉಚ್ಚರತ್ನಾಕರಃ** = ಉತ್ಕೃಷ್ಟವಾದ ರತ್ನಿಗಳಿಗೆ ಆಶ್ರಯವಾದ, **ಆತ್ಮವೈಭವಃ** = ತನ್ನಿಂದಲೇ ತನ್ನ ವೈಭವ ಹೊಂದಿರುವ, **ಸದಾ** = ಯಾವಾಗಲೂ, **ಸದಾತ್ಮಜ್ಞಾನದೀಭಿಃ** = ಪರಮಾತ್ಮನನ್ನು ತಿಳಿದ ಬ್ರಹ್ಮಾದಿ ದೇವತೆಗಳೆಂಬ ನದಿಗಳಿಂದ, **ಆಪ್ಯಃ** = ಹೊಂದಲ್ಪಡುವ, **ಕೃಷ್ಣಾತಾರಃ** = ಕೃಷ್ಣಾವತಾರವೆಂಬ, **ಏಕಸಾಗರಃ** = ಮುಖ್ಯಸಾಗರ ಶಬ್ಧವಾಚ್ಯನಾದ, **ಹರಿಃ** = ಹರಿಯು, **ಜಯತಿ** = ಉತ್ಕೃಷ್ಟನಾಗಿದ್ದಾನೆ.

---

೩೩. ಮಂಗಳಾರತಿಯನ್ನು ಐದು ಬತ್ತಿಗಳಿಗೆ ಕಡಿಮೆ ಇಲ್ಲದಂತೆ, ನಂದಾದೀಪದಿಂದ ಹತ್ತಿಸಿಕೊಂಡು, ಪಾದದಲ್ಲಿ ಮೂರು ಬಾರಿ, ಹೃದಯದಲ್ಲಿ ಮೂರು ಬಾರಿ, ಮುಖಕ್ಕೆ ಮೂರು ಬಾರಿ ನೀರಾಜಿಸಿ, ಸರ್ವಾಂಗಗಳಲ್ಲೂ ಮೂರು ಬಾರಿ ಪ್ರದಕ್ಷಿಣಾಕಾರವಾಗಿ ಸುತ್ತಿಸಬೇಕು. ಈ ಐದು ಬತ್ತಿಗಳಿಗೆ ನಾರಾಯಣಾದಿ ಪಂಚರೂಪಗಳು ನಿಯಾಮಕಗಳಾಗಿವೆ.

**52. ಮಂತ್ರಪುಷ್ಪಮ್ :** (ಮಂತ್ರಗಳಿಂದ ಪುಷ್ಪಾದಿ ಸಮರ್ಪಣೆ)

**20)ಯೋ ನಃ ಪಿತಾ ಜನಿತಾ ಯೋ ವಿಧಾತಾ ಧಾಮಾನಿ ವೇದ ಭುವನಾನಿ ವಿಶ್ವಾ । ಯೋ ದೇವಾನಾಂ ನಾಮಧಾ ಏಕ ಏವ ತಂ ಸಂಪ್ರಶ್ನಂ ಭುವನಾ ಯಂತ್ಯನ್ಯಾ ॥** –ಋ–10/82/3

**21) ರಾಜಾಧಿರಾಜಾಯ ಪ್ರಸಹ್ಯ ಸಾಹಿನೇ ನಮೋ ವಯಂ ವೈಶ್ರವಣಾಯ ಕುರ್ಮಹೇ ।**

**ಸ ಮೇ ಕಾಮಾನ್ ಕಾಮಕಾಮಾಯ ಮಹ್ಯಂ ಕಾಮೇಶ್ವರೋ ವೈಶ್ರವಣೋ ದದಾತು ॥ ೨ ॥**

---

20) **ಯಃ** = ಯಾವ ದೇವನು, **ನಃ** = ನಮ್ಮೆಲ್ಲರಿಗೂ, **ಪಿತಾ** = ತಂದೆಯೋ, **ಜನಿತಾ** = ಜನ್ಮ ನೀಡಿದವನೂ, **ಯಃ** = ಯಾರು, **ವಿಧತಾ** = ಧರಿಸಿ ಪೋಷಿಸುವವನೋ, **ಯಃ** = ಯಾವನು, **ವಿಶ್ವಾ** = ಸಮಸ್ತವಾದ, **ಭುವನಾನಿ** = ಹದಿನಾಲ್ಕು ಲೋಕಗಳನ್ನು, **ಧಾಮಾನಿ** = ಬ್ರಹ್ಮಾಂಡದಲ್ಲಿರುವ, ನಕ್ಷತ್ರ, ಸೂರ್ಯ, ಚಂದ್ರಾದಿ ಲೋಕಗಳನ್ನು, **ವೇದ** = ತಿಳಿದು ಸರ್ವಜ್ಞ-ನಾಗಿರುವನೋ, **ಯಃ** = ಯಾರು, **ಏಕಏವ** = ಒಬ್ಬ ಮಾತ್ರ, **ದೇವಾನಾಂ** = ಸಮಸ್ತ ದೇವತೆಗಳ, **ನಾಮಧಾ** = ಹೆಸರುಗಳನ್ನು ಧರಿಸಿರುವನೋ, **ತಂ** = ಅಂತಹ ಗುಣವಿಶಿಷ್ಟನಾದ, **ಪ್ರಶ್ನಂ** = ಎಷ್ಟು ತಿಳಿದರೂ ಇನ್ನೂ ಅವನ ಬಗ್ಗೆ ಪ್ರಶ್ನೆಯಿರುವ ಭಗವಂತನನ್ನು, **ಅನ್ಯಾಭುವನಾ** = ಸಮಸ್ತಲೋಕಗಳೂ, **ಸಂಯಂತಿ** = ಪ್ರಲಯದಲ್ಲಿ ಅವನ ಉದರ ಸೇರುತ್ತವೆ

21) **ಪ್ರಸಹ್ಯ ಸಾಹಿನೇ** = ಎಲ್ಲಜಗತ್ತನ್ನೂ ತನ್ನ ಶಕ್ತಿಯಿಂದ ಎಳೆದುಕೊಂಡು ಆಳುವ, **ರಾಜಾಧಿರಾಜಾಯ** = ರಾಜರಿಗೂ ಅಧಿರಾಜನಾದ, **ವೈಶ್ರವಣಾಯ** = ವೈಶ್ರವಣನೆಂಬ ಹೆಸರುಳ್ಳ ನಾರಾಯಣನಿಗೆ, **ವಯಂ** = ನಾವು, **ನಮೋ ಕುರ್ಮಹೇ** = ನಮಸ್ಕರಿಸುತ್ತೇವೆ, **ಸಃ ಕಾಮೇಶ್ವರಃ** = ಕಾಮನೆಗಳಿಗೆ ಸ್ವಾಮಿಯಾದ, **ವೈಶ್ರವಣಃ** = ವೈಶ್ರವಣ ನಾಮಕ ಶ್ರೀಹರಿಯು, **ಕಾಮಾನ್** =

**22) ಕುಬೇರಾಯ ವೈಶ್ರವಣಾಯ ಮಹಾರಾಜಾಯ ನಮಃ ।[34]**

**ಯೋ ವೈ ತಾಂ ಬ್ರಹ್ಮಣೋ ವೇದ ಅಮೃತೇನಾವೃತಾಂ ಪುರೀಮ್ । ತಸ್ಮೈ ಬ್ರಹ್ಮ ಚ ಬ್ರಹ್ಮಾ ಚ ಆಯುಃ ಕೀರ್ತಿಂ ಪ್ರಜಾಂ ದದುಃ ॥ ೩ ॥[35]** – ತೈತರೀಯ ಅರಣ್ಯಕ – 1/27/9

---

ಸಮಸ್ತ ಇಷ್ಟಾರ್ಥಗಳನ್ನೂ, **ಕಾಮಕಾಮಾಯ** = ಸಮಸ್ತ ಕಾಮನೆಗಳನ್ನೂ ಹೊಂದುವ ಬಯಕೆಯುಳ್ಳ, **ಮಹ್ಯಂ** = ನನಗೆ, **ದದಾತು** = ನೀಡಲಿ.

22) **ವೈಶ್ರವಣಾಯ** = ವಿಶ್ರವಸ್ಸಿನ ಮಗನಾದ, **ಕುಬೇರಾಯ** = ಧನಾಧಿಪತಿ ಕುಬೇರನಿಗೂ, **ಮಹಾರಾಜಾಯ** = ಮಹಾರಾಜನಾದ ಭಗವಂತನಿಗೆ, **ನಮಃ** = ನಮಸ್ಕಾರವು, **ಯೋ ವೈ** = ಯಾವನು, **ಅಮೃತೇನ** = ಲಿಂಗಭಂಗ ಮಾಡಿಸುವ ವಿರಜಾ ನದಿಯಿಂದ, **ಆವೃತಾಂ** = ಆವರಿಸಲ್ಪಟ್ಟ, **ಬ್ರಹ್ಮಣಃ** = ಗುಣಪೂರ್ಣ ವಿಷ್ಣುವಿನ, **ತಾಂಪುರೀಂ** = ಸಾಧ್ಯರಿಂದ ತುಂಬಿರುವ ವೈಕುಂಠಪುರಿಯ ಮಹಿಮೆಯನ್ನು, **ವೇದ** = ತಿಳಿಯುವನೋ, **ತಸ್ಮೈ** = ಅವನಿಗೆ, **ಬ್ರಹ್ಮ** = ಪರಬ್ರಹ್ಮನು, **ಚ** = ಇತರ ದೇವತೆಗಳೂ, **ಆಯುಃ** = ದೀರ್ಘಾಯುಸ್ಸು, **ಕೀರ್ತಿಂ** = ಕೀರ್ತಿಯನ್ನು, **ಪ್ರಜಾಂ** = ಸಂತತಿಯನ್ನು, **ದದುಃ** = ಕೊಟ್ಟರು, ಕೊಡುತ್ತಾರೆ, ಕೊಡುವರು.

**ತಾಸಾಂ** = ಶ್ರೀಕೃಷ್ಣನಿಗಾಗಿ ಹುಡುಕಾಡುತ್ತಿದ್ದ ಗೋಪಿಯರ ಮುಂದೆ, **ಸ್ಮಯಮಾನ ಮುಖಾಂಬುಜಃ** = ಮಂದಸ್ಮಿತದಿಂದ ಕೂಡಿದ ಮುಖಕಮಲವುಳ್ಳ, **ಪೀತಾಂಬರಧರಃ** = ಪೀತಾಂಬರವನ್ನುಟ್ಟಿರುವ, **ಸ್ರಗ್ವೀ** = ವನಮಾಲೆಯನ್ನು ಧರಿಸಿರುವ, **ಸಾಕ್ಷಾತ್** = ನಿರುಪಾಧಿಕವಾಗಿ, **ಮನ್ಮಥ-ಮನ್ಮಥ** = ಕಾಮನಿಗೂ ಕಾಮವನ್ನುಂಟು ಮಾಡುವ, **ಶೌರಿಃ** = ಶ್ರೀಕೃಷ್ಣನು, **ಆವಿರಭೂತ್** = ಪ್ರತ್ಯಕ್ಷ ಗೋಚರನಾದನು.

---

34. ತೈ.ಆ. 31ನೇ ಅನುವಾಕ, 175ನೇ ಮಂತ್ರ

35. ತೈ.ಆರಣ್ಯಕ – 1ನೇ ಅರುಣಪ್ರಶ್ನೆ, 26ನೇ ಅನುವಾಕ, 9ನೇ ಮಂತ್ರ
ಚಾಮರಂ ದರ್ಪಣಂ ಛತ್ರಂ ವಾಹನಾದಿ ನಿವೇದಯೇತ್ ।
ಮಹಾರಾಜೋಪಚಾರಾಂಶ್ಚ ಗೀತವಾದಿತ್ರ ನೃತ್ಯಕಾನ್ ॥ –ಪದ್ಮಮಾಲಾ –111
ಇಷ್ಟು ಮಾತ್ರವಲ್ಲದೆ ಧ್ವಜಪತಾಕಾದಿಗಳನ್ನು ಪಾದುಕೆಗಳು, ಪುಸ್ತಕವಾಚನ ಮೊದಲಾದವುಗಳನ್ನು ಭಗವಂತನಿಗೆ ಅರ್ಪಿಸಬೇಕು.
ಗೀತಂ ವಾದ್ಯಂ ಚ ನೃತ್ಯಂ ಚ ತಥಾ ಪುಸ್ತಕವಾಚನಂ ।

ಚಾಮರಾದ್ಯುಪಚಾರ ಸಮರ್ಪಣೆ –

ತಾಸಾಮಾವಿರಭೂಚ್ಛೌರಿಃ ಸ್ಮಯಮಾನಮುಖಾಂಬುಜಃ ।
ಪೀತಾಂಬರಧರಃ ಸ್ರಗ್ವೀ ಸಾಕ್ಷಾನ್ ಮನ್ಮಥಮನ್ಮಥಃ ॥

ಓಂ ನಮೋ ನಾರಾಯಣಾಯ ಮಂತ್ರಪುಷ್ಪಂ ಸಮರ್ಪಯಾಮಿ ।
ಛತ್ರಂ ಸಮರ್ಪಯಾಮಿ । ಚಾಮರಂ ಸಮರ್ಪಯಾಮಿ ।
ವ್ಯಜನಂ ಸಮರ್ಪಯಾಮಿ । ದರ್ಪಣಂ ಸಮರ್ಪಯಾಮಿ ।
ಗೀತಂ ಸಮರ್ಪಯಾಮಿ । ನೃತ್ಯಂ ಸಮರ್ಪಯಾಮಿ ।
ವಾದ್ಯಂ ಸಮರ್ಪಯಾಮಿ । ಸ್ತೋತ್ರಂ ಸಮರ್ಪಯಾಮಿ ।
ಸಮಸ್ತ ರಾಜೋಪಚಾರಾನ್ ಸಮರ್ಪಯಾಮಿ ।

---

ಪೂಜಾಕಾಲೇ ಚತುರ್ವಕ್ತ್ರ ಸರ್ವದ ಮಮ ಚ ಪ್ರಿಯಂ ॥ – ಸ್ಕಾಂದ
ಚಾಮರಾದಿಗಳು ಅಲಭ್ಯವಾದಾಗ ಮೂಲಮಂತ್ರದಿಂದ ತುಲಸೀಯನ್ನು ದೇವರಿಗೆ ಅರ್ಪಿಸುವುದು. ಘಂಟಾನಾದವೂ ಸಹ ವಾದ್ಯಗಳ ಕಾರ್ಯ ಮಾಡುತ್ತದೆ.
ಅಥವಾ ಸಹಸ್ರನಾಮ, ಭೀಷ್ಮ ಸ್ತವರಾಜ, ಗಜೇಂದ್ರಮೋಕ್ಷ, ಅನುಸ್ಮೃತಿ, ಗೀತೆ ಇವುಗಳನ್ನು ಹೇಳಿದರೂ ಚಾಮರಾದಿಗಳನ್ನು ಅರ್ಪಿಸಿದ ಫಲವೆ ಲಭಿಸುತ್ತದೆ.
ಗೀತಾ ವಾದ್ಯಾದ್ಯ ಭಾವೇಽಪಿ ಮಮ ನಾಮಸಹಸ್ರಕಂ ।
ಪಂಚಸ್ತವಂ ಮಹಾಭಾಗ ಮಮಪ್ರೀತಿಕರಂ ಪರಮ್ ॥

## 53. ಶಂಖಭ್ರಮಣಮ್ :[36]

ಬಿಂಬಚ್ಛಾಯಾದೋಷ ಪರಿಹಾರಾರ್ಥಂ ಶಂಖಭ್ರಮಣಮಹಂ ಕರಿಷ್ಯೇ – ಇತಿ ಸಂಕಲ್ಪ್ಯ ಶಂಖಂ ಶುದ್ಧೋದಕೇನ ಆಪೂರ್ಯ, ತುಲಸೀದಲಂ ನಿಕ್ಷಿಪ್ಯ, ಶಂಖಮುದ್ರಾಂ, ಧೇನುಮುದ್ರಾಂ, ಚಕ್ರಮುದ್ರಾಂ ಪ್ರದರ್ಶ್ಯ ಮೂಲ–ಮಂತ್ರೇಣ – ಅಷ್ಟವಾರಂ ಅಭಿಮಂತ್ರ್ಯ ಇಮಂ ಮಂತ್ರ ಪಠೇತ್ ॥

ಇಮಾ ಆಪಃ ಶಿವತಮಾ ಇಮಾಃ ಸರ್ವಸ್ಯ ಭೇಷಜೀಃ।

ಇಮಾ ರಾಷ್ಟ್ರಸ್ಯ ವರ್ಧನೀರಿಮಾಃ ರಾಷ್ಟ್ರಭೃತೋಽಮೃತಾಃ ॥

53. **ಶಂಖಭ್ರಮಣಮ್ ಅರ್ಥ** : ನಾರಾಯಣನಿಗೆ ಮಂತ್ರಪುಷ್ಪಗಳನ್ನು ಅರ್ಪಿಸುವೆ, ಛತ್ರವನ್ನು ಚಾಮರವನ್ನು ಬೀಸಣಿಗೆಯನ್ನು, ಕನ್ನಡಿಯನ್ನು, ಗೀತವನ್ನು, ನೃತ್ಯವನ್ನು, ವಾದ್ಯವನ್ನು, ಸ್ತೋತ್ರ ಪಾಠವನ್ನು, ಅಷ್ಟೇಕೇ ಸಮಸ್ತರಾಜೋಪಚಾರಗಳನ್ನೂ ಅರ್ಪಿಸುತ್ತೇನೆ.

**ಬಿಂಬಚ್ಛಾಯಾದೋಷ** = ಪೂಜಕನ ನೆರಳು ದೇವರ ಮೇಲೆ ಬಿದ್ದದ್ದರಿಂದ ಪ್ರಾಪ್ತವಾದ ದೋಷದ, **ಪರಿಹಾರಾರ್ಥಂ** = ಉಪಶಮನಕ್ಕಾಗಿ, **ಶಂಖಭ್ರಮಣಂ** = ಶಂಖಭ್ರಮಣವನ್ನು, **ಅಹಂ** = ನಾನು, **ಕರಿಷ್ಯೇ** = ಮಾಡುವೆನು, **ಇತಿ** = ಹೀಗೆ, **ಸಂಕಲ್ಪ್ಯ** = ಸಂಕಲ್ಪ ಮಾಡಿ, **ಶಂಖಂ** = ಶಂಖವನ್ನು, **ಶುದ್ಧೋದಕೇನ** = ಶುದ್ಧವಾದ ಕಲಶೋದಕದಿಂದ, **ಆಪೂರ್ಯ** = ಉದ್ಧರಣೆಯಿಂದ ತುಂಬಿಸಿ, **ತುಲಸೀದಲಂ** = ತುಳಸೀದಳವನ್ನು, **ನಿಕ್ಷಿಪ್ಯ** = ಹಾಕಿ, **ಶಂಖಮುದ್ರಾಂ** = ಶಂಖಮುದ್ರೆಯನ್ನು, **ಧೇನುಮುದ್ರಾಂ** = ಧೇನುಮುದ್ರೆಯನ್ನು, **ಚಕ್ರಮುದ್ರಾಂ** = ಚಕ್ರಮುದ್ರೆಯನ್ನು, **ಪ್ರದರ್ಶ್ಯ** = ಶಂಖಕ್ಕೆ ತೋರಿಸಿ, **ಮೂಲಮಂತ್ರೇಣ** = ಮೂಲಮಂತ್ರದಿಂದ, **ಅಷ್ಟವಾರಂ** = ಎಂಟು ಬಾರಿ, **ಅಭಿಮಂತ್ರ್ಯ** = ನೀರನ್ನು ಅಭಿಮಂತ್ರಿಸಿ, **ಇಮಂ** = ಈ, **ಮಂತ್ರಂ** = ಮಂತ್ರವನ್ನು, **ಪಠೇತ್** = ಪಠಿಸಬೇಕು.

36. 1) ಪಾದದಿಂದ ಕೀರಿಟದವರೆಗೂ, 2) ನಾಭಿಯಿಂದಾರಂಭಿಸಿ ಕೀರಿಟಪರ್ಯಂತವು, 3) ಹೃದಯದಿಂದ ಕೀರಿಟ ಪರ್ಯಂತವೂ ದೇವರಿಗೆ ಪ್ರದಕ್ಷಿಣಾಕಾರವಾಗಿ ಸುತ್ತಿಸಿ ಅದನ್ನು ಬೇರೆ ಪಾತ್ರೆಯಲ್ಲಿ ಹಾಕಿಡಬೇಕು. ಇದೆ ಶಂಖತೀರ್ಥ. ಇದನ್ನು ತಲೆಯಲ್ಲಿ ಪ್ರೋಕ್ಷಿಸಿಕೊಳ್ಳಬೇಕು. ಕುಡಿಯಬಾರದು.

## 54. ರಮಾನೈವೇದ್ಯಮ್ :[37]

**ಶಂಖ ಸಂಸ್ಥಾಪ್ಯ, ಶ್ರೀಸೂಕ್ತೇನ, ಗಂಧದ್ವಾರಾಂ ಇತ್ಯನೇನ ವಾ, ಅಭಿಷೇಕಂ ಕೃತ್ವಾ, ತೀರ್ಥ, ಗಂಧ, ತುಲಸೀಪುಷ್ಪಾದಿಭಿಃ ಶಂಖಂ ಪೂಜಯಿತ್ವಾ, ನೈವೇದ್ಯ ಶೇಷಂ ಪಾತ್ರಾಂತರೇ ನಿಕ್ಷಿಪ್ಯ, ರಮಾಯೈ ನಮಃ, ಓಂ ಲಂ ಲಕ್ಷ್ಮ್ಯೈ ನಮಃ । ಇತಿ ತ್ರಿವಾರಂ ತೀರ್ಥಂ ದತ್ವಾ, ಪುಷ್ಪೈರರ್ಚಯೇತ್ ।**

**ನೈವೇದ್ಯಶೇಷೇ ತೀರ್ಥಂ ವಾ, ತೀರ್ಥತುಲಸೀಂ ನಿಕ್ಷಿಪ್ಯ, ಸತ್ಯಂ ತ್ವರ್ತ್ವೇನ ಪರಿಷಿಂಚಾಮಿ । ಹರಿನಿವೇದಿತನೈವೇದ್ಯಂ ಸಮರ್ಪಯಾಮಿ । ಪ್ರಾಣಾಯ ಸ್ವಾಹಾ । ಅಪಾನಾಯ ಸ್ವಾಹಾ । ವ್ಯಾನಾಯ ಸ್ವಾಹಾ । ಉದಾನಾಯಸ್ವಾಹಾ । ಸಮಾನಾಯ ಸ್ವಾಹಾ ।**

---

**ಇಮಾಃ ಆಪಃ** = ಈ ಶಂಖತೀರ್ಥವೂ, **ಶಿವತಮಾಃ** = ಅತ್ಯಂತ ಪವಿತ್ರವಾದದ್ದು, **ಇಮಾಃ** = ಈ ತೀರ್ಥವು, **ಸರ್ವಸ್ಯ** = ಎಲ್ಲ ರೀತಿಯ ರೋಗಗಳಿಗೂ, **ಭೇಷಜೀಃ** = ಔಷಧಿಯಂತಿರುವುದು, **ಇಮಾಃ** = ಈ ತೀರ್ಥವು, **ರಾಷ್ಟ್ರಸ್ಯ** = ದೇಶದ, **ವರ್ಧನೀಃ** = ಅಭಿವೃದ್ಧಿ ಕಾರಣವು, **ಇಮಾಃ** = ಈ ತೀರ್ಥವು, **ರಾಷ್ಟ್ರಭೃತಃ** = ದೇಶ ರಕ್ಷಿಸುವ ಹೊಣೆ ಹೊತ್ತವರಿಗೆ (ರಾಜರಿಗೆ), **ಅಮೃತಾಃ** = ಅಮೃತದಂತೆ ಪೋಷಕಗಳು

54. **ರಮಾನೈವೇದ್ಯಮಂತ್ರಾರ್ಥ : ಶಂಖಂ** = ಶಂಖವನ್ನು, **ಸಂಸ್ಥಾಪ್ಯ** = ಪೀಠದಲ್ಲಿ ಸ್ಥಾಪಿಸಿ, **ಶ್ರೀಸೂಕ್ತೇನ** = ಶ್ರೀ ಸೂಕ್ತದಿಂದಾಗಲೀ, **ಗಂಧದ್ವಾರಾಂ** = ಗಂಧದ್ವಾರಾಂ ಎಂಬ, **ಇತ್ಯನೇನ ವಾ** = ಈ ಮಂತ್ರದಿಂದಾಗಲೀ, **ಅಭಿಷೇಕಂ** = ಅಭಿಷೇಕವನ್ನು, **ಕೃತ್ವಾ** = ಮಾಡಿ, **ಪೂಜಯಿತ್ವಾ** = ಧ್ಯಾನಾದಿ ಪಂಚೋಪಚಾರವನ್ನು ಮಾಡಿ, **ನೈವೇದ್ಯಶೇಷಂ** = ಹರಿನಿವೇದಿತ ನೈವೇದ್ಯದ

---

37. ರಮಾದೇವಿಯ ಪ್ರತಿಮೆ ಇದ್ದಲ್ಲಿ ಅದಕ್ಕೆ ಅರಿಷಿಣ-ಕುಂಕುಮವನ್ನೂ ಹಚ್ಚಬೇಕು. ಅಥವಾ ಶಂಖವನ್ನೋ ತಿರುವು ಮಾಡಿ ನೀರಿನಿಂದ ತೊಳೆದು, ತೀರ್ಥವನ್ನು ಮೂರು ಬಾರಿ ಕೊಟ್ಟು, ಗಂಧ-ತುಲಸೀ ಪುಷ್ಪಗಳಿಂದ ಅರ್ಚಿಸಿ, ಹರಿನಿವೇದಿತ-ನೈವೇದ್ಯಂ ಸಮರ್ಪಯಾಮಿ ಎಂದು ತೀರ್ಥದಿಂದ ಪ್ರೋಕ್ಷಿಸಿ ಅಥವಾ ತೀರ್ಥದಲ್ಲಿ ತುಳಸಿದಳ ಅದ್ದಿ ಅದನ್ನೂ ನೈವೇದ್ಯದ ಮೇಲೆ ಹಾಕುವುದು. ನಂತರ ಪರಿಷೇಕ, ಪ್ರಾಣಾದಿ ಪಂಚಕ, ಪುಷ್ಪಾದಿಗಳ ಅರ್ಪಣೆ ಮಾಡಬೇಕು. ಇದನ್ನೇ ಪದ್ಯಮಾಲಾದಲ್ಲಿ ರಮಾಬ್ರಹ್ಮಾದಿ ದೇವಾನಾಂ ದತ್ವಾ ತೀರ್ಥಾದಿಕಂ ಬಲಿಂ । ಎನ್ನಲಾಗಿದೆ.

## ರಮಾನೈವೇದ್ಯ

**ರಮಾಬ್ರಹ್ಮಾದಯೋ ದೇವಾ ಸನಕಾದ್ಯಾಃ ಶುಕಾದಯಃ।**
**ಶ್ರೀನೃಸಿಂಹಃಪ್ರಸಾದೋಽಯಂ ಸರ್ವೇ ಗೃಹ್ಣಂತು ವೈಷ್ಣವಾಃ ॥**

---

ಒಂದು ಭಾಗವನ್ನು, **ಪಾತ್ರಾಂತರೇ** = ಬೇರೆ ತಟ್ಟೆಯಲ್ಲಿ, **ನಿಕ್ಷಿಪ್ಯ** = ತೆಗೆದಿಟ್ಟು, **ರಮಾಯೈನಮಃ** = ರಮಾದೇವಿಗೆ ನಮಸ್ಕಾರ, **ಲಕ್ಷ್ಮ್ಯೈ ನಮಃ** = ಲಕ್ಷ್ಮಿಗೆ ನಮಸ್ಕಾರ, **ಇತಿ** = ಎಂದು, **ತ್ರಿವಾರಂ** = ಮೂರು ಬಾರಿ, **ತೀರ್ಥಂ** = ತೀರ್ಥವನ್ನು, **ದತ್ವಾ** = ಕೊಟ್ಟು,

**ನೈವೇದ್ಯೇಶೇಷೇ** = ಪತ್ಯೇಕವಾಗಿ ತೆಗೆದಿಟ್ಟ ನೈವೇದ್ಯದಲ್ಲಿ, **ತೀರ್ಥಂ** = ತೀರ್ಥವನ್ನಾಗಲೀ, **ತೀರ್ಥತುಲಸೀಂ, ವಾಂ** = ತೀರ್ಥದಲ್ಲಿ ಅದ್ದಿದ ತುಲಸಿಯನ್ನಾಗಲೀ, **ನಿಕ್ಷಿಪ್ಯ** = ನೈವೇದ್ಯಶೇಷದ ಮೇಲೆ ಹಾಕಿ, **ಸತ್ಯಂ ತ್ವರ್ತೇನ ಪರಿಷಿಂಚಾಮಿ** = ಸತ್ಯಂ ತ್ವರ್ತೇನ ಪರಿಷಿಂಚಾಮಿ ಎಂಬ ಮಂತ್ರದಿಂದ ಪರಿಷೇಕವನ್ನು ಮಾಡಿ, **ರಮಾಯೈನಮಃ** = ರಮಗೆ ನಮಸ್ಕಾರ, **ಹರಿನಿವೇದಿತ ನೈವೇದ್ಯಂ** = ಹರಿಗರ್ಪಿತವಾದ ನೈವೇದ್ಯವನ್ನು, **ಸಮರ್ಪಯಾಮಿ** = ಅರ್ಪಿಸುತ್ತೇನೆ, **ಪ್ರಾಣಾಯಸ್ವಾಹಾ** = ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ನಾಮಕ ಪಂಚರೂಪಗಳಿಗೆ ಆ ಆಹುತಿಗಳು.

**ರಮಾ** = ರಮಾದೇವಿ, **ಯೇ** = ಮೊದಲಾದ ಮುಕ್ತವರ್ಗದವರು, **ಬ್ರಹ್ಮಾದಯಃ** = ಬ್ರಹ್ಮನೇ ಮೊದಲಾದ ಮುಕ್ತಪ್ರಾಯರು, **ದೇವಾಃ** = ಅಮುಕ್ತ ದೇವತೆಗಳು, **ಸನಕಾದ್ಯಾಃ** = ಬ್ರಹ್ಮ ಮಾನಸ ಪುತ್ರರಾದ ಸನಕನೇ ಮೊದಲಾದ ಜ್ಞಾನಯೋಗಿಗಳು, **ಶುಕಾದಯಃ** = ಜೀವನ್ಮುಕ್ತರಾದ ಋಷಿಶ್ರೇಷ್ಠರು, **ಸರ್ವೇ** = ಎಲ್ಲಾ, **ವೈಷ್ಣವಾಃ** = ವಿಷ್ಣು ಭಕ್ತರಾದ ತತ್ವಾಭಿಮಾನಿ ದೇವತೆಗಳು, ನೀವು, **ಶ್ರೀ ನೃಸಿಂಹಪ್ರಸಾದಃ ಅಯಂ** = ಈ ನೃಸಿಂಹ ಪ್ರಸಾದವು, **ಪ್ರತಿಗೃಹ್ಯತಾಂ** = ಸ್ವೀಕರಿಸಲ್ಪಡಲಿ

## 55. ಮುಖ್ಯಪ್ರಾಣನೈವೇದ್ಯಂ :[38]

ಬಳಿತ್ಥೇತಿ ಪಂಚರ್ಚಸ್ಯ ಸೂಕ್ತಸ್ಯ – ಭೃಗು ಋಷಿಃ – ಮುಖ್ಯಪ್ರಾಣಸ್ಯಾಭಿಷೇಕೇ ವಿನಿಯೋಗಃ।

**ಓಮ್ ॥ ಬಳಿತ್ಥಾ ತದ್ವಪುಷೇ ಧಾಯಿ ದರ್ಶತಂ ದೇವಸ್ಯ ಭರ್ಗಃ ಸಹಸೋಯತೋ ಜನಿ । ಯದೀಮುಪ ಹ್ವರತೇ ಸಾಧತೇ ಮತಿರ್ಋತಸ್ಯ ಧೇನಾ ಅನಯಂತ ಸಸ್ರುತಃ ॥ ೧ ॥**

**ಪೃಕ್ಷೋ ವಪುಃ ಪಿತುಮಾನ್ ನಿತ್ಯ ಆ ಶಯೇ ದ್ವಿತೀಯಮಾ ಸಪ್ತಶಿವಾಸು ಮಾತೃಷು । ತೃತೀಯಮಸ್ಯ ವೃಷಭಸ್ಯ ದೋಹಸೇ ದಶಪ್ರಮತಿಂ ಜನಯಂತ ಯೋಷಣಃ ॥ ೨ ॥**

---

38. ಭಗವಂತನ ಮುಖ್ಯ ಪ್ರತಿಬಿಂಬನಾದ ವಾಯುದೇವನಿಗೂ ಹರಿನಿವೇದಿತ ಅನ್ನಾದಿಗಳನ್ನು ಅರ್ಪಿಸಬೇಕು. ಮೊದಲು ಭಗವಂತನ ಮುಂದೆ ಸಮಸ್ತ ನೈವೇದ್ಯಗಳನ್ನು ಇಟ್ಟು, ತುಲಸೀ ದಳಗಳನ್ನು ಹಾಕಿ ಭಗವಂತನಿಗೆ ನಿವೇದಿಸುವುದು. ನಂತರ ಹೀಗೆ ನಿವೇದಿಸಿದ ನೈವೇದ್ಯದಲ್ಲಿ ವೈಶ್ವದೇವಕ್ಕಾಗಿ ಸ್ವಲ್ಪ ಅನ್ನವನ್ನು ಪ್ರತ್ಯೇಕ ತೆಗೆದಿಟ್ಟು, ಆ ಹರಿನಿವೇದಿತ ನೈವೇದ್ಯಗಳಿಗೆ ತೀರ್ಥವನ್ನು ಪ್ರೋಕ್ಷಿಸಬೇಕು. ಶ್ರೀಮಹಾಲಕ್ಷ್ಮ್ಯೈ ನಮಃ, ಶ್ರೀ ಹರಿನಿವೇದಿತ ನೈವೇದ್ಯಂ ಸಮರ್ಪಯಾಮಿ ಎಂದು ಹೇಳುತ್ತಾ ಲಕ್ಷ್ಮೀದೇವಿಗೆ ನಿವೇದಿಸಬೇಕು. ನಂತರ ವಾಯುದೇವನ ಎಂದರೆ ಹನುಮ, ಮಧ್ವ ಪ್ರತಿಮೆಗಳಿಗೆ ತೀರ್ಥವನ್ನು ಮೂರು ಬಾರಿ ಕೊಟ್ಟು, ಒರೆಸಿ, ಗಂಧ, ಪುಷ್ಪ, ತುಲಸಿಗಳಿಂದ ಅಲಂಕರಿಸಬೇಕು. ಹಿಂದಿನಂತೆಯೇ ಶ್ರೀಮುಖ್ಯ ಪ್ರಾಣಾಯನಮಃ ಶ್ರೀಹರಿ ನಿವೇದಿತ ನೈವೇದ್ಯಂ ಸಮರ್ಪಯಾಮಿ ಎಂದು ತೀರ್ಥವನ್ನು ನೈವೇದ್ಯಕ್ಕೆ ಪ್ರೋಕ್ಷಿಸಬೇಕು. ಸತ್ಯಂ ತ್ವರ್ತೇನ ಪರಿಷಿಂಚಾಮಿ ಎಂದು ನೈವೇದ್ಯವನ್ನು ಪರಿಷೇಕಿಸಿ, ಪ್ರಾಣಾಯ ಸ್ವಾಹಾ – ಇತ್ಯಾದಿ ಮಂತ್ರಗಳಿಂದ ಐದು ಬಾರಿ ನೀರನ್ನು ಉದ್ಧರಣೆಯಿಂದ ಅರ್ಘ್ಯ ಪಾತ್ರೆಗೆ ಹಾಕಿ, ಸಮಯವಿದ್ದರೆ ಬಳಿತ್ಥಾ ಸೂಕ್ತಾದಿಗಳನ್ನು ಹೇಳಿಕೊಳ್ಳಬೇಕು. ನಂತರ ವೈಶ್ವದೇವ ಮಾಡಿ ಗರುಡ ಶೇಷರಿಗೆ ನೈವೇದ್ಯ ಮಾಡಿ ಅದನ್ನು ವಿಸರ್ಜಿಸಬೇಕು. ನಂತರ ಗುರುಗಳಿಗೆ ಹಸ್ತೋದಕವನ್ನು ಮಾಡುವುದು. ಇದರಲ್ಲಿ ಸಾಂಪ್ರದಾಯಿಕ ಭೇದಗಳಿವೆ, ದೇಶ-ಕಾಲ-ಪದ್ಧತಿಗಳಂತೆ ಅನುಸರಿಸುವುದು.

ನಿರ್ಯದೀಂ ಬುಧ್ನಾನ್ ಮಹಿಷಸ್ಯ ವರ್ಪಸ ಈಶಾನಾಸಃ ಶವಸಾ ಕ್ರಂತ ಸೂರಯಃ । ಯದೀಮನು ಪ್ರದಿವೋ ಮಧ್ವ ಆಧವೇ ಗುಹಾ ಸಂತಂ ಮಾತರಿಶ್ವಾ ಮಥಾಯತಿ ॥ ೩ ॥

ಪ್ರ ಯತ್ಪಿತುಃ ಪರಮಾನ್ನೀಯತೇ ಪರ್ಯಾ ಪೃಕ್ಷುಧೋ ವೀರುಧೋ ದಂಸು ರೋಹತಿ । ಉಭಾ ಯದಸ್ಯ ಜನುಷಂ ಯದಿನ್ವತ ಆದಿದ್ಯವಿಷ್ಠೋ ಅಭವದ್ಘೃಣಾ ಶುಚಿಃ ॥ ೪ ॥

ಆದಿನ್ಮಾತೄರಾವಿಶದ್ಯಾಸ್ವಾ ಶುಚಿರಹಿಂಸ್ಯಮಾನ ಉರ್ವಿಯಾ ವಿ ವಾವೃಧೇ । ಅನು ಯತ್ಪೂರ್ವಾ ಅರುಹತ್ಸನಾಜುವೋ ನಿ ನವ್ಯಸೀಷ್ವವರಾಸು ಧಾವತೇ ॥ ೫ ॥

ಬಳಿತ್ಥಾಸೂಕ್ತೇನ ಪ್ರಾಣಂ ಅಭಿಷಿಚ್ಯ, ಪೀಠೇ ಸಂಸ್ಥಾಪ್ಯ, ಓಂ ಭಾರತೀರಮಣ ಮುಖ್ಯ ಪ್ರಾಣಾಯ ನಮಃ । ಬ್ರಹ್ಮಣೇ ನಮಃ । ತತ್ವಜ್ಞಾನಾಯ ನಮಃ । ವೈಷ್ಣವಾಚಾರ್ಯಾಯ ನಮಃ । ವ್ಯಾಸಶಿಷ್ಯಾಯ ನಮಃ । ಯತೀಶ್ವರಾಯ ನಮಃ । ಪೂರ್ಣಪ್ರಜ್ಞಾಯ

55. ಮುಖ್ಯಪ್ರಾಣ ನೈವೇದ್ಯಮಂತ್ರಾರ್ಥ : ಬಳಿತ್ಥಾಸೂಕ್ತೇನ = ಬಳಿತ್ಥಾ ಸೂಕ್ತದಿಂದ, ಪ್ರಾಣಂ = ಮುಖ್ಯಪ್ರಾಣ ಪ್ರತಿಮೆಯನ್ನು, ಅಭಿಷಿಚ್ಯ = ಶುದ್ಧೋದಕದಿಂದ ಅಭಿಷೇಕಿಸಿ, ಪೀಠೇಸಂಸ್ಥಾಪ್ಯ = ಒರಸಿ ಪೀಠದಲ್ಲಿಟ್ಟು, ಶ್ರೀಭಾರತೀರಮಣ ಮುಖ್ಯಪ್ರಾಣಾಯ ನಮಃ = ಭಾರತೀರಮಣನಾದ ಮುಖ್ಯಪ್ರಾಣನಿಗೆ ನಮಸ್ಕಾರ, ಬ್ರಹ್ಮಣೇ ನಮಃ = ಬ್ರಹ್ಮಪದವಿಗೆ ಬರುವವರಿಗೆ ನಮಸ್ಕಾರ, ತತ್ವಜ್ಞಾನಾಯ ನಮಃ = ತತ್ವವಾದವನ್ನು ಮಂಡಿಸಿದವರಿಗೆ ನಮನ, ವೈಷ್ಣವಾಚಾರ್ಯಾಯ ನಮಃ = ವೈಷ್ಣವಾಗ್ರೇಸರರಿಗೆ ನಮಸ್ಕಾರ, ವ್ಯಾಸಶಿಷ್ಯಾಯ ನಮಃ = ವ್ಯಾಸಶಿಷ್ಯರೆನಿಸಿದವರಿಗೆ ನಮನ, ಯತೀಶ್ವರಾಯ ನಮಃ = ಯತಿಶ್ರೇಷ್ಠರಿಗೆ ನಮಸ್ಕಾರವು, ಪೂರ್ಣಪ್ರಜ್ಞಾಯ ನಮಃ = ಪೂರ್ಣಪ್ರಜ್ಞರಿಗೆ

**ನಮಃ । ಜ್ಞಾನದಾತ್ರೇ ನಮಃ । ಮಧ್ವಾಯ ನಮಃ । ಧ್ವಸ್ತದುರಾಗಮಾಯ ನಮಃ । ಶಂನಾಮ್ನೇ ನಮಃ । ಜಿತೇಂದ್ರಿಯಾಯ ನಮಃ। ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯೇಭ್ಯೋ ನಮಃ । ಇತಿ ಹರಿನಿವೇದಿತ ತುಲಸೀಪುಷ್ಪೈಃ ಅಲಂಕೃತ್ಯ, ಗಂಧಂ ಸಮರ್ಪ್ಯ, ಶಂಖತೀರ್ಥೇನ ಪ್ರತಿಮಾಂ ಪ್ರೋಕ್ಷ್ಯ ತ್ರಿವಾರ ತೀರ್ಥಂ ದತ್ವಾ, ನೈವೇದ್ಯಶೇಷಂ ಓಂ ಭೂರ್ಭುವಸ್ಸ್ವಃ । ಸತ್ಯಂ ತ್ವರ್ತೇನ ಪರಿಷಿಂಚಾಮಿ। ಮುಖ್ಯಪ್ರಾಣಾಯ ನಮಃ । ಹರಿನಿವೇದಿತನೈವೇದ್ಯಂ ಸಮರ್ಪಯಾಮಿ । ಓಂ ಪ್ರಾಣಾಯ ಸ್ವಾಹಾ । ಅಪಾನಾಯ ಸ್ವಾಹಾ । ವ್ಯಾನಾಯ ಸ್ವಾಹಾ । ಉದಾನಾಯ ಸ್ವಾಹಾ । ಸಮಾನಾಯ ಸ್ವಾಹಾ । ಇತಿ ಪಾತ್ರಾಂತರೇ ಜಲಂ ವಿಸೃಜೇತ್ ।**

---

ನಮಸ್ಕಾರವು, **ಜ್ಞಾನದಾತ್ರೇ ನಮಃ** = ಅನಂದತೀರ್ಥರಿಗೆ ನಮಸ್ಕಾರವು, **ಧ್ವಸ್ತದುರಾಗಮಾಯ ನಮಃ** = ದುರಾಗಮಗಳನ್ನು ವಿಮರ್ಶಿಸಿದವರಿಗೆ, **ಶಂ ನಾಮ್ನೇ ನಮಃ** = ಆನಂದವೆಂಬ ಹೆಸರುಳ್ಳವರಿಗೆ ನಮಸ್ಕಾರ, **ಜಿತೇಂದ್ರಿ–ಯಾಯ ನಮಃ**=ಜೀತೇಂದ್ರಿಯರಿಗೆ ನಮಸ್ಕಾರ, **ಶ್ರೀಮದಾನಂದತೀರ್ಥ–ಭಗವತ್ಪಾದಾ–ಚಾರ್ಯೇಭ್ಯೋ ನಮಃ**=ಶ್ರೀಮದಾನಂದತೀರ್ಥ ಭಗವತ್ಪಾದರಿಗೆ ನಮಸ್ಕಾರವು, **ಇತಿ** = ಹೀಗೆ, **ಹರಿನಿವೇದಿತ ತುಲಸೀಪುಷ್ಪೈಃ** = ಹರಿಗರ್ಪಿತವಾದ ತುಲಸೀ ಪುಷ್ಪಗಳಿಂದ, **ಅಲಂಕೃತ್ಯ** = ಅಲಂಕರಿಸಿ, **ಗಂಧಂ** = ಗಂಧವನ್ನು, **ಸಮರ್ಪ್ಯ** = ಅರ್ಪಿಸಿ, **ಶಂಖತೀರ್ಥೇನ** = ಶಂಖತೀರ್ಥದಿಂದ, **ಪ್ರೋಕ್ಷ್ಯ** = ಪ್ರತಿಮೆಯನ್ನು ಪ್ರೋಕ್ಷಿಸಿ, **ತ್ರಿವಾರಂ** = ಮೂರು ಬಾರಿ, **ತೀರ್ಥಂ** = ತೀರ್ಥವನ್ನು, **ದತ್ವಾ** = ಕೊಟ್ಟು, **ನೈವೇದ್ಯಶೇಷಂ** = ಹರಿನಿವೇದಿತ ನೈವೇದ್ಯ ಶೇಷವನ್ನು, **ಓಂ ಭೂರ್ಭುವಸ್ಸ್ವಃ** = ಎಂಬ ವ್ಯಾಹೃತಿಯಿಂದ ಪ್ರೋಕ್ಷಿಸಿ, **ಸತ್ಯಂ ತ್ವರ್ತೇನ ಪರಿಷಿಂಚಾಮಿ** = ಈ ಮಂತ್ರ ಹೇಳಿ ಪರಿಷೇಕ ಮಾಡಿ, ಮುಖ್ಯಪ್ರಾಣಾಯ "ಹರಿನಿವೇದಿತ ನೈವೇದ್ಯಂ ಸಮರ್ಪಯಾಮಿ" ಎಂದು ತೀರ್ಥವನ್ನು ನೈವೇದ್ಯದ ಮೇಲೆ ಪ್ರೋಕ್ಷಿಸಿ, ನೀರಿನಿಂದ ಪರಿಷೇಕ ಮಾಡಿ, ಅಮೃತೋಪಿ ಸ್ತರಣಮಸಿ ಸ್ವಾಹಾ ಎಂದು ಅರ್ಘ್ಯ ಪಾತ್ರೆಗೆ ನೀರನ್ನು ಹಾಕಬೇಕು. ನಂತರ ಪ್ರಾಣಾಯಸ್ವಾಹಾ ಅಪಾನಾಯಸ್ವಾಹಾ ಇತ್ಯಾದಿ ಐದು ಮಂತ್ರ ಹೇಳುತ್ತಾ ಐದು ಬಾರಿ ನೀರನ್ನು ಪಾತ್ರೆಗೆ ಉದ್ದರಣೆಯಿಂದ ಹಾಕಬೇಕು. **ಮುಖ್ಯಪ್ರಾಣಾಯ ನಮಃ**= ಮುಖ್ಯಪ್ರಾಣನಿಗೆ ನಮಸ್ಕಾರ, **ಹರಿನಿವೇದಿತ ನೈವೇದ್ಯಂ**= ಹರಿಗರ್ಪಿತವಾದ ನೈವೇದ್ಯವನ್ನು, **ಸಮರ್ಪಯಾಮಿ**= ಸಮರ್ಪಿಸುತ್ತೇನೆ ಎಂದು ಹೇಳಿ, **ಪ್ರಾಣಾಯಸ್ವಾಹಾ, ಅಪಾನಾಯಸ್ವಾಹಾ ಪ್ರಾತ್ರಾಂತರೇ**=ಅರ್ಘ್ಯಪಾತ್ರೆಯಲ್ಲಿ, **ಜಲಂ**=ನೀರನ್ನು, **ವಿಸೃಜೇತ್**=ಹಾಕಬೇಕು.

## 56. ಗರುಡ-ಶೇಷ ನೈವೇದ್ಯಂ :[39]

**ಗರುಡಶೇಷ ಪ್ರತಿಮಾಂ ಅಭಿಷಿಚ್ಯ, ಗಂಧ-ಪುಷ್ಪೈಃ ಅಲಂಕೃತ್ಯ, ಶಂಖೋದಕೇನ ಪ್ರೋಕ್ಷ್ಯ, ತ್ರಿವಾರಂ ತೀರ್ಥಂ ದತ್ವಾ, ಶ್ರೀ ಗರುಡಾಯ ನಮಃ ॥ ಹರಿನಿವೇದಿತ ನೈವೇದ್ಯಂ ಸಮರ್ಪಯಾಮಿ । ಶ್ರೀಶೇಂ ಶೇಷಾಯ ನಮಃ । ಹರಿ ನಿವೇದಿತನೈವೇದ್ಯಂ ಸಮರ್ಪಯಾಮಿ । ಇತಿ ನಿವೇದ್ಯ ನೈವೇದ್ಯಂ ವಿಸೃಜೇತ್।**

---

**56. ಗರುಡ ಶೇಷ ನೈವೇದ್ಯಂ :**

**ಗರುಡ ಶೇಷ ಪ್ರತಿಮಾಂ** = ಗರುಡ ಹಾಗೂ ಶೇಷ ಪ್ರತಿಮೆಯನ್ನು, **ಅಭಿಷಿಚ್ಯ** = ತೊಳೆದು, **ಗಂಧಪುಷ್ಪೈಃ** = ಹರಿನಿವೇದಿತ ಗಂಧಪುಷ್ಪಗಳಿಂದ, **ಅಲಂಕೃತ್ಯ** = ಅಲಂಕರಿಸಿ, **ಶಂಖೋದಕೇನ** = ಶಂಖತೀರ್ಥದಿಂದ, **ಪ್ರೋಕ್ಷ್ಯ** = ಪ್ರೋಕ್ಷಿಸಿ, **ತ್ರಿವಾರಂ** = ಮೂರು ಬಾರಿ, **ತೀರ್ಥಂ ದತ್ವಾ** = ತೀರ್ಥವನ್ನು ಕೊಟ್ಟು, **ಶ್ರೀ ಗರುಡಾಯ ನಮಃ** = ಗರುಡನಿಗೆ ನಮಸ್ಕಾರ, **ಹರಿನಿವೇದಿತ ನೈವೇದ್ಯಂ** = ಹರಿಗರ್ಪಿತವಾದ ನೈವೇದ್ಯವನ್ನು, **ಸಮರ್ಪಯಾಮಿ** = ಸಮರ್ಪಿಸುತ್ತೇನೆ, **ಶ್ರೀಶೇಂಶೇಷಾಯ ನಮಃ** = ಶೇಷನಿಗೆ ನಮಸ್ಕಾರ, **ಹರಿನಿವೇದಿತ ನೈವೇದ್ಯಂ** = ಹರಿನಿವೇದಿತ ನೈವೇದ್ಯವನ್ನು, **ಸಮರ್ಪಯಾಮಿ** = ಅರ್ಪಿಸುತ್ತೇನೆ, **ಇತಿ** = ಹೀಗೆ, **ನಿವೇದ್ಯ** = ನಿವೇದಿಸಿ, **ನೈವೇದ್ಯಂ** = ನೈವೇದ್ಯವನ್ನು, **ವಿಸೃಜೇತ್** = ವಿಸರ್ಜನೆ ಮಾಡಬೇಕು.

ಶೇಷ ಮಂತ್ರ –

**ದಧಾನೋ ಹಲಸೌನಂದೌ ಶ್ವೇತವರ್ಣಃ ಕೃತಾಂಜಲಿಃ ।**
**ಸಹಸ್ರಮೂರ್ಧಾ ಅದ್ವಿತೀಯ ಕರ್ಣಭೂಷಣಂ ।**
**ವನಮಾಲೀ ನೀಲ ವಾಸಾಃ ಧ್ಯೇಯೋ ವಿಷ್ಣೋಸ್ತು ಪೃಷ್ಠತಃ ॥** – ತಂತ್ರಸಾರ

---

39. ಶೇಷದೇವರು ಹಿಂದೆ ರುದ್ರರೆ ಆಗಿದ್ದರಿಂದ ಶೇಷದೇವರ ಪೂಜೆ ಮಾಡಿದರೆ ರುದ್ರನನ್ನೂ ಪೂಜಿಸಿದಂತೆಯೇ. ಆದ್ದರಿಂದ ನಮ್ಮ ಸಂಪ್ರದಾಯದಲ್ಲಿ ರುದ್ರದೇವರ ಲಿಂಗವನ್ನು ಇಟ್ಟುಕೊಂಡು ಪೂಜಿಸುವ ಸಂಪ್ರದಾಯವಿಲ್ಲ. ಹೊರತು ರುದ್ರನ ಪೂಜೆಯೇ ಬೇಡವೆಂದಲ್ಲ.

## 57. ಪ್ರದಕ್ಷಿಣ-ನಮಸ್ಕಾರಾಃ :[40]

ಯಾನಿ ಕಾನಿ ಚ ಪಾಪಾನಿ ಜನ್ಮಾಂತರ ಕೃತಾನಿ ಚ ।
ತಾನಿ ತಾನಿ ವಿನಶ್ಯಂತಿ ಪ್ರದಕ್ಷಿಣ ಪದೇ ಪದೇ ॥ 1 ॥

ಪಾಪೋಽಹಂ ಪಾಪಕರ್ಮಾಹಂ ಪಾಪಾತ್ಮಾ ಪಾಪಸಂಭವಃ ।
ತ್ರಾಹಿ ಮಾಂ ಕೃಪಯಾ ಕೃಷ್ಣ ಶರಣಾಗತವತ್ಸಲ ॥ 2 ॥

ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ ।
ತಸ್ಮಾತ್ ಕಾರುಣ್ಯ ಭಾವೇನ ರಕ್ಷ ರಕ್ಷ ಜನಾರ್ದನ ॥ 3 ॥

---

**58. ಪ್ರದಕ್ಷಿಣ ನಮಸ್ಕಾರಗಳ ಅರ್ಥ :**

**ಯಾನಿಕಾನಿ** = ಯಾವ ಯಾವ, ಜನ್ಮಾಂತರ ಕೃತಾನಿ ಬೇರೆ ಬೇರೆ ಜನ್ಮದಲ್ಲಿ ಮಾಡಿದ, **ಯಾನಿ ಕಾನಿ** = ಯಾವ, ಯಾವ, **ಪಾಪಾನಿ** = ಬ್ರಹ್ಮಹತ್ಯಾದಿ ಪಾಪಗಳೋ, **ತಾನಿ** = ಅವುಗಳೆಲ್ಲವೂ, **ಪದೇ** = ಹೆಜ್ಜೆ ಹೆಜ್ಜೆಗೂ ಮಾಡುವ, **ಪ್ರದಕ್ಷಿಣ, ಪದೇ** = ಪ್ರದಕ್ಷಿಣೇ ಮಾಡಿದರೆ, **ವಿನಶ್ಯಂತಿ** = ನಾಶವಾಗುತ್ತವೆ ॥ 1 ॥

**ಅಹಂ** = ನಾನು, **ಪಾಪಃ** = ಪಾಪಿಯು, **ಅಹಂ** = ನಾನು, **ಪಾಪಕರ್ಮಾ** = ಪಾಪಕರ್ಮಗಳನ್ನೇ ಆಚರಿಸಿದವನು, **ಪಾಪಾತ್ಮಾ** = ಪಾಪಿಷ್ಟ ದೇಹವುಳ್ಳವನು, **ಪಾಪಸಂಭವಃ** = ಪಾಪದ ಫಲವಾಗಿಯೇ ಜನ್ಮತಾಳಿರುವೆನು, **ಶರಣಾಗತವತ್ಸಲ** = ಶರಣಾಗತರಾದವರನ್ನು ಆದರಿಸುವ, **ಕೃಷ್ಣ** = ಭಗವಂತನೇ, **ಮಾಂ** = ನನ್ನನ್ನು, **ಕೃಪಯಾ** = ದಯೆಯಿಂದ, **ತ್ರಾಹಿ** = ರಕ್ಷಿಸು ॥ 2 ॥

**ಜನಾರ್ದನ** = ಜಗನ್ನಾಥನೇ, **ಅನ್ಯಥಾ** = ನೀನು ಬಿಟ್ಟರೆ ಬೇರೆ, **ಮಮ** = ನನಗೆ, **ಶರಣಂನಾಸ್ತಿ** = ರಕ್ಷಕರಿಲ್ಲ, **ತ್ವಮೇವ** = ನೀನೇ, **ಶರಣಂ** = ರಕ್ಷಕನು, **ತಸ್ಮಾತ್** = ಆದ್ದರಿಂದ, **ಕಾರುಣ್ಯ ಭಾವೇನ** = ಕರುಣೆಯಿಂದ, **ರಕ್ಷರಕ್ಷ** = ರಕ್ಷಿಸು ॥ 3 ॥

---

40. ಪ್ರದಕ್ಷಿಣ, ನಮಸ್ಕಾರಗಳನ್ನು ಮಾಡುವಾಗ ಉಪನಿಷತ್ತುಗಳನ್ನು ಅಥವಾ ಜಿಂತತೇ ಪುಂಡರೀಕಾಕ್ಷ ಇತ್ಯಾದಿ ತಂತ್ರಸಾರೋಕ್ತವಾದ ಸ್ತೋತ್ರಗಳನ್ನು ಪಠಿಸಬೇಕು ಎಂದು ವಿಷ್ಣುತೀರ್ಥರು ತಿಳಿಸಿರುವರು.
ಜಿತಮಿತ್ಯಾದಿ ಮಂತ್ರೇಣ ಪ್ರದಕ್ಷಿಣ ನಮಸ್ಕೃತಿ ।
ಕೃತ್ವಾ ತು ಚತುರವೃತ್ತ್ಯಾ ತತೋ ದೇವಂ ಕ್ಷಮಾಪಯೇತ್ ॥ –ವಿಷ್ಣುತೀರ್ಥಯ 3/12
ಪ್ರದಕ್ಷಿಣ ನಮಸ್ಕಾರಾನ್ ಸೂಕ್ತಪಾಠಂ ತತಶ್ಚರೇತ್ ॥ –ಪ.ಮಾ.



**ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ ।**
**ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಈರಿತಃ ॥ 4 ॥**

**ತೀರ್ಥಕೋಟಿ ಸಹಸ್ರಾಣಿ ವ್ರತಕೋಟಿಶತಾನಿ ಚ ।**
**ನಾರಾಯಣಪ್ರಣಾಮಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥ 5 ॥**

**ಗರುಡಾರೂಢ ಮಾಂ ಧೃತ್ವಾ ಕರೇಣ ಭುವಿ ಚಾಲಯನ್ ।**
**ಪರಿತಃ ಕ್ರಾಮಯಾತ್ಮಾನಂ ಪ್ರದಕ್ಷಿಣ ಫಲಾರ್ಥಿನಮ್ ॥ 6 ॥**

**ಯಾನಿಕಾನಿ ಚ ಪಾಪಾನಿ ಜನ್ಮಾಂತರ ಕೃತಾನಿ ಚ ।**
**ತಾನಿ ತಾನಿ ಪ್ರಣಶ್ಯಂತಿ ಪ್ರದಕ್ಷಿಣ ಪದೇ ಪದೇ ॥ 7 ॥**

---

**ಉರಸಾ** = ಎದೆಯಿಂದಲೂ, **ಶಿರಸಾ** = ಶಿರಸ್ಸಿನಿಂದಲೂ, **ದೃಷ್ಟ್ಯಾ** = ದೃಷ್ಟಿಯಿಂದಲೂ, **ಮನಸಾ** = ಮನಸ್ಸಿನಿಂದಲೂ, **ವಚಸಾ** = ಮಾತಿನಿಂದಲೂ, **ತಥಾ** = ಹಾಗೆಯೇ, **ಪದ್ಭ್ಯಾಂ** = ಎರಡು ಕಾಲುಗಳಿಂದಲೂ, **ಕರಾಭ್ಯಾಂ** = ಎರಡು ಕೈಗಳಿಂದಲೂ, **ಜಾನುಭ್ಯಾಂ** = ಮೊಣಕಾಲುಗಳಿಂದಲೂ, **ಮಾಡುವ ಪ್ರಣಮಃ** = ನಮಸ್ಕಾರವು, **ಅಷ್ಟಾಂಗ ಈರಿತಃ** = ಅಷ್ಟಾಂಗ ನಮಸ್ಕಾರವೆಂದು ಹೇಳಲ್ಪಟ್ಟಿದೆ ॥ 4 ॥

**ತೀರ್ಥಕೋಟಿ ಸಹಸ್ರಾಣಿ** = ಸಾವಿರ ಕೋಟಿ ತೀರ್ಥಗಳಲ್ಲಿ ಮಿಂದರೂ ವ್ರತಕೋಟಿ, **ಶತಾನಿ** = ನೂರು ಕೋಟಿ ವ್ರತಗಳನ್ನು ಮಾಡಿದರೂ ಆ ಪುಣ್ಯವೂ, **ನಾರಾಯಣ ಪ್ರಣಾಮಸ್ಯ** = ನಾರಾಯಣನ ಪ್ರಣಾಮ ಮಾಡಿದ ಫಲದ, **ಷೋಡಶೀ ಕಲಾಂ** = ಹದಿನಾರನೇ ಒಂದು ಭಾಗಕ್ಕೆ ಸಮವಾಗಿ, **ನ ಅರ್ಹಂತಿ** = ಪುಣ್ಯವನ್ನು ಕೊಡಲಾರವು ॥ 5 ॥

**ಅಹಂ** = ನಾನು, **ಕರ್ತಾ** = ಸ್ವತಂತ್ರನಾಗಿ ದೇವಪೂಜಾವನ್ನು ಮಾಡುವವನು, **ನ** = ಆಗಿರುವುದಿಲ್ಲ, **ಹರಿಃ** = ಶ್ರೀಹರಿಯೇ, **ತತ್ಪೂಜಾ** = ಭಗವಂತನ ಪೂಜೆಗಾಗಲಿ, **ಚ** = ಅಥವಾ, **ಅಖಿಲಂ** = ಬೇರೆ ಎಲ್ಲಾ ರೀತಿಯಾದ, **ಕರ್ಮ** = ಕರ್ಮಗಳಾಗಲಿ, **ಕರ್ತಾ** = ಸ್ವತಂತ್ರವಾಗಿ ಕರ್ತೃವಾಗಿರುವನು, **ತಥಾಪಿ** = ವಸ್ತು ಸ್ಥಿತಿ ಹೀಗಿದ್ದರೂ, **ತ್ವತ್ಪ್ರಸಾದೇನ** = ಭಗವಂತನ ಅನುಗ್ರಹ ವಿಶೇಷದಿಂದ, **ಪೂಜಾ** = ಪೂಜೆಯು, **ಮತ್ಕೃತಾ** = ನನ್ನಿಂದ ಮಾಡಲ್ಪಟ್ಟಿದೆ, **ಅನ್ಯಥಾ ನ** = ಭಗವಂತನ ಅನುಗ್ರಹವಿಲ್ಲದಿದ್ದರೆ ಸಾಧ್ಯವಾಗುತ್ತಿದ್ದಿಲ್ಲ ॥ 6–7 ॥

## 57. ಪ್ರದಕ್ಷಿಣ-ನಮಸ್ಕಾರಾಃ :[40]

ಯಾನಿ ಕಾನಿ ಚ ಪಾಪಾನಿ ಜನ್ಮಾಂತರ ಕೃತಾನಿ ಚ ।
ತಾನಿ ತಾನಿ ವಿನಶ್ಯಂತಿ ಪ್ರದಕ್ಷಿಣ ಪದೇ ಪದೇ ॥ 1 ॥

ಪಾಪೋऽಹಂ ಪಾಪಕರ್ಮಾಹಂ ಪಾಪಾತ್ಮಾ ಪಾಪಸಂಭವಃ ।
ತ್ರಾಹಿ ಮಾಂ ಕೃಪಯಾ ಕೃಷ್ಣ ಶರಣಾಗತವತ್ಸಲ ॥ 2 ॥

ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ ।
ತಸ್ಮಾತ್ ಕಾರುಣ್ಯ ಭಾವೇನ ರಕ್ಷ ರಕ್ಷ ಜನಾರ್ದನ ॥ 3 ॥

---

### 58. ಪ್ರದಕ್ಷಿಣ ನಮಸ್ಕಾರಗಳ ಅರ್ಥ :

**ಯಾನಿಕಾನಿ** = ಯಾವ ಯಾವ, ಜನ್ಮಾಂತರ ಕೃತಾನಿ ಬೇರೆ ಬೇರೆ ಜನ್ಮದಲ್ಲಿ ಮಾಡಿದ, **ಯಾನಿ ಕಾನಿ** = ಯಾವ, ಯಾವ, **ಪಾಪಾನಿ** = ಬ್ರಹ್ಮಹತ್ಯಾದಿ ಪಾಪಗಳೋ, **ತಾನಿ** = ಅವುಗಳೆಲ್ಲವೂ, **ಪದೇ** = ಹೆಜ್ಜೆ ಹೆಜ್ಜೆಗೂ ಮಾಡುವ, ಪ್ರದಕ್ಷಿಣ, **ಪದೇ** = ಪ್ರದಕ್ಷಿಣೇ ಮಾಡಿದರೆ, **ವಿನಶ್ಯಂತಿ** = ನಾಶವಾಗುತ್ತವೆ ॥ 1 ॥

**ಅಹಂ** = ನಾನು, **ಪಾಪಃ** = ಪಾಪಿಯು, **ಅಹಂ** = ನಾನು, **ಪಾಪಕರ್ಮಾ** = ಪಾಪಕರ್ಮಗಳನ್ನೇ ಆಚರಿಸಿದವನು, **ಪಾಪಾತ್ಮಾ** = ಪಾಪಿಷ್ಟ ದೇಹವುಳ್ಳವನು, **ಪಾಪಸಂಭವಃ** = ಪಾಪದ ಫಲವಾಗಿಯೇ ಜನ್ಮತಾಳಿರುವೆನು, **ಶರಣಾಗತವತ್ಸಲ** = ಶರಣಾಗತರಾದವರನ್ನು ಆದರಿಸುವ, **ಕೃಷ್ಣ** = ಭಗವಂತನೇ, **ಮಾಂ** = ನನ್ನನ್ನು, **ಕೃಪಯಾ** = ದಯೆಯಿಂದ, **ತ್ರಾಹಿ** = ರಕ್ಷಿಸು ॥ 2 ॥

**ಜನಾರ್ದನ** = ಜಗನ್ನಾಥನೇ, **ಅನ್ಯಥಾ** = ನೀನು ಬಿಟ್ಟರೆ ಬೇರೆ, **ಮಮ** = ನನಗೆ, **ಶರಣಂನಾಸ್ತಿ** = ರಕ್ಷಕರಿಲ್ಲ, **ತ್ವಮೇವ** = ನೀನೇ, **ಶರಣಂ** = ರಕ್ಷಕನು, **ತಸ್ಮಾತ್** = ಆದ್ದರಿಂದ, **ಕಾರುಣ್ಯ ಭಾವೇನ** = ಕರುಣೆಯಿಂದ, **ರಕ್ಷರಕ್ಷ** = ರಕ್ಷಿಸು ॥ 3 ॥

---

40. ಪ್ರದಕ್ಷಿಣ, ನಮಸ್ಕಾರಗಳನ್ನು ಮಾಡುವಾಗ ಉಪನಿಷತ್ತುಗಳನ್ನು ಅಥವಾ ಜಿಂತತೇ ಪುಂಡರೀಕಾಕ್ಷ ಇತ್ಯಾದಿ ತಂತ್ರಸಾರೋಕ್ತವಾದ ಸ್ತೋತ್ರಗಳನ್ನು ಪಠಿಸಬೇಕು ಎಂದು ವಿಷ್ಣುತೀರ್ಥರು ತಿಳಿಸಿರುವರು.
ಜಿತಮಿತ್ಯಾದಿ ಮಂತ್ರೇಣ ಪ್ರದಕ್ಷಿಣ ನಮಸ್ಕೃತಿ ।
ಕೃತ್ವಾ ತು ಚತುರವೃತ್ತ್ಯಾ ತತೋ ದೇವಂ ಕ್ಷಮಾಪಯೇತ್ ॥ –ವಿಷ್ಣುತೀರ್ಥಯ 3/12
ಪ್ರದಕ್ಷಿಣ ನಮಸ್ಕಾರಾನ್ ಸೂಕ್ತಪಾಠಂ ತತಶ್ಚರೇತ್ ॥ –ಪ.ಮಾ.



**ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ ।**
**ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಈರಿತಃ ॥ 4 ॥**

**ತೀರ್ಥಕೋಟಿ ಸಹಸ್ರಾಣಿ ವ್ರತಕೋಟಿಶತಾನಿ ಚ ।**
**ನಾರಾಯಣಪ್ರಣಾಮಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥ 5 ॥**

**ಗರುಡಾರೂಢ ಮಾಂ ಧೃತ್ವಾ ಕರೇಣ ಭುವಿ ಚಾಲಯನ್ ।**
**ಪರಿತಃ ಕ್ರಾಮಯಾತ್ಮಾನಂ ಪ್ರದಕ್ಷಿಣ ಫಲಾರ್ಥಿನಮ್ ॥ 6 ॥**

**ಯಾನಿಕಾನಿ ಚ ಪಾಪಾನಿ ಜನ್ಮಾಂತರ ಕೃತಾನಿ ಚ ।**
**ತಾನಿ ತಾನಿ ಪ್ರಣಶ್ಯಂತಿ ಪ್ರದಕ್ಷಿಣ ಪದೇ ಪದೇ ॥ 7 ॥**

---

**ಉರಸಾ** = ಎದೆಯಿಂದಲೂ, **ಶಿರಸಾ** = ಶಿರಸ್ಸಿನಿಂದಲೂ, **ದೃಷ್ಟ್ಯಾ** = ದೃಷ್ಟಿಯಿಂದಲೂ, **ಮನಸಾ** = ಮನಸ್ಸಿನಿಂದಲೂ, **ವಚಸಾ** = ಮಾತಿನಿಂದಲೂ, **ತಥಾ** = ಹಾಗೆಯೇ, **ಪದ್ಭ್ಯಾಂ** = ಎರಡು ಕಾಲುಗಳಿಂದಲೂ, **ಕರಾಭ್ಯಾಂ** = ಎರಡು ಕೈಗಳಿಂದಲೂ, **ಜಾನುಭ್ಯಾಂ** = ಮೊಣಕಾಲುಗಳಿಂದಲೂ, **ಮಾಡುವ ಪ್ರಣಮಃ** = ನಮಸ್ಕಾರವು, **ಅಷ್ಟಾಂಗ ಈರಿತಃ** = ಅಷ್ಟಾಂಗ ನಮಸ್ಕಾರವೆಂದು ಹೇಳಲ್ಪಟ್ಟಿದೆ ॥ 4 ॥

**ತೀರ್ಥಕೋಟಿ ಸಹಸ್ರಾಣಿ** = ಸಾವಿರ ಕೋಟಿ ತೀರ್ಥಗಳಲ್ಲಿ ಮಿಂದರೂ ವ್ರತಕೋಟಿ, **ಶತಾನಿ** = ನೂರು ಕೋಟಿ ವ್ರತಗಳನ್ನು ಮಾಡಿದರೂ ಆ ಪುಣ್ಯವೂ, **ನಾರಾಯಣ ಪ್ರಣಾಮಸ್ಯ** = ನಾರಾಯಣನ ಪ್ರಣಾಮ ಮಾಡಿದ ಫಲದ, **ಷೋಡಶೀ ಕಲಾಂ** = ಹದಿನಾರನೇ ಒಂದು ಭಾಗಕ್ಕೆ ಸಮವಾಗಿ, **ನ ಅರ್ಹಂತಿ** = ಪುಣ್ಯವನ್ನು ಕೊಡಲಾರವು ॥ 5 ॥

**ಅಹಂ** = ನಾನು, **ಕರ್ತಾ** = ಸ್ವತಂತ್ರನಾಗಿ ದೇವಪೂಜಾವನ್ನು ಮಾಡುವವನು, **ನ** = ಆಗಿರುವುದಿಲ್ಲ, **ಹರಿಃ** = ಶ್ರೀಹರಿಯೇ, **ತತ್ಪೂಜಾ** = ಭಗವಂತನ ಪೂಜೆಗಾಗಲಿ, **ಚ** = ಅಥವಾ, **ಅಖಿಲಂ** = ಬೇರೆ ಎಲ್ಲಾ ರೀತಿಯಾದ, **ಕರ್ಮ** = ಕರ್ಮಗಳಾಗಲಿ, **ಕರ್ತಾ** = ಸ್ವತಂತ್ರವಾಗಿ ಕರ್ತೃವಾಗಿರುವನು, **ತಥಾಪಿ** = ವಸ್ತು ಸ್ಥಿತಿ ಹೀಗಿದ್ದರೂ, **ತ್ವತ್ಪ್ರಸಾದೇನ** = ಭಗವಂತನ ಅನುಗ್ರಹ ವಿಶೇಷದಿಂದ, **ಪೂಜಾ** = ಪೂಜೆಯು, **ಮತ್ಕೃತಾ** = ನನ್ನಿಂದ ಮಾಡಲ್ಪಟ್ಟಿದೆ, **ಅನ್ಯಥಾ ನ** = ಭಗವಂತನ ಅನುಗ್ರಹವಿಲ್ಲದಿದ್ದರೆ ಸಾಧ್ಯವಾಗುತ್ತಿದ್ದಿಲ್ಲ ॥ 6–7 ॥

**ಅನೇನ ಪ್ರದಕ್ಷಿಣ-ನಮಸ್ಕಾರ ಕರಣೇನ, ಭಗವಾನ್ ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣ ಪ್ರೀಯತಾಮ್ ॥**

[ಪುನಃ ತತ್ವನ್ಯಾಸ ಮಾತೃಕಾನ್ಯಾಸ ಮಾಡಿ – ಉದ್ಯದ್‌ಭಾಸ್ವತ್ ಎಂದು ಧ್ಯಾನ ಮಾಡಿ ಸಮಾಪನ ಮಾಡುವುದು]

। ಶ್ರೀ ಕೃಷ್ಣಾರ್ಪಣಮಸ್ತು ।

---

**ರಮಾಪತೇ** = ಲಕ್ಷ್ಮೀಪತಿಯೇ, **ಮಯಾ** = ನನ್ನಿಂದ, **ಮಂತ್ರಹೀನಂ** = ಮಂತ್ರ ಲೋಪವಾಗಿ, **ಕ್ರಿಯಾಹೀನಂ** = ಮಾಡಬೇಕಾದ ಕ್ರಿಯೆಯಲ್ಲಿ ಲೋಪ, **ಭಕ್ತಿಹೀನಂ** = ಭಕ್ತಿ ರಹಿತವಾಗಿ, **ಯತ್** = ಯಾವ ಪೂಜಾ ಕರ್ಮವು, **ಕೃತಂ** = ಮಾಡಲ್ಪಟ್ಟಿತ್ತೋ, **ತತ್ ಸರ್ವಂ** = ಆ ಎಲ್ಲಾ ಲೋಪಗಳನ್ನು, **ದೇವ** = ಕ್ರೀಡಾ ಸ್ವಭಾವವುಳ್ಳವನೇ, **ತತ್** = ಅದು, **ಮೇ** = ನನಗೆ, **ಪರಿಪೂರ್ಣಂ** = ಪೂರ್ಣಫಲವುಳ್ಳದ್ದಾಗಿ, **ಅಸ್ತು** = ಆಗಲಿ, **ಅನೇನ** = ಈ, **ಪ್ರದಕ್ಷಿಣ ನಮಸ್ಕಾರ ಕರಣೇನ** = ಪ್ರದಕ್ಷಿಣ ನಮಸ್ಕಾರಾದಿಗಳಿಂದ, **ಭಗವಾನ್** = ಷಡ್ಗುಣ ಸಂಪನ್ನನಾದ, **ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ** = ಭಾರತೀರಮಣನಿಗೂ ಅಂತರ್ನಿಯಾಮಕನಾದ, **ಶ್ರೀಲಕ್ಷ್ಮೀನಾರಾಯಣಃ** = ಶ್ರೀ ಲಕ್ಷ್ಮೀನಾರಾಯಣನು, **ಪ್ರಿಯತಾಂ** = ಪ್ರೀತನಾಗಲಿ ॥ 8 ॥

## 58. ಪ್ರತ್ಯಾವಾಹನಮ್ :41

**ಮೂಲಮಂತ್ರಂ ಅಷ್ಟವಾರಂ ಜಪ್ತ್ವಾ, ಮಾತೃಕಾನ್ಯಾಸತತ್ವ ನ್ಯಾಸೌ ವ್ಯುತ್ಕ್ರಮೇಣ ಕೃತ್ವಾ 'ಉದ್ಯತ್ ಭಾಸ್ವತ್' "ಆತ್ಮಾ ದೇವಾನಾಂ ಭುವನಸ್ಯ" ಇತಿ ಮಂತ್ರಂ ಪಠಿತ್ವಾ ಅವಗುಂಠನಾದಿ ಷಣ್ಮುದ್ರಾ ವ್ಯುತ್ಕ್ರಮೇಣ ದರ್ಶಯಿತ್ವಾ ಏಹ್ಯೇಹಿ ಪ್ರತಿಮಾಸ್ಥಿತ ಶ್ರೀಪುರುಷೋತ್ತಮ, ಪ್ರಸೀದ ಪ್ರಸೀದ ಇತಿ ಸಂಪ್ರಾರ್ಥ್ಯ.**

---

58. **ಪ್ರತ್ಯಾವಾಹನ ಮಂತ್ರಾರ್ಥ : ಅಷ್ಟವಾರಂ** = ಎಂಟು ಬಾರಿ, **ಮೂಲಮಂತ್ರ** = ಮೂಲಮಂತ್ರವಾದ ಅಷ್ಟಾಕ್ಷರಿಯನ್ನು, **ಜಪ್ತ್ವಾ** = ಜಪಿಸಿ, **ಮಾತೃಕಾನ್ಯಾಸ, ತತ್ವನ್ಯಾಸೌ** = ಮಾತೃಕಾನ್ಯಾಸ ಮೊದಲು ತತ್ವನ್ಯಾಸ ನಂತರ, **ವ್ಯುತ್ಕ್ರಮೇಣ** = ಆವಾಹನೆ ಕ್ರಮದ ಭಿನ್ನ ಕ್ರಮದಿಂದ, **ಕೃತ್ವಾ** = ಮಾಡಿ, **ಉದ್ಯತ್ ಭಾಸ್ವತ್** = ಈ ಮಂತ್ರಾರ್ಥವನ್ನು, **ಆತ್ಮಾ ದೇವಾನಾಂ** = ಈ ಮಂತ್ರವನ್ನೂ, **ಪಠಿತ್ವಾ** = ಪಠಿಸಿ, **ಅವಗುಂಠನಾದಿ ಷಣ್ಮುದ್ರಾಃ** = ಅವಗುಂಠಿತೋಭವ, ಸಮ್ಮುಖೋಭವ, ಸನ್ನಿರುದ್ಧೋಭವ, ಸನ್ನಹಿತೋಭವ, ಸಂಸ್ಥಾಪಿತೋಭವ, ಆವಾಹಿತೋಭವ ಹೀಗೆ, **ವ್ಯುತ್ಕ್ರಮೇಣ** = ಆವಾಹನೆಯಲ್ಲಿ ತೋರಿಸಿದ ಕ್ರಮಕ್ಕಿಂತ ವಿಲೋಮ ಕ್ರಮದಲ್ಲಿ, **ಷಣ್ಮುದ್ರಾಃ** = ಆರು ಮುದ್ರೆಗಳನ್ನು, **ದರ್ಶಯಿತ್ವಾ** = ತೋರಿಸಿ, **ಪ್ರತಿಮಾಂತಸ್ಥಿತ** = ಪ್ರತಿಮೆಯಲ್ಲಿರುವ, **ಪುರುಷೋತ್ತಮ** = ಪುರುಷೋತ್ತಮನೇ, **ಪ್ರಸೀದ ಪ್ರಸೀದ** = ಪ್ರಸನ್ನನಾಗು, **ಪುನಃ ಏಹ್ಯೇಹಿ** = ನನ್ನ ಹೃದಯಕ್ಕೆ ಬಂದು ನೆಲೆಸು, **ಇತಿ** = ಹೀಗೆ, **ಸಂಪ್ರಾರ್ಥ್ಯ** = ಪ್ರಾರ್ಥಿಸಿ,

---

41. **ಪುನರ್ಧ್ಯಾತ್ವಾ ಹರಿಂ ದೇವಮಾತ್ಮಾದೇವೇ ತು ಚ ಪಠೇತ್ ।**
**ತತಃ ಆವಾಹನೀಂಮುದ್ರಾಂ ವ್ಯುತ್ಕ್ರಮೇಣ ವಿಧಾಯ ಚ ।**
**ಏಹ್ಯೇಹಿತಿ ಪುನಃ ಪ್ರೋಚ್ಯ ಪುನರಾವಾಹಯೇದ್ ಹೃದಿ ॥**

ಎಂಬ ಪದ್ಯಮಾಲಾ ಹೇಳಿದಂತೆ, ರಮಾ, ಪ್ರಾಣದೇವರು, ಗುರುಗಳು ಇವರ ಪೂಜಾ ಸಮಾಪ್ತಿಯ ನಂತರ, ಪುಷ್ಪ ಏರಿಸಿ ನಮಸ್ಕರಿಸಿ, ಮೂಲಮಂತ್ರವನ್ನು ಯಥಾಶಕ್ತಿ ಜಪಿಸಿ, ಮಾತೃಕಾನ್ಯಾಸ ಮೊದಲು, ನಂತರ ತತ್ವನ್ಯಾಸಗಳನ್ನು ಮಾಡಿ, **'ಉದ್ಯದ್ ಭಾಸ್ವತ್'** ಮಂತ್ರವನ್ನು **"ಆತ್ಮದೇವಾನಾಂ"** ಎಂಬ ಋಙ್ಮಂತ್ರವನ್ನು, ಅವಕುಂಠನಾದಿ ಷಣ್ಮುದ್ರೆಗಳನ್ನು ತೋರಿಸಿ ಕೈಯಲ್ಲಿ ತುಲಸಿ-ಪುಷ್ಪಗಳನ್ನು ಹಿಡಿದುಕೊಂಡು ದೇವರಿಗೆ ಮುಟ್ಟಿಸಿ, **'ಏಹ್ಯೇಹಿ ಪ್ರತಿಮಾಂತಸ್ಥಿತ ಪುರುಷೋತ್ತಮ, ಪ್ರಸೀದ'** ಎಂದು ಹೇಳಿ **'ಯಾಹೀಃಹಂತ್ವಾಂ'** ಎಂಬ ಮಂತ್ರದಿಂದ ಭಗವಂತನನ್ನು ಪ್ರಾರ್ಥಿಸಿ, **'ಭಗವಾನ್ ಆಗಚ್ಛಾಗಚ್ಛ'** ಎಂದು ಹೇಳಿ. **'ಭಗವಂತಂ ಸಶ್ರೀಕಂ ಸಪರಿವಾರಂ ಲಕ್ಷ್ಮೀನಾರಾಯಣಂ ಮಮ ಹೃತ್ಕಮಾಲೇ ಪೂರ್ವವತ್ ಪ್ರತ್ಯಾವಾಹಯಾಮಿ'** ಎಂದು ಹೇಳುತ್ತಾ, ಪ್ರತಿಮೆಯಲ್ಲಿರುವ ಭಗವಂತ ತನ್ನ ಕೈಯಲ್ಲಿರುವ ಪುಷ್ಪದಲ್ಲಿ

**ಯಾಚೇऽಹಂ ತ್ವಾಂ ಹೃಷಿಕೇಶ ನಮಾಮಿ ಪುರುಷೋತ್ತಮ ।**
**ಹೃದಿ ಮೇ ಕುರು ಸಂವಾಸಂ ಶ್ರಿಯಾ ಸಹ ಜಗತ್ಪತೇ ॥**

**ಭಗವನ್ ಆಗಚ್ಛಾಗಚ್ಛ, ಭಗವಂತಂ ಸಶ್ರೀಕಂ ಸಪರಿವಾರಂ ಶ್ರೀ ಲಕ್ಷ್ಮೀನಾರಾಯಣಂ ಮಮ ಹೃತ್ಕಮಲೇ ಪೂರ್ವವತ್ ಉದ್ವಾಸಯಾಮಿ ॥**

**ಇತಿ ಸಂಪ್ರಾರ್ಥ್ಯ ಅಂಜಲಿಸ್ಥಂ ತುಲಸೀಪುಷ್ಪಾದಿಕಂ**
**ಸ್ವಹೃದಯಮಾನೀಯ, ವಾಮನಾಸಾ ಪುಟೇನ**
**ಸುಷುಮ್ನಾದ್ವಾರಾ ಹೃದಯೇ ಸ್ಥಾಪಯೇತ್ ॥**

---

**ಹೇ ಹೃಷಿಕೇಶ** = ಇಂದ್ರಿಯ ನಿಯಾಮಾಕನೆ, **ಪುರುಷೋತ್ತಮ** = ಪುರುಷ ಶ್ರೇಷ್ಠನೆ, **ನಮಾಮಿ** = ನಿನಗೆ ನನ್ನ ನಮಸ್ಕಾರವು, **ಹೇ ಜಗತ್ಪತೇ** = ಜಗನ್ನಾಥನೇ, **ತ್ವಂ** = ನೀನು, **ಶ್ರಿಯಾ ಸಹ** = ಲಕ್ಷ್ಮೀಯಿಂದ ಜೊತೆಗೂಡಿ, **ಮೇ** = ನನ್ನ, **ಹೃದಿ** = ಹೃದಯದಲ್ಲಿ, **ಸಂವಾಸಂ** = ವಾಸ ಮಾಡುವವನಾಗು,

**ಇತಿ** = ಹೀಗೆ, **ಅಹಂ** = ನಾನು, **ತ್ವಾಂ** = ನಿನ್ನನ್ನು, **ಯಾಚೇ** = ಬೇಡುತ್ತೇನೆ, **ಹೇ ಮಘವನ್** = ಸ್ವಾಮಿಯೇ, **ಆಗಚ್ಛ, ಆಗಚ್ಛ** = ನನ್ನ ಸಮೀಪಕ್ಕೆ ಬಾ, **ಭಗವಂತಂ** = ಪೂಜ್ಯನಾದ, **ಸಶ್ರೀಕಂ** = ಲಕ್ಷ್ಮೀದೇವಿಯಿಂದ ಸಹ, **ಶ್ರೀಲಕ್ಷ್ಮೀನಾರಾಯಣಂ** = ಲಕ್ಷ್ಮೀನಾರಾಯಣನನ್ನು, **ಮಮ** = ನನ್ನ, **ಹೃತ್ಕಮಲೇ** = ಹೃದಯಕಮಲದಲ್ಲಿ, **ಪೂರ್ವವತ್** = ಹಿಂದೆ ಪ್ರತಿಮೆಯಲ್ಲಿ ಆವಾಹಿಸಿದಂತೆಯೇ, **ಉದ್ವಾಸಯಾಮಿ** = ಮೊದಲಿನಂತೆಯೇ ಸ್ಥಾಪಿಸುತ್ತೇನೆ.

**ಇತಿ** = ಹೀಗೆ, **ಸಂಪ್ರಾರ್ಥ್ಯ** = ಪ್ರಾರ್ಥಿಸಿ, **ಅಂಜಲಿಸ್ಥಂ** = ಬೊಗಸೆಯಲ್ಲಿದ್ದ, **ತುಲಸೀ-ಪುಷ್ಪಾದಿಕಂ** = ತುಲಸಿ ಹಾಗೂ ಪುಷ್ಪಾದಿಗಳನ್ನು, **ಸ್ವಹೃದಯಂ** = ಪೂಜಕನು ತನ್ನ ಹೃದಯದ ಕಡೆ, **ಆನೀಯ** = ತಂದು, **ವಾಮನಾಸಾಪುಟೇನ** = ಮೂಗಿನ ಎಡ ಹೊರಳೆಯಿಂದ, **ಸುಷುಮ್ನಾದ್ವಾರಾ** = ಸುಷುಮ್ನಾನಾಡಿಯ ಮೂಲಕ, **ಹೃದಯೇ** = ಹೃದಯದಲ್ಲಿ, **ಸ್ಥಾಪಯೇತ್** = ಪ್ರತಿಷ್ಠಿತನಾದನೆಂದು ತಿಳಿಯಬೇಕು.

---

ಆಗಮಿಸಿದ್ದಾನೆಂದು ಅನುಸಂಧಾನಿಸಿ, ಎಡಮೂಗಿನ ಹೊರಳೆಯಿಂದ ಮೂಸಿ, ಸುಷುಮ್ನಾ ಮಾರ್ಗದಿಂದ ತನ್ನ ಹೃದಯದಲ್ಲಿ ಮೊದಲಿನಂತೆ ನೆಲೆಸಿರುವನೆಂದು ತಿಳಿಯಬೇಕು. ಆ ಪುಷ್ಪವನ್ನು ಮೂಸಿ ಪಾತ್ರೆಯಲ್ಲಿ ಹಾಕಬೇಕು.

## 59. ಗುರುಪೂಜಾ – ಸಂಕಲ್ಪ :[42]

**ಶುಭತಿಥೌ – ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ಲಕ್ಷ್ಮೀನಾರಾಯಣ ಪ್ರೇರಣಯಾ, ಶ್ರೀ ಲಕ್ಷ್ಮೀ ನಾರಾಯಣ ಪ್ರೀತ್ಯರ್ಥಂ ಗುರು ಪೂಜಾಂ ಕರಿಷ್ಯಮಾಣಃ, ಆದೌ ಗುರು ಪಾದ ಪ್ರಕ್ಷಾಲನಾಖ್ಯಂ ಕರ್ಮ ಕರಿಷ್ಯೇ ।**

**ಶ್ರೀ ಮದಾನಂದತೀರ್ಥ ಗುರ್ವಂತರ್ಗತ ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಸೀತಾಪತೇ ಶ್ರೀರಾಮಚಂದ್ರಾಯ ನಮಃ । ಇದಂ ತೇ ಪಾದ್ಯಂ। ಸುಪಾದ್ಯಂ, ಸುಪಾದ್ಯಂ ।**

---

59. **ಶುಭತಿಥೌ** = ಶುಭವಾದ ನಕ್ಷತ್ರವಾರ ತಿಥಿಗಳಲ್ಲಿ, ಶ್ರೀ ಭಾರತೀರಮಣ ಮುಖ್ಯ ಪ್ರಾಣನ ಅಂತರ್ಗತನಾಗಿ ನಿಯಾಮಕನಾಗಿರುವ ಲಕ್ಷ್ಮೀನಾರಾಯಣನ ಪ್ರೇರಣೆಯಿಂದ ಹಾಗೂ ಅವನ ಪ್ರೀತ್ಯರ್ಥವಾಗಿ, ಗುರುಪೂಜೆಯನ್ನು ಮಾಡುವ ಮೊದಲು ಗುರುಗಳ ಪಾದ ಪ್ರಕ್ಷಾಲನೆಯನ್ನು ಮಾಡುವೆ.

ಶ್ರೀ ಮದಾನಂದತೀರ್ಥ ಗುರ್ವಂತರ್ಗತನಾದ ಶ್ರೀ ಭಾರತೀರಮಣ ಮುಖ್ಯಪ್ರಾಣನಿಗೂ ಅಂತರ್ಗತನಾದ, ಸೀತಾಪತಿಯಾದ ಶ್ರೀರಾಮಚಂದ್ರನಿಗೆ ನಮಸ್ಕಾರ, ನಿನ್ನ ಪಾದ ತೊಳೆಯಲು ನೀರನ್ನು ಸ್ವೀಕರಿಸು ಎಂದು ನೀರನ್ನು ತಟ್ಟೆಯಲ್ಲಿ ಬಿಡಬೇಕು.

---

42. ಗುರು ಪೂಜೆ ಹಾಗೂ ಹಸ್ತೋದಕವನ್ನು, ವೈಶ್ವದೇವವನ್ನು ಮಾಡಿದ ನಂತರ ಮಾಡುವುದು. ಟೀಕಾಚಾರ್ಯರು, ಬ್ರಹ್ಮಣ್ಯತೀರ್ಥರು, ಶ್ರೀಪಾದರಾಜರು, ವ್ಯಾಸರಾಜರು, ವಾದಿರಾಜರು, ರಘೂತ್ತಮರು, ರಾಘವೇಂದ್ರರು ಇವರ ಬೃಂದಾವನಗಳಿಗೆ ಆಯಾಯ ಗುರುಗಳ ಚರಮ ಶ್ಲೋಕಗಳನ್ನು ಹೇಳುತ್ತಾ ಅಭಿಷೇಕ ಮಾಡಬೇಕು. ಪ್ರತ್ಯೇಕ ಪ್ರತ್ಯೇಕವಾಗಿ ನೈವೇದ್ಯಗಳನ್ನು ತಟ್ಟೆಯಲ್ಲಿಟ್ಟು, ತಾರತಮ್ಯಾನುಸಾರವಾಗಿ ಗಾಯಿತ್ರಿಯಿಂದ ನೈವೇದ್ಯ ಪ್ರೋಕ್ಷಿಸಿ, ಪರಿಷೇಚನ ಮಾಡಿ ತೀರ್ಥವನ್ನು ಹಾಕಿ, ತುಲಸೀಯನ್ನರ್ಪಿಸಿ, ವೃಂದಾವನಗಳಿಗೂ ತೀರ್ಥ ನೀಡಿ, ಗಂಧಾಕ್ಷತೆಗಳನ್ನರ್ಪಿಸಬೇಕು.

**ಕ್ರಮ** : ಒಂದು ತಟ್ಟೆಯಲ್ಲಿ ನಾಲ್ಕು ಮೂಲೆಗಳಲ್ಲಿ ಹಾಗೂ ಮಧ್ಯದಲ್ಲಿ ಮಂತ್ರಾಕ್ಷತೆ ಇಟ್ಟು '**ಗುರುಪಾದ ಪ್ರಕ್ಷಾಲನಾಖ್ಯಂ ಕರ್ಮ ಕರಿಷ್ಯೇ**' ಎಂದು ಸಂಕಲ್ಪಿಸಿ, ಗುರುಪೂಜೆ ಮಾಡಿದ ನಂತರ ಅದನ್ನು ತಲೆಗೆ ಪ್ರೋಕ್ಷಿಸಿಕೊಂಡು ನಂತರ ಪಾದಪ್ರಕ್ಷಾಲನ ಮಾಡಬೇಕು.

## 60. ಪಾದಪ್ರಕ್ಷಾಲನ ಮಂತ್ರ :

ಅಸ್ಮಿನ್ ರಾಷ್ಟ್ರೇ ಶ್ರಿಯಮಾವೇಶಯಾಮಿ । ಅತೋ ದೇವೀಃ ಪ್ರತಿಪಶ್ಯಾಮ್ಯಾಪಃ । ದಕ್ಷಿಣಂ ಪಾದಮವನೇ ನಿಜೇಽಸ್ಮಿನ್ ರಾಷ್ಟ್ರ ಇಂದ್ರಿಯಂ ದಧಾಮಿ ॥ ೧ ॥

ಸವ್ಯಂ ಪಾದಮವನೇ ನಿಜೇಽಸ್ಮಿನ್ ರಾಷ್ಟ್ರ ಇಂದ್ರಿಯಂ ವರ್ಧಯಾಮಿ । ಪೂರ್ವ ಮನ್ಯಮಪರಮನ್ಯಂ ಪಾದಾವವನೇ ನಿಜೇ ॥ ೨ ॥

ದೇವಾ ರಾಷ್ಟ್ರಸ್ಯ ಗುಪ್ತ್ಯಾ ಅಭಯಸ್ಯಾವರುದ್ಧ್ಯೈ । ಆಪಃ ಪಾದಾವನೇ ಜನೀಃ ದ್ವಿಷಂತಂ ನಿರ್ದಹಂತು ಮೇ ॥ ೩ ॥

(ಇತಿ ಗುರು ಪಾದ ಪ್ರಕ್ಷಾಲನಂ)

---

60. ಪಾದಪ್ರಕ್ಷಾಲ ಮಂತ್ರಾರ್ಥ : ಅಸ್ಮಿನ್ = ಈ, ರಾಷ್ಟ್ರೇ = ರಾಷ್ಟ್ರದಲ್ಲಿ, ಶ್ರೀಯಂ = ಲಕ್ಷ್ಮೀದೇವಿಯನ್ನು, ಆವೇಶಯಾಮಿ = ಪ್ರವೇಶವಾಗಲು ಇಚ್ಛಿಸುವೆ, ಅತಃ = ಆದ್ದರಿಂದಲೇ, ದೇವೀಃ = ದೇವತಾ ಸನ್ನಿಧಾನವುಳ್ಳ, ಆಪಃ = ಜಲವನ್ನು, ಪ್ರತಿಪಶ್ಯಾಮಿ = ಎದುರು ನೋಡುತ್ತೇನೆ, ದಕ್ಷಿಣಪಾದಂ = ಬಲಗಾಲನ್ನು, ಅವನೇನಿಜೇ = ತೊಳೆದು, ಅಸ್ಮಿನ್ = ಈ, ರಾಷ್ಟ್ರೇ = ದೇಶದಲ್ಲಿ ಹಾಗೂ ದೇಹದಲ್ಲಿ, ಇಂದ್ರಿಯಂ = ಸಂಪತ್ತು ಹಾಗೂ ಇಂದ್ರಿಯ ಪಾಟವ ಶಕ್ತಿಯನ್ನುಂಟು ಮಾಡಲು, ದಧಾಮಿ = ತೊಳೆದ ನೀರನ್ನು ಧರಿಸುತ್ತೇನೆ,
ಸವ್ಯಪಾದಂ = ಎಡಗಾಲನ್ನು, ಅವನೇನಿಜೇ = ತೊಳೆಯುತ್ತಿರಲು, ಅಸ್ಮಿನ್ ರಾಷ್ಟ್ರೇ = ಈ ರಾಷ್ಟ್ರ ಹಾಗೂ ದೇಹದಲ್ಲಿ, ಇಂದ್ರಿಯಂ = ಸಂಪತ್ತನ್ನು ಹಾಗೂ ಇಂದ್ರಿಯ ಶಕ್ತಿಯನ್ನು, ವರ್ಧಯಾಮಿ = ಹೆಚ್ಚಿಸಿಕೊಳ್ಳುವೆನು, ಪೂರ್ವಂ ಅನ್ಯಂ = ಒಂದು ಕಾಲನ್ನು ಮೊದಲೂ, ಅಪರಂ ಅನ್ಯಂ = ಇನ್ನೊಂದು ಕಾಲನ್ನು ಅನಂತರ, ಪಾದೌ = ಎರಡೂ ಪಾದಗಳನ್ನು, ಅವನೇ ನಿಜೇ = ತೊಳೆಯುತ್ತಿರಲು,
ದೇವಾಃ = ದೇವತೆಗಳು, ರಾಷ್ಟ್ರಸ್ಯ = ದೇಶದ, ಗುಪ್ತ್ಯಾ = ರಕ್ಷಣೆಯಿಂದ,

## 61. ಗುರುಪೂಜಾ :

**ಬ್ರಹ್ಮಾಂತಾಃ ಗುರವಃ ಸಾಕ್ಷಾತ್ ಇಷ್ಟಂ ದೈವಂ ಶ್ರಿಯಃ ಪತಿಃ ।**
**ಆಚಾರ್ಯಾಃ ಶ್ರೀ ಮದಾಚಾರ್ಯಾಃ ಸಂತು ಮೇ ಜನ್ಮ ಜನ್ಮನೀ ।**

**ಗುರ್ವಂತರ್ಯಾಮಿ ಶ್ರೀ ಸೀತಾಪತಿ ಶ್ರೀ ರಾಮಚಂದ್ರಾಯ ನಮಃ ಗಂಧಾದಿ ಸಕಲಾರಾಧನೈಃ ಶೋಭನಮಸ್ತು ॥**

**ಶಂಖೋದಕಂ ದತ್ವಾ, ತೀರ್ಥಗಂಧಾಕ್ಷತಾಂಗಾರಾನ್, ತುಲಸೀ ಪುಷ್ಪೈಶ್ಚ ಸಂಪೂಜಯೇತ್ ।**

---

**ಅಭಯಸ್ಯ** = ಅಭಯಕ್ಕಾಗಿ, **ಅವರುದ್ಧ್ಯೈ** = ಶತ್ರುಗಳ ತಡೆಗಾಗಿಯೂ, **ಭವತು** = ಆಗಲಿ, **ಪಾದಾವನೇ ಜನೀಃ** = ಪಾದವನ್ನು ತೊಳೆದ, **ಆಪಃ** = ನೀರು, **ಮೇ** = ನನ್ನನ್ನು, **ದ್ವಿಷಂತಂ** = ದ್ವೇಷಿಸುತ್ತಿರುವವರನ್ನು, **ನಿರ್ದಹಂತು** = ಸಮೂಲನಾಶ ಮಾಡಲಿ.

---

**61. ಗುರುಪೂಜಾ ಮಂತ್ರದ ಅರ್ಥ :**

**ಬ್ರಹ್ಮಾಂತಾಃ** = ಬ್ರಹ್ಮನವರೆಗೂ ಇರುವ ವಿಷ್ಣು ಭಕ್ತರೆಲ್ಲರೂ, **ಸಾಕ್ಷಾತ್ ಗುರವಃ** = ನೇರವಾಗಿಯೇ ಗುರುಗಳು, **ಶ್ರಿಯಃ ಪತಿಃ** = ಲಕ್ಷ್ಮೀಪತಿಯಾದರೂ, **ಇಷ್ಟಂ ದೈವಂ** = ಇಷ್ಟ ದೇವತೆಯು, **ಆಚಾರ್ಯಾಃ** = ಶಾಸ್ತ್ರೋಪದೇಶಿಸಿದ ಆಚಾರ್ಯರು ಹಾಗೂ, **ಶ್ರೀಮದಾಚಾರ್ಯಾಃ** = ಶ್ರೀಮದಾಚಾರ್ಯರು, **ಮೇ** = ನನಗೆ, **ಜನ್ಮ ಜನ್ಮನಿ** = ಪ್ರತಿಜನ್ಮವಾದಾಗಲೂ, **ಸಂತು** = ಗುರುಗಳಾಗಿರಲಿ

**ಗುರ್ವಂತರ್ಯಾಮಿ ಶ್ರೀ ಸೀತಾಪತಿ ಶ್ರೀರಾಮಚಂದ್ರಾಯ ನಮಃ** = ಗುರ್ವಂತಯಾಮಿಯಾಗಿರುವ ಸೀತಾಪತಿ ಶ್ರೀರಾಮಚಂದ್ರನಿಗೆ ನಮಸ್ಕಾರವು.

**ಗಂಧಾದಿ ಸಕಲಾರಾಧನೈಃ** = ಗಂಧಾದಿ ಸಕಲೋಪಾಚಾರದಿಂದ, **ಶೋಭನಂ, ಅಸ್ತು** = ಮಂಗಳವಾಗಲಿ

**ಶಂಖೋದಕಂ** = ಶಂಖತೀರ್ಥವನ್ನು, **ದತ್ವಾ** = ಕೊಟ್ಟು, **ತೀರ್ಥಗಂಧಾಕ್ಷತಾನ್** = ತೀರ್ಥ, ಗಂಧ, ಅಕ್ಷತೆ, ಅಂಗಾರಗಳನ್ನು, **ತುಲಸೀ ಪುಷ್ಪೈಶ್ಚ** = ತುಲಸೀ ಪುಷ್ಪಗಳಿಂದಲೂ, **ಸಂಪೂಜಯೇತ್** = ಪೂಜಿಸುವುದು

## 62. ತ್ಯಕ್ತಮಂತ್ರಃ :

**ನೈವೇದ್ಯೋಪರಿ, ತೀರ್ಥಂ, ತುಲಸೀದಲಂ ಚ ನಿಕ್ಷಿಪ್ಯ ಪೃಥಿವೀ ತೇ ಪಾತ್ರಂ ಶ್ರೀ ವಿಷ್ಣೋ ಅನ್ನಂ ರಕ್ಷಸ್ವ।**

**ನಾನಾ ಪಾತ್ರೇಷು ಸ್ಥಿತಾನಿ ಅನ್ನಾನಿ ಪ್ರತ್ಯೇಕಂ ಪ್ರತ್ಯೇಕಂ ಗುರ್ವಂತಯಾಮಿ – ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀರಾಮಚಂದ್ರಾಯ ದತ್ತಂ ದಾಸ್ಯಮಾನಂ ಚ ಸ್ವಾಹಾ । ನ ಮಮ, ನ ಮಮ ।**

**ಏಕೋ ವಿಷ್ಣುರ್ಮಹದ್ ಭೂತಂ ಪೃಥಗ್ ಭೂತಾನ್ಯನೇಕಶಃ ।**
**ತ್ರೀನ್ ಲೋಕಾನ್ ವ್ಯಾಪ್ಯ ಭೂತಾತ್ಮಾ ಭುಂಕ್ತೇ ವಿಶ್ವಭುಗವ್ಯಯಃ ॥**

---

62. **ತ್ಯಕ್ತಮಂತ್ರಾರ್ಥಃ : ನೈವೈದ್ಯೋಪರಿ** = ನೈವೇದ್ಯದ ಮೇಲೆ, **ತೀರ್ಥಂ** = ತೀರ್ಥವನ್ನು, **ತುಲಸೀದಲಂ ಚ** = ತುಲಸೀದಲವನ್ನೂ, **ನಿಕ್ಷಿಪ್ಯ** = ಹಾಕಿ, **ತೇ** = ಭಗವಂತನೆ ನಿನಗೆ, **ಪೃಥಿವೀ** = ಪೃಥಿವಿಯೇ, **ಪಾತ್ರಂ** = ಎಲೆಯು, **ಶ್ರೀವಿಷ್ಣೋ** = ಲಕ್ಷ್ಮೀಪತಿಯಾದ ಶ್ರೀವಿಷ್ಣುವೆ, **ಅನ್ನಂ** = ಅನ್ನವನ್ನು, **ರಕ್ಷಸ್ವ** = ರಕ್ಷಿಸು, **ನಾನಾಪಾತ್ರೇಷು** = ಅನೇಕ ಭಿನ್ನ ಭಿನ್ನಪಾತ್ರೆಗಳಲ್ಲಿ (ತಟ್ಟೆಗಳಲ್ಲಿ), **ಸ್ಥಿತಾನಿ** = ಇರುವ, **ಅನ್ನಾನಿ** = ಅನ್ನಾದಿ ನೈವೇದ್ಯವು, **ಪ್ರತ್ಯೇಕಂ** = ಪ್ರತ್ಯೇಕ ಪ್ರತ್ಯೇಕವಾಗಿಟ್ಟಿರುವ ನೈವೇದ್ಯವು, **ಗುರ್ವಂತರ್ಯಾಮಿ** = ಗುರ್ವಂತರ್ಯಾಮಕನಾದ, **ಭಾರತೀರಮಣ ಮುಖ್ಯಪ್ರಾಣಾಂತರ್ಗತ** = ಮುಖ್ಯಪ್ರಾಣನ ಅಂತರ್ನಿಯಾಮಕನಾದ, ಶ್ರೀ ಲಕ್ಷ್ಮೀನಾರಾಯಣನಿಗೆ, **ದತ್ತಂ** = ಕೊಟ್ಟಿದ್ದು, **ದಾಸ್ಯಮಾನಂ** = ಮುಂದೆ ಕೊಡಲ್ಪಡುವ ನೈವೇದ್ಯವೂ, **ಸ್ವಾಹಾ** = ನಿನಗೆ ಅರ್ಪಿತವಾಗಲಿ, **ನ ಮಮ, ನ ಮಮ** = ಕೊಡಲ್ಪಟ್ಟ ವಸ್ತುವಿನ ಸ್ವಾಮ್ಯವು ತಮ್ಮದೇ, ನನ್ನದಲ್ಲ.

**ವಿಷ್ಣುಃ** = ವಿಷ್ಣುವು, **ಏಕಃ** = ಮುಖ್ಯವಾಗಿ, **ಮಹದ್ಭೂತಂ** = ಮಹಾಭೂತವೆನಿಸಿರುವನು, **ಭೂತಾನಿ** = ಜೀವಚೇತನರು, **ಅನೇಕಶಃ** = ವಿಧ ವಿಧವಾಗಿ, **ಪೃಥಕ್** = ಪ್ರತ್ಯೇಕವಾಗಿರುವರು, **ಅವ್ಯಯಃ** = ನಾಶರಹಿತನಾದ, **ಭೂತಾತ್ಮಾ** = ಸರ್ವಪ್ರಾಣಿಗಳಲ್ಲಿ ಅಂತರ್ಯಾಮಿ-ಯಾಗಿರುವ ಭಗವಂತನು, **ತ್ರೀನ್ ಲೋಕಾನ್** = ಮೂರು ಲೋಕಗಳನ್ನೂ ವ್ಯಾಪಿಸಿ, **ವಿಶ್ವಭುಕ್** = ಜಗತ್ತನ್ನೇ ಭಕ್ಷಿಸುವ ಭಗವಂತನು, **ಭುಂಕ್ತೇ** = ಭಕ್ತರ ಉದ್ಧಾರಕ್ಕಾಗಿ ಸಾರಭಾಗವನ್ನು ಸ್ವೀಕರಿಸುತ್ತಾನೆ.

## 63. ಹಸ್ತೋದಕ ಮಂತ್ರ :

ನೈವೇದ್ಯೋಪರಿ, ತೀರ್ಥಂ, ತುಲಸೀಂ ಚ ನಿಕ್ಷಿಪ್ಯ, ಗಾಯತ್ರ್ಯಾ ಪ್ರೋಕ್ಷ್ಯ, ಪರಿಷೇಚನಂ ಕೃತ್ವಾ,

ಯತಿ ಹಸ್ತೇ ಜಲಂ ದದ್ಯಾದ್ ಭೈಕ್ಷ್ಯಂ ದದ್ಯಾತ್ ಪುನರ್ಜಲಂ।
ತದನ್ನಂ ಮೇರುಣಾ ತುಲ್ಯಂ ತಜ್ಜಲಂ ಸಾಗರೋಪಮಂ॥

ವಟೌ ತು ಸಮದತ್ತಂ ಸ್ಯಾದ್ ಗೃಹಸ್ಥೇ ದ್ವಿಗುಣಂ ಭವೇತ್।
ವಾನಪ್ರಸ್ಥೇ ಶತಗುಣಂ ಯತೌ ದತ್ತಂ ಅನಂತಕಮ್॥

ಯತಿರ್ಯತ್ರ ಗೃಹೇ ಭುಂಕ್ತೇ ತತ್ರ ಭುಂಕ್ತೇ ಹರಿಃ ಸ್ವಯಂ।
ಹರಿರ್ಯತ್ರ ಗೃಹೇ ಭುಂಕ್ತೇ ತತ್ರ ಭುಂಕ್ತೇ ಜಗತ್ ತ್ರಯಂ॥

---

63. **ಹಸ್ತೋದಕ ಮಂತ್ರಾರ್ಥ** : **ನೈವೇದ್ಯೋಪರಿ** = ನೈವೇದ್ಯದ ಮೇಲೆ, **ತೀರ್ಥ** = ತೀರ್ಥವನ್ನು, **ತುಲಸೀದಲಂ** = ತುಲಸೀದಲವನ್ನೂ, **ನಿಕ್ಷಿಪ್ಯ** = ಹಾಕಿ, **ಗಾಯತ್ರಾ** = ಗಾಯತ್ರೀ ಮಂತ್ರದಿಂದ, **ಪ್ರೋಕ್ಷ್ಯ** = ಪ್ರೋಕ್ಷಿಸಿ, **ಪರಿಷೇಕಾದಿಕಂ** = ಪರಿಷೇಕವನ್ನು, **ಕೃತ್ವಾ** = ಮಾಡಿ,
**ಯತಿ ಹಸ್ತೇ** = ಯತಿಗಳ ಕೈಯಲ್ಲಿ, **ಜಲಂ ದದ್ಯಾತ್** = ನೀರನ್ನು ಹಾಕಬೇಕು, **ಪುನಃ** = ಅನಂತರ, **ಭೈಕ್ಷ್ಯಂ** = ಭಿಕ್ಷೆಯನ್ನು, **ದದ್ಯಾತ್** = ಹಾಕಬೇಕು, **ಪುನಃ** = ನಂತರ, **ಜಲಂ ದದ್ಯಾತ್** = ನೀರನ್ನು ಕೊಡಬೇಕು, **ತದನ್ನಂ** = ಭಿಕ್ಷೆಗಾಗಿ ನೀಡಿದ ಅನ್ನವು, **ಮೇರುಣಾ** = ಮೇರು ಪರ್ವತದಷ್ಟು ಭೋಜನ ಹಾಕಿದ್ದಕ್ಕೆ, **ತುಲ್ಯಂ** = ಸಮಾನವಾದ ಪುಣ್ಯಕ್ಕೆ ಕಾರಣವಾಗುತ್ತದೆ, **ತಜ್ಜಲಂ** = ಯತಿಗಾಗಿ ಹಾಕಿದ ನೀರಾದರೂ, **ಸಾಗರೋಪಮಂ** = ಸಾಗರದಷ್ಟು ನೀರನ್ನು ದಾನ ಮಾಡಿದ ಫಲವುಂಟು ಮಾಡುತ್ತದೆ
**ವಟೌ ತು** = ಬ್ರಹ್ಮಚಾರಿಗೆ, **ದತ್ತಂ** = ಭೋಜನ ಹಾಕಿದರೆ, **ಸಮದತ್ತಂ ಸ್ಯಾತ್** = ಸಮಸಮನಾಗಿ ಮಾತ್ರ ಫಲ ನೀಡುತ್ತದೆ. (ಒಂದು ಹಿಡಿ ಅನ್ನ ನೀಡಿದರೆ ಅದಕ್ಕೆ ಸಮನಾದ ಫಲವಷ್ಟೇ ಬರುತ್ತದೆ. ಜಾಸ್ತಿಯಿಲ್ಲ), **ಗೃಹಸ್ಥೇ** = ಗೃಹಸ್ಥನಲ್ಲಿ ನೀಡಿದರೆ, **ದ್ವಿಗುಣಂ ಭವೇತ್** = ವಟುವಿನಲ್ಲಿ ಅರ್ಪಿಸಿದ್ದಕ್ಕಿಂತಲೂ ಎರಡು ಪಟ್ಟು ಹೆಚ್ಚು ಪುಣ್ಯವು, **ಸ್ಯಾತ್** = ಬರುತ್ತದೆ, **ವಾನಪ್ರಸ್ಥೇ** = ವನಪ್ರಸ್ಥನಲ್ಲಿ ಅರ್ಪಿಸಿದರೆ, **ಶತಗುಣಂ** = ನೂರುಪಟ್ಟು ಹೆಚ್ಚು ಪುಣ್ಯವು, **ಯತೌ** = ಪರಮಹಂಸಾಶ್ರಮಿಯಲ್ಲಿ, **ದತ್ತಂ** = ಅರ್ಪಿಸಿದ್ದು, **ಅನಂತಕಂ** = ಅನಂತಮಡಿ ಫಲ ಲಭಿಸುತ್ತದೆ.
**ಯತಿಃ** = ಯತಿಯು, **ಯತ್ರಗೃಹೇ** = ಯಾರ ಮನೆಯಲ್ಲಿ, **ಭುಂಕ್ತೇ** = ಭಿಕ್ಷೆ

## 64. ತುಳಸೀ–ಗೋಗ್ರಾಸ–ಭಾಗೀರಥೀ ನೈವೇದ್ಯಃ :[43]

ಅನಂತರಂ ತುಲಸ್ಯಾ ತೀರ್ಥಾದಿಕಂ ದದ್ಯಾತ್ । ಹರಿನಿವೇದಿತ ನೈವೇದ್ಯಂ ಸಮರ್ಪಯಾಮಿ । ಶ್ರೀ ತುಲಸ್ಯೈ ನಮಃ । ಯನ್ಮೂಲೇ ಸರ್ವತೀರ್ಥಾನಿ ಯನ್ಮಧ್ಯೇ ಸರ್ವದೇವತಾಃ ।

ಭಾಗೀರಥ್ಯೈ ನಮಃ । ಹರಿನಿವೇದಿತ ನೈವೇದ್ಯಂ ಸಮರ್ಪಯಾಮಿ । ಪ್ರಾಣಾಯ ಸ್ವಾಹಾ – ಅಪಾನಾಯ ಸ್ವಾಹಾ – ವ್ಯಾನಾಯ ಸ್ವಾಹಾ – ಉದಾನಾಯ ಸ್ವಾಹಾ – ಸಮಾನಾಯ ಸ್ವಾಹಾ ।

ಗೋಗ್ರಾಸಃ : ಸುರಭಿರ್ವೈಷ್ಣವೀ ಮಾತಾ ನಿತ್ಯಂ ವಿಷ್ಣುಪದೇ ಸ್ಥಿತಾ ।
ಗೋಗ್ರಾಸಂ ತು ಮಯಾ ದತ್ತಂ ಸುರಭಿಃ ಪ್ರತಿಗೃಹ್ಯತಾಂ ॥

ಗವಾಂತರ್ಯಾಮಿ ಶ್ರೀಗೋಪಾಲಕೃಷ್ಣಃ ಪ್ರೀಯತಾಂ ॥

---

ಸ್ವೀಕರಿಸುವನೋ, **ತತ್ರ** = ಆ ಗೃಹದಲ್ಲಿ, **ಹರಿಃ** = ಹರಿಯು, **ಸ್ವಯಂ** = ತಾನೇ, **ಭುಂಕ್ತೇ** = ತಿನ್ನುವನು, **ಯತ್ರ ಗೃಹೇ** = ಯಾರ ಮನೆಯಲ್ಲಿ, **ಹರಿಃ** = ಹರಿಯು, **ಭುಂಕ್ತೇ** = ನೈವೇದ್ಯ ಸ್ವೀಕಾರ ಮಾಡುವನೋ, **ತತ್ರ** = ಆ ಮನೆಯಲ್ಲಿ, **ಜಗತ್ ತ್ರಯಂ** = ಮೂರು ಲೋಕವೇ, **ಭುಂಕ್ತೇ** = ತಿಂದಂತಾಗುತ್ತದೆ.

**64. ತುಲಸೀ ಗೋಗ್ರಾಸ ಮಂತ್ರಾರ್ಥ :**

**ತುಲಸ್ಯಾ** = ತುಲಸಿಗೆ, **ತೀರ್ಥಾದಿಕಂ** = ತೀರ್ಥನೈವೇದ್ಯಾದಿಗಳನ್ನು, **ದದ್ಯಾತ್** = ನೀಡಬೇಕು, **ಹರಿನಿವೇದಿತ ನೈವೇದ್ಯಂ** = ಶ್ರೀಹರಿಗೆ ಅರ್ಪಿಸಿದ ನೈವೇದ್ಯವನ್ನು, **ಸಮರ್ಪಯಾಮಿ** = ಅರ್ಪಿಸುತ್ತೇನೆ, ಶ್ರೀ ತುಲಸ್ಯೈ ನಮಃ ಎಂದು ಪ್ರಾರ್ಥಿಸಬೇಕು.

---

43. ಅನಂತರ ತುಲಸಿಗೆ ತೀರ್ಥಾದಿಗಳನ್ನು ಕೊಟ್ಟು, ಹರಿನಿವೇದಿತವಾದ ನೈವೇದ್ಯ ಸಮರ್ಪಿಸಬೇಕು. ತುಲಸಿಯ ನಂತರ ಭಾಗೀರಥಿಗೆ ನೈವೇದ್ಯ ಮಾಡಬೇಕು. ನಂತರ ಗೋಗ್ರಾಸಕ್ಕಾಗಿ ಅನ್ನಾದಿಗಳನ್ನು ತೆಗೆದಿಟ್ಟು ಗವಾಂತರ್ಯಾಮಿ ಶ್ರೀಗೋಪಾಲಕೃಷ್ಣನು ಪ್ರೀತನಾಗಲೆಂದು ಹಿಂಡಿ, ಬೂಸ, ಹತ್ತಿ ಬೀಜಗಳನ್ನು ಸೇರಿಸಿ ಗೋವಿಗೆ ಇಡಬೇಕು.

## 65. ಪೂಜಾಸಮಾಪನಮ್ :[44]

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾ ಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಂ ॥

ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ॥
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥

ಅನೇನ ತಂತ್ರ ಸಾರೋಕ್ತ ಪ್ರಕಾರೇಣ ಯಥಾಶಕ್ತಿ ಧ್ಯಾನಾವಾಹನಾದಿ ಪೂಜಾ ಕರ್ಮಣಾ ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ಲಕ್ಷ್ಮೀನಾರಾಯಣಃ ಪ್ರೀಯತಾಮ್ । ಪ್ರೀತೋ ವರದೋ ಭವತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

---

**66. ಪೂಜಾ ಸಮಪಾನ ಮಂತ್ರಾರ್ಥ :**

**ಯಸ್ಯ** = ಯಾವ ಭಗವಂತನ, **ಸ್ಮೃತ್ಯಾ** = ಸ್ಮರಣ ಮಾತ್ರದಿಂದ, **ನಾಮೋಕ್ತ್ಯಾ** = ನಾಮೋಚ್ಚಾರಣ ಮಾತ್ರದಿಂದಲೂ, **ತಪಃ** = ತಪಸ್ಸು, **ಪೂಜಾ** = ದೇವತಾರ್ಚನೆಯೇ ಮೊದಲಾದ, **ಕ್ರಿಯಾದಿಷು** = ಕ್ರಿಯೆಗಳು, **ನ್ಯೂನಂ** = ನಿಶ್ಚಯವಾಗಿಯೂ, **ಸದ್ಯಃ** = ಕೂಡಲೇ, **ಸಂಪೂರ್ಣತಾಂ ಯಾತಿ** = ನಿರ್ವಿಘ್ನವಾಗಿ ಪೂರ್ಣವಾಗುವುವೋ, **ತಂ** = ಅಂತಹ, **ಅಚ್ಯುತಂ** = ಅಚ್ಯುತನನ್ನು, **ವಂದೇ** = ನಮಸ್ಕರಿಸುತ್ತೇನೆ.

**ಅನೇನ** = ಈ, ತಂತ್ರಸಾರೋಕ್ತ, **ಪ್ರಕಾರೇಣ** = ತಂತ್ರಸಾರದಲ್ಲಿ ಬಿತ್ತರಿಸಿದ ರೀತಿಯಲ್ಲಿ, **ಯಥಾಶಕ್ತಿ** = ಯೋಗ್ಯತಾನುಸಾರವಾಗಿ ಮಾಡಿದ, **ಧ್ಯಾನಾವಾಹನಾದಿ ಪೂಜಾಕರ್ಮಣಾ** = ಧ್ಯಾನ ಮೊದಲಾದ ಹದಿನಾರು ಪೂಜೆಯನ್ನು ಮಾಡಿದ್ದರಿಂದ, **ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ** = ಭಾರತೀಪತಿಯಾದ ಮುಖ್ಯಪ್ರಾಣಾಂತರ್ಯಾಮಿಯಾದ, **ಶ್ರೀಲಕ್ಷ್ಮೀನಾರಾಯಣಃ** = ಶ್ರೀಲಕ್ಷ್ಮೀಪತಿಯು, **ಪ್ರೀಯತಾಂ** = ಪ್ರೀತನಾಗಲಿ, **ವರದಃ ಪ್ರೀತೋಭವತು** = ವರದಾತೃವಾದ ನಾರಾಯಣನು ಸುಪ್ರೀತನಾಗಲಿ.

---

44. ಪೂಜೆಯನ್ನು ಮುಗಿಸಿ ದೇವರ ಪೆಟ್ಟಿಗೆಯನ್ನು ಕಟ್ಟುವಾಗ ಮನ್ಯುಸೂಕ್ತವನ್ನು ಹೇಳಬೇಕು.
ರಾತ್ರಿ ಪೂಜೆಯಲ್ಲಿ ಪ್ರತಿಮೆಗಳನ್ನು ಸ್ಪರ್ಶಿಸಬಾರದು. ಸಾಲಿಗ್ರಾಮವು ಪ್ರತ್ಯೇಕವಾಗಿರಿಸಿದ್ದರೆ ಸ್ಪರ್ಶಿಸಿದರೆ ದೋಷವಿಲ್ಲ.
ಪ್ರತಿಮಾಂ ನ ಸ್ಪೃಶೇದ್ ವಿದ್ವಾನ್ ಸಾಲಿಗ್ರಾಮಂ ತು ಸಂಸ್ಪೃಶೇತ್ ।
ಆವಾಹನಾದಿಕಂ ಕೃತ್ವ ಸ್ನಾನಾರ್ಥಂ ಪ್ರೋಕ್ಷಯೇದ್ ಹರಿಂ ॥

# ವಿಭಾಗ - 2
# ಸಂಕ್ಷಿಪ್ತ ದೇವಪೂಜಾ

### 1. ಆಚಮನ :

1. ಓಂ ಕೇಶವಾಯ ಸ್ವಾಹಾ
2. ಓಂ ನಾರಾಯಣಾಯ ಸ್ವಾಹಾ
3. ಓಂ ಮಾಧವಾಯ ಸ್ವಾಹಾ
4. ಓಂ ಗೋವಿಂದಾಯ ನಮಃ
5. ಓಂ ವಿಷ್ಣವೇ ನಮಃ
6. ಓಂ ಮಧುಸೂದನಾಯ ನಮಃ
7. ಓಂ ತ್ರಿವಿಕ್ರಮಾಯ ನಮಃ
8. ಓಂ ವಾಮನಾಯ ನಮಃ
9. ಓಂ ಶ್ರೀಧರಾಯ ನಮಃ
10. ಓಂ ಹೃಷಿಕೇಶಾಯ ನಮಃ
11. ಓಂ ಪದ್ಮನಾಭಾಯ ನಮಃ
12. ಓಂ ದಾಮೋದರಾಯ ನಮಃ
13. ಓಂ ಸಂಕರ್ಷಣಾಯ ನಮಃ
14. ಓಂ ವಾಸುದೇವಾಯ ನಮಃ
15. ಓಂ ಪ್ರದ್ಯುಮ್ನಾಯ ನಮಃ
16. ಓಂ ಅನಿರುದ್ಧಾಯ ನಮಃ
17. ಓಂ ಪುರುಷೋತ್ತಮಾಯ ನಮಃ
18. ಓಂ ಅಧೋಕ್ಷಜಾಯ ನಮಃ
19. ಓಂ ನಾರಸಿಂಹಾಯ ನಮಃ
20. ಓಂ ಅಚ್ಯುತಾಯ ನಮಃ
21. ಓಂ ಜನಾರ್ದನಾಯ ನಮಃ
22. ಓಂ ಉಪೇಂದ್ರಾಯ ನಮಃ
23. ಓಂ ಹರಯೇ ನಮಃ
24. ಓಂ ಶ್ರೀ ಕೃಷ್ಣಾಯ ನಮಃ

### 2. ಪ್ರಾಣಾಯಾಮ :

**ಓಂ ಪ್ರಣವಸ್ಯ ಪರಬ್ರಹ್ಮಋಷಿಃ । ಪರಮಾತ್ಮಾ ದೇವತಾ ।**
**ದೈವೀ ಗಾಯತ್ರೀಛಂದಃ । ಪ್ರಾಣಾಯಾಮೇ ವಿನಿಯೋಗಃ ॥**

**ಓಂ ಭೂಃ । ಓಂ ಭುವಃ । ಓಂ ಸ್ವಃ । ಓಂ ಮಹಃ । ಓಂ ಜನಃ ।**
**ಓಂ ತಪಃ । ಓಂ ಸತ್ಯಮ್ । ಓಂ ತತ್ಸವಿತುರ್ವರೇಣ್ಯಂ ಭರ್ಗೋ**
**ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥**

**ಓವಮಾ ಪೋ ಜ್ಯೋತೀರಸೋsಮೃತಂ ಬ್ರಹ್ಮ ಭೂರ್ಭುವಸ್ವರೋಮ್ ॥**

## 3. ಸಂಕಲ್ಪ :

ಶುಭೇ–ಶೋಭನೇ ಮುಹೂರ್ತೇ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯ ಬ್ರಹ್ಮಣಃ ದ್ವಿತೀಯ ಪರಾರ್ಧೇ, ಶ್ರೀಶ್ವೇತವರಾಹಕಲ್ಪೇ, ವೈವಸ್ವತಮನ್ವಂತರೇ, ಅಷ್ಟಾವಿಂಶತಿತಮೇ, ಕಲಿಯುಗೇ, ಪ್ರಥಮಪಾದೇ, ಜಂಬೂದ್ವೀಪೇ, ಭರತವರ್ಷೇ, ಭರತಖಂಡೇ, ದಂಡಕಾರಣ್ಯೇ, ಗೋದಾವರ್ಯಾಃ, ದಕ್ಷಿಣೇತೀರೇ, ಶಾಲೀವಾಹನಶಕೇ, ಬೌದ್ಧಾವತಾರೇ, ರಾಮಕ್ಷೇತ್ರೇ, ಅಸ್ಮಿನ್ ವರ್ತಮಾನೇ ಚಾಂದ್ರಮಾನೇನ............ ಪ್ರಭವಾದಿಷಷ್ಠಿಸಂವತ್ಸರಾಣಾಂ ಮಧ್ಯೇ ............ (ಸಂವತ್ಸರದ ಹೆಸರು) ನಾಮ ಸಂವತ್ಸರೇ ............ಅಯನೇ ............ಋತೌ ............ ಮಾಸೇ ............ ಪಕ್ಷೇ ............ ತಿಥೌ ......... ವಾಸರ ಯುಕ್ತಾಯಾಂ ಶುಭತಿಥೌ ಶ್ರೀಲಕ್ಷ್ಮೀನಾರಾಯಣ ಪ್ರೇರಣಯಾ ಶ್ರೀಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ಶ್ರೀ ಲಕ್ಷ್ಮೀನಾರಾಯಣಸ್ಯ ಧ್ಯಾನಾವಾಹನಾದಿ ಷೋಡಶೋಪಚಾರ ಪೂಜಾಂ ಕರಿಷ್ಯೇ.

## 4. ದೇವಗುರು ವಂದನಂ :

ನಾರಾಯಣಾಯ ಪರಿಪೂರ್ಣಗುಣಾರ್ಣವಾಯ
ವಿಶ್ವೋದಯಸ್ಥಿತಿಲಯೋನ್ನಿಯತಿ ಪ್ರದಾಯ ।
ಜ್ಞಾನಪ್ರದಾಯ ವಿಬುಧಾಸುರ ಸೌಖ್ಯದುಃಖ
ಸತ್ಕಾರಣಾಯ ವಿತತಾಯ ನಮೋ ನಮಸ್ತೇ ॥ 1 ॥

ಯೋ ವಿಪ್ರಲಂಬವಿಪರೀತಮತಿ ಪ್ರಭೂತವಾದಾನ್
ನಿರಸ್ಯ ಕೃತವಾನ್ ಭುವಿ ತತ್ವವಾದಂ ।
ಸರ್ವೇಶ್ವರೋ ಹರಿರಿತಿ ಪ್ರತಿಪಾದಯಂತಂ
ಆನಂದತೀರ್ಥಮುನಿವರ್ಯಮಹಂ ನಮಾಮಿ ॥ 2 ॥

**5. ದ್ವಾರಪಾಲಕ ವಂದನಂ :**

ನಂದಾಯ ನಮಃ। ಸುನಂದಾಯ ನಮಃ।

ನಂದಂ ಸುನಂದಂ ಗರುಡಂ ಪ್ರಚಂಡಂ ಚಂಡಮೇವ ಚ ॥

ಜಯಂ ಚ ವಿಜಯಂ ಚೈವ ಕುಮುದಂ ಕುಮುದೇಕ್ಷಣಂ ದ್ವಾರ ಪಾಲಕೇಭ್ಯೋ ನಮಃ ॥

**6. ಕವಾಟೋದ್ಘಾಟನಮ್ :**

(ದೇವರ ಕೋಣೆಯ ಬಾಗಿಲು ತೆಗೆಯಬೇಕು)

ವಾಯುವಾಯಾಹಿ ಇತ್ಯಸ್ಯ ಮಂತ್ರಸ್ಯ-ಮಧುಚ್ಛಂದಾ ವೈಶ್ವಾಮಿತ್ರಃ।

ವಾಯುರ್ದೇವತಾ । ಗಾಯತ್ರೀ ಛಂದಃ । ಕವಾಟೋದ್ಘಾಟನೇ ವಿನಿಯೋಗಃ।

**ಓಂ ವಾಯ ವಾಯಾಹಿ ದರ್ಶತೇಮೇ ಸೋಮಾ ಅರಂಕೃತಾಃ**

**ತೇಷಾಂ ಪಾಹಿ ಶ್ರುಧೀ ಹವಮ್ ॥** –ಋ.–1/2/1

**7. ದೀಪ ಪ್ರಜ್ವಾಲನಮ್ :** (ದೀಪವನ್ನು ಹಚ್ಚುವುದು)

ಅಗ್ನಿನಾಗ್ನಿರಿತ್ಯಸ್ಯ–ಮೇಧಾತಿಥಿಃ ಕಾಣ್ವಋಷಿಃ।

ಅಗ್ನಿರ್ದೇವತಾ ಗಾಯತ್ರೀಛಂದಃ। ದೀಪಪ್ರಜ್ವಾಲನೇ ವಿನಿಯೋಗಃ।

**ಓಂ ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿ ರ್ಯುವಾ।**

**ಹವ್ಯವಾಡ್ ಜುಹ್ವಾಸ್ಯಃ ।** – ಋ–1, ಮಂ–126ನೇ ಸೂಕ್ತ

**8. ಘಂಟನಾದ :** (ಘಂಟೆಯನ್ನು ಬಾರಿಸುವುದು)

ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಂ।

ಕುರು (ಕುರ್ವೇ) ಘಂಟಾರವಂ ತತ್ರೇ ದೇವತಾಽಽಹ್ವಾನಲಾಂಛನಂ ॥

**9. ದೇವನನ್ನು ಪೂಜೆಗೆ ಆಹ್ವಾನಿಸುವುದು :**

**ಉತ್ತಿಷ್ಠ ಬ್ರಹ್ಮಣಸ್ಪತೇ ದೇವಯಂತ ಸ್ತ್ವೇಮಹೇ ।**

**ಉಪ ಪ್ರಯಂತು ಮರುತಃ ಸುದಾನವ ಇಂದ್ರ ಪ್ರಾಶೂರ್ಭವಾ ಸಚಾ ॥**

[ಈ ಮಂತ್ರದಿಂದ ಪೂಜೆ ಸ್ವೀಕರಿಸಲು ಬರುವಂತೆ ಪ್ರಾರ್ಥಿಸಬೇಕು]

**ಆರಾಧ್ಯಸೇ ಪ್ರಾಣಾಭೃತಾಂ ಪ್ರಣೇತ್ರಾ ಪ್ರಾಣಾಧಿನಾಥೇನ ಸಮೀರಣೇನ ।**

**ನಾರಾಯಣ ಜ್ಞಾನ ಸುಖೈಕ ಪೂರ್ಣ ಸ್ವಾಮಿನ್ ಶ್ರೀರಮಣಃ ಪ್ರಸೀದ ॥**

[ಎಂದು ಶಾಲಿಗ್ರಾಮಗಳನ್ನು ಕಣ್ಣಿಗೆ ಒತ್ತಿಕೊಂಡು ತಟ್ಟೆಯಲ್ಲಿಟ್ಟು, ನಿರ್ಮಾಲ್ಯವೆನಿಸಿದ ಹಳೆಯ ಹೂ, ತುಲಸೀ, ಗಂಧಾದಿಗಳನ್ನು ತೆಗೆದುಹಾಕಿ ಮುಂದಿನ ಅಂಭೃಣೀಸೂಕ್ತವನ್ನು ಸಮಯವಿದ್ದಷ್ಟು ಹೇಳಿಕೊಂಡು ಅಭಿಷೇಕ ಮಾಡಬೇಕು]

**10. ಪ್ರಾರ್ಥನೆ :**

**ಓಂ ನಿಷುಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರಥಮಂ ಕವೀನಾಮ್ । ನ ಋತೇ ತ್ವತ್ ಕ್ರಿಯತೇ ಕಿಂಚನಾರೇ ಮಹಾಮರ್ಕಂ ಮಘವನ್ ಚಿತ್ರಮರ್ಚ ॥**

**ಬಿಂಬೋಽಸಿ ಪ್ರತಿಬಿಂಬೋಽಸ್ಮಿ ತವ ಯದ್ಯಪಿ ಚಾಂತರಂ ।**
**ಸ್ವಾಮಿನ್ ನಿರ್ದೋಷ ಮದ್ದೋಷಂ ವಿರೇಚಯ ನಮೋಽಸ್ತು ತೇ ॥**

**ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ । ತನ್ನೋ ವಿಷ್ಣುಃ ಪ್ರಚೋದಯಾತ್ ।** [ಎಂದು ಹೇಳುತ್ತಾ ಶಾಲಿಗ್ರಾಮದ ಸಂಪುಟವನ್ನು ತೆರೆದು]

ಶಾಲಿಗ್ರಾಮನಿವಾಸಾಯ ಕ್ಷೀರಾಬ್ಧಿಶಯನಾಯ ಚ ।
ಶ್ರೀಶೈಲಾದ್ರಿನಿವಾಸಾಯ ಶಿಲಾವಾಸಾಯ ತೇ ನಮಃ ॥

11. **ನಿರ್ಮಾಲ್ಯಾಭಿಷೇಕ** :[1](ಅಂಭೃಣೀ ಸೂಕ್ತ)

ಹರಿಃ ಓಂ ಅಹಂ ರುದ್ರೇಭಿರ್ವಸುಭಿಶ್ಚ ರಾಮ್ಯ-

ಹಮಾದಿತ್ಯೈರುತ ವಿಶ್ವದೇವೈಃ। ಅಹಂ ಮಿತ್ರಾವರುಣೋಭಾ

ಬಿಭರ್ಮ್ಯಹಮಿಂದ್ರಾಗ್ನೀ ಅಹಮಶ್ವಿನೋಭಾ ॥ ೧ ॥

ಅಹಂ ಸೋಮಮಾಹನಸಂ ಬಿಭರ್ಮ್ಯಹಂ ತ್ವಷ್ಟಾರಮುತ

ಪೂಷಣಂ ಭಗಮ್ । ಅಹಂ ದಧಾಮಿ ದ್ರವಿಣಂ ಹವಿಷ್ಮತೇ

ಸುಪ್ರಾವ್ಯೇ (ಏ) ೩ ಯಜಮಾನಾಯ ಸುನ್ವತೇ ॥ ೨ ॥

---

1. ಶಾಲಿಗ್ರಾಮ, ಚಕ್ರಾಣಿಕೆ, ವಿಷ್ಣುಪಾದ, ಶ್ರೀಕೃಷ್ಣಪ್ರತಿಮೆ, ಸುದರ್ಶನ ಇವುಗಳನ್ನು ತಟ್ಟೆಯಲ್ಲಿಟ್ಟುಕೊಂಡು, ಬೇರೆ ತಟ್ಟೆಯಲ್ಲಿ ಶಂಖ ಹಾಗೂ ಮುಖ್ಯಪ್ರಾಣ ಪ್ರತಿಮೆಗಳನ್ನಿಟ್ಟು
**ಸಾಲಿಗ್ರಾಮ ಶಿಲಾಯಾಂ ತು ನಿತ್ಯಂ ಸನ್ನಿಹತಃ ಕಲಿಃ ।**
**ಭೀಮಸೇನ ಮಹಾಬಾಹೋ ಗದಯಾ ಪೋಥನಂ ಕುರು ॥**
[ಶಾಲಿಗ್ರಾಮ ಶಿಲಾಯಂ ಎಂದರೆ **'ಗಂಗಾಯಾಂ ಘೋಷಃ'** ಎಂಬಂತೆ ಶಾಲಿಗ್ರಾಮ ಸಮೀಪ ಕಲಿಯಿರುತ್ತಾನೆ ಎಂದರ್ಥ.]
ಎಂಬ ಮಂತ್ರ ಹೇಳುತ್ತಾ ನೀರಿನಿಂದ ತೊಳೆಯಬೇಕು. ನಂತರ ಆ ನೀರನ್ನು ಚೆಲ್ಲಿ ಪುನಃ ಬೇರೆ ನೀರಿನಿಂದ ಅಂಭೃಣೀಸೂಕ್ತದಿಂದ ಅಭಿಷೇಕ ಮಾಡಬೇಕು. ಇದೇ "ನಿರ್ಮಾಲ್ಯತೀರ್ಥ" ಇದನ್ನು ಪ್ರಾಣಾದಿ ಪರಿವಾರಗಳಿಗೆ 3 ಬಾರಿ ಕೊಟ್ಟು ಪೂಜಕನೂ ಸಹ 3 ಬಾರಿ ತೆಗೆದುಕೊಳ್ಳಬೇಕು.

ಅಹಂ ರಾಷ್ಟ್ರೀ ಸಂಗಮನೀ ವಸೂನಾಂ ಚಿಕಿತುಷೀ ಪ್ರಥಮಾ ಯಜ್ಞಿಯಾನಾಮ್ । ತಾಂ ಮಾ ದೇವಾ ವ್ಯದಧುಃ ಪುರುತ್ರಾ ಭೂರಿಸ್ಥಾತ್ರಾಂ ಭೂರ್ಯಾವೇಶಯಂತೀಮ್ ॥ ೩ ॥

ಮಯಾ ಸೋ ಅನ್ನಮತ್ತಿ ಯೋ ವಿಪಶ್ಯತಿ ಯಃ ಪ್ರಾಣಿತಿ ಯ ಈಂ ಶೃಣೋತ್ಯುಕ್ತಮ್ । ಅಮಂತವೋ ಮಾಂ ತ ಉಪ ಕ್ಷಿಯಂತಿ ಶ್ರುಧಿ ಶ್ರುತ ಶ್ರದ್ಧಿವಂ ತೇ ವದಾಮಿ ॥ ೪ ॥

ಅಹಮೇವ ಸ್ವಯಮಿದಂ ವದಾಮಿ ಜುಷ್ಟಂ ದೇವೇಭಿರುತ ಮಾನುಷೇಭಿಃ । ಯಂ ಕಾಮಯೇ ತಂತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಮ್ ॥ ೫ ॥

ಅಹಂ ರುದ್ರಾಯ ಧನುರಾ ತನೋಮಿ ಬ್ರಹ್ಮದ್ವಿಷೇ ಶರವೇ ಹಂತವಾ ಉ । ಅಹಂ ಜನಾಯ ಸಮದಂ ಕೃಣೋಮ್ಯಹಂ ದ್ಯಾವಾಪೃಥಿವೀ ಆ ವಿವೇಶ ॥ ೬ ॥

ಅಹಂ ಸುವೇ ಪಿತರಮಸ್ಯ ಮೂರ್ಧನ್ಮಮ ಯೋನಿರಪ್ಸ್ವ (ಅ) ೧ಂ ತಃ ಸಮುದ್ರೇ । ತತೋ ವಿ ತಿಷ್ಠೇ ಭುವನಾನು ವಿಶ್ವೋತಮೂಂ ದ್ಯಾಂ ವರ್ಷ್ಮಣೋಪ ಸ್ಪೃಶಾಮಿ ॥ ೭ ॥

ಅಹಮೇವ ವಾತ ಇವ ಪ್ರ ವಾಮ್ಯಾರಭಮಾಣಾ ಭುವನಾನಿ

**ವಿಶ್ವಾ । ಪರೋ ದಿವಾ ಪರ ಏನಾ ಪೃಥಿವ್ಯೈತಾವತೀ ಮಹಿನಾ ಸಂ ಬಭೂವ ॥ ೮ ॥**

ಹೀಗೆ ಅಭಿಷೇಕ ಮಾಡಿ ಉಳಿದ ನೀರಿನಿಂದ ರಮಾ, ಮುಖ್ಯಪ್ರಾಣಾದಿ ಪ್ರತಿಮೆಗಳಿಗೂ ಅಭಿಷೇಕಿಸಿ, ನಿರ್ಮಾಲ್ಯತೀರ್ಥ ನೀಡಬೇಕು. ಉಳಿದ ನೀರಿನಿಂದ ರಾಯರ ಬೃಂದಾವನಕ್ಕೆ ಅಭಿಷೇಕಿಸಿದರೆ **'ಪಾದೋದಕ'**–ವಾಗುತ್ತದೆ.

## 12. ಕಲಶಪೂಜಾ :[2]

**ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ ।**
**ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ॥ 1 ॥**

**ಕುಕ್ಷೌ ತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ ।**
**ಋಗ್ವೇದೋಽಥ ಯಜುರ್ವೇದಃ ಸಾಮವೇದೋ ಹ್ಯಥರ್ವಣಃ ॥ 2 ॥**

**ಅಂಗೈಶ್ಚ ಸಹಿತಾಸ್ಸರ್ವೇ ಕಲಶಾಂಬು ಸಮಾಶ್ರಿತಾಃ ।**
**ಅತ್ರ ಗಾಯತ್ರೀ ಸಾವಿತ್ರೀ ಶಾಂತಿಃ ಪುಷ್ಟೀಕರೀ ತಥಾ ।**
**ಆಯಾಂತು ದೇವಪೂಜಾರ್ಥಂ ಅಭಿಷೇಕಾರ್ಥಮಾದರಾತ್ ॥ 3 ॥**

**ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।**
**ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ॥ 4 ॥**

---

2. ಕಲಶ ಎಂದರೆ ನೀರಿನಲ್ಲಿ ನಿಯಾಮಕವಾಗಿರುವ ಭಗವದ್ರೂಪಗಳು (ಕೇ = ಜಲೇ, ಲಸಂತೀತಿ ಕಲಶಾಃ) ಎರಡು ಕಲಶಗಳನ್ನು ಇಟ್ಟುಕೊಂಡು, ಎರಡಕ್ಕೂ ನಾಲ್ಕು ದಿಕ್ಕುಗಳಲ್ಲಿ ಗಂಧಾಕ್ಷತೆಯಿಂದ ಅಲಂಕರಿಸಿ ತುಲಸೀದಲವನ್ನು ಹಾಕಿ (ಏಕಾದಶಿ ಬಿಟ್ಟು) ಕಲಶ ಪೂಜೆಯನ್ನು ಮಾಡಬೇಕು. ತಾರ್ಕ್ಷ್ಯಾದಿ–ಮುದ್ರೆಗಳನ್ನು ತೋರಿಸಿ, ಧ್ಯಾನಾವಾಹಾನಾದಿ ಷೋಡಶೋಪಚಾರ ಪೂಜೆಯನ್ನು ಮಾಡಿ, ಕಲಶಾಂತರ್ಯಾಮಿ ಭಗವಂತನ ಸಾನ್ನಿಧ್ಯ ಪ್ರಾರ್ಥಿಸಿ, ಎಂಟು ಬಾರಿ ಮೂಲಮಂತ್ರವನ್ನು ಜಪಿಸಿ, **"ಕಲಶಃ ಕೀರ್ತಿಮಾಯುಷ್ಯಂ"** ಎಂದು ಪ್ರಾರ್ಥಿಸಬೇಕು. ಸ್ವಾದೋದಕವನ್ನು ಬೇರೆ ಬಟ್ಟಲಿನಲ್ಲಿಟ್ಟು ಕಲಶದ ಜೊತೆಗಿಟ್ಟು ಪೂಜೆ ಮಾಡಿ, ಅದನ್ನು ಶಂಖಕ್ಕೆ ಮುಟ್ಟಿಸಿ ಮೊದಲು ಅಭಿಷೇಕ ಮಾಡಿ, ನಂತರ ಕುಂಭದ ನೀರಿನಿಂದ ಅಭಿಷೇಕಿಸಬೇಕು. ಪುರುಷಸೂಕ್ತದಿ ಅವಶ್ಯ ಹೇಳಬೇಕು.

**ಅತ್ರಕಲಶೇ–ಅಜಾದಿದೇವತಾಭ್ಯೋ ನಮಃ।**

**ಕೇಶವಾದಿ ದೇವತಾಭ್ಯೋನಮಃ ಆತ್ಮಾದಿ ಚತುರ್ಮೂರ್ತಯೇ ನಮಃ॥**

**ವಾಸುದೇವಾದಿ ಚತುರ್ಮೂರ್ತಯೇ ನಮಃ।**

[ಎಂದು ಹೇಳಿ ಐದು ಮುದ್ರೆಗಳನ್ನು ತೋರಿಸಬೇಕು]

**ಕಲಶದೇವತಾಭ್ಯೋ ನಮಃ। ಧ್ಯಾಯಾಮಿ। ಆವಾಹಯಾಮಿ। ಪಾದ್ಯಂ। ಮಧುಪರ್ಕಂ। ಆಚಮನಂ। ಸ್ನಾನಂ। ವಸ್ತ್ರಂ। ಪುಷ್ಪೈಃ ಪೂಜಯಾಮಿ। ಧೂಪಂ। ದೀಪಂ। ನೈವೇದ್ಯಂ। ತಾಂಬೂಲಂ। ಮಂಗಳ ನೀರಾಜನಂ ಸಮರ್ಪಯಾಮಿ।**

**ಓಂ ನಮೋ ನಾರಾಯಣಾಯ ಓಂ** (ಎಂಟು ಬಾರಿ ಪಠಿಸಬೇಕು)

**ಅನೇಕ ಕಲಶಾರಾಧನೇನ ಕಲಶಾಂತರ್ಯಾಮಿ ನಾರಾಯಣ ಪ್ರೀಯತಾಂ॥**

## 13. ಶಂಖ ಪೂಜಾ :[3]

**ಓಂ ಸಹಸ್ರಾರ ಹುಂ ಫಟ್। ಇತಿ ಶಂಖ ಪ್ರಕ್ಷಲ್ಯಂ –ಪ್ರಾರ್ಥಯೇತ್**
(ಶಂಖ ತೊಳೆದು, ಮುಟ್ಟಿಕೊಂಡು ಪ್ರಾರ್ಥಿಸುವುದು)

**ತ್ವಂ ಪುರಾ ಸಾಗರೋತ್ಪನ್ನೋ ವಿಷ್ಣುಣಾ ವಿಧೃತಃ ಕರೇ।**
**ನಮಿತಃ ಸರ್ವದೈವೈಶ್ಚ ಪಾಂಚಜನ್ಯ ನಮೋಽಸ್ತು ತೇ ॥ 1 ॥**

**ಗರ್ಭಾ ದೇವಾರಿ ನಾರೀಣಾಂ ವಿಶೀರ್ಯಂತೇ ಸಹಸ್ರಧಾ।**
**ತವ ನಾದೇನ ಪಾತಾಲೇ ಪಾಂಚಜನ್ಮ ನಮೋಽಸ್ತು ತೇ ॥ 2 ॥**

**ದರ್ಶನೇನ ಹಿ ಶಂಖಸ್ಯ ಕಿಂ ಪುನಃ ಸ್ಪರ್ಶನೇನ ಚ।**
**ವಿಲಯಂ ಯಾಂತಿ ಪಾಪಾನಿ ತಮಃ ಸೂರ್ಯೋದಯೇ ಯಥಾ ॥ 3 ॥**

3. ಶಂಖವನ್ನು ಮೊದಲು **"ಸಹಸ್ರಾರ ಹುಂ ಹುಟ್"** ಎಂದು ನೀರಿನಿಂದ ತೊಳೆಯಬೇಕು. ನಂತರ ಕಲಶಪೂಜೆ ಮಾಡಿದ ನೀರನ್ನು ಉದ್ಧರಣೆಯಿಂದ ಶಂಖದಲ್ಲಿ ತುಂಬಿಸಬೇಕು. ತುಲಸೀದಳ ಹಾಕಿ, ತಾರ್ಕ್ಷ್ಯಾದಿ ಪಂಚಮುದ್ರೆಗಳನ್ನು ತೋರಿಸಬೇಕು. ಶಂಖವನ್ನು ಬಲಗೈಯಿಂದ ಮುಟ್ಟಿ **"ತ್ವಂ ಪುರಾ ಸಾಗರೋತ್ಪನ್ನ"** ಇತ್ಯಾದಿ ಮಂತ್ರ ಹೇಳಬೇಕು.

ನತ್ವಾ ಶಂಖಂ ಕರೇ ಧೃತ್ವಾ ಮಂತ್ರೇಣಾನೇನ ವೈಷ್ಣವಃ।
ಯಃ ಸ್ನಾಪಯತಿ ಗೋವಿಂದಂ ತಸ್ಯ ಪುಣ್ಯ ಮನಂತಕಮ್ ॥ 4 ॥

ಶಂಖ ಚಂದ್ರಾರ್ಕದೈವತ್ಯಂ ಮಧ್ಯೇ ವರುಣದೈವತಂ।
ಪೃಷ್ಠೇ ಪ್ರಜಾಪತಿರ್ವೇದಾ ಅಗ್ರೇ ಗಂಗಾ ಸರಸ್ವತೀ ॥

ತ್ರೈಲೋಕ್ಯೇ ಯಾನಿ ತೀರ್ಥಾನಿ ವಾಸುದೇವಸ್ಯ ಚಾಜ್ಞಯಾ।
ಶಂಖೇ ತಿಷ್ಠಂತಿ ವಿಪ್ರೇಂದ್ರ ತಸ್ಮಾಚ್ಛಂಖಂ ಪ್ರಪೂಜಯೇತ್ ॥

ಪಾಂಚಜನ್ಯಾಯ ವಿದ್ಮಹೇ ಪಾವಮಾನಾಯ ಧೀಮಹೇ, ತನ್ನಃ ಶಂಖಃ ಪ್ರಚೋದಯಾತ್ ॥ (ಹೀಗೆ ಮೂರು ಬಾರಿ ಜಪಿಸಿ)

ಶಂಖದೇವತಾಭ್ಯೋ ನಮಃ । ಧ್ಯಾನಂ ಸಮರ್ಪಯಾಮಿ । ಆವಾಹನಂ। ಆಸನಂ। ಅರ್ಘ್ಯಂ। ಪಾದ್ಯಂ। ಆಚಮನಂ। ಮಧುಪರ್ಕಂ। ಪುನರಾಚಮನಂ। ಗಂಧ-ಪುಷ್ಪ-ತುಲಸೀ ಪತ್ರಾಣಿ ಸಮರ್ಪಯಾಮಿ

ಶಂಖಂ ಚಂದ್ರಾರ್ಕದೈವತ್ಯಂ ಮಧ್ಯೇ ವರುಣದೈವತಂ।
ಪೃಷ್ಠೇ ಪ್ರಜಾಪತಿರ್ವೇದಾಃ ಅಗ್ರೇ ಗಂಗಾ ಸರಸ್ವತೀ ॥
ಅನೇನ ಶಂಖಪೂಜನೇನ ಭಗವಾನ್ ನಾರಾಯಣಂ ಪ್ರೀಯತಾಮ್ ॥

(ಹೀಗೆ ಪ್ರಾರ್ಥಿಸಿ ಶಂಖದ ನೀರನ್ನು ಸಾಲಿಗ್ರಾಮಾದಿ ದೇವಪೂಜಾ ವಸ್ತುಗಳಿಗೆ ಪ್ರೋಕ್ಷಿಸಿ ತಾನೂ ಪ್ರೋಕ್ಷಿಸಿಕೊಳ್ಳಬೇಕು)

### 14. ಪೀಠಪೂಜಾ :[4]

ಚಕ್ರಾಬ್ಜ ಮಂಡಲೇ ಪೀಠಪೂಜಾಂ ಗುರ್ವನುಜ್ಞಾರ್ಥಂ ಗುರುಪೂಜಾಂ ಕರಿಷ್ಯೇ (ಇತಿ ಸಂಕಲ್ಪ್ಯ)

---

4. ಪೀಠಪೂಜೆ ಮಾಡುವಾಗ ಪುಷ್ಪವನ್ನು ಕೈಯಲ್ಲಿ ಹಿಡಿದುಕೊಂಡು ನಮ್ಮ ದೇವರ ಪೀಠದ ಮಧ್ಯಭಾಗದಿಂದ ನೇರಕ್ಕೆ ಕೆಳಗಡೆ ಹೊರಗೆ ಬ್ರಹ್ಮಾಂಡವನ್ನು ಧರಿಸಿರುವ ಒಂದು ವಿಷ್ಣುಕೂರ್ಮವನ್ನು ಚಿಂತಿಸಬೇಕು. ಇವನೇ ಪರಮಪುರುಷ. ಪರಮಪುರುಷನ ಮೇಲೆ ಆಧಾರಶಕ್ತಿಯಾದ ಲಕ್ಷ್ಮೀದೇವಿಯನ್ನು, ಚಿಂತಿಸಬೇಕು. ಬ್ರಹ್ಮಾಂಡದ ಒಳಗಿರುವ ಘನೋದಕಕ್ಕೆ ಆಧಾರನಾದ ಇನ್ನೊಂದು ವಿಷ್ಣುಕೂರ್ಮವನ್ನು, ಅವನ ಬೆನ್ನನ್ನು ಆಶ್ರಯಿಸಿರುವ ಆದಿಶೇಷನನ್ನು ಅವನ ತಲೆಯ ಮೇಲೆ ಈ ಭೂಮಿಯು ನಿಂತಿದೆ ಎಂದು ಚಿಂತಿಸಿ ಆ ಭೂಮಿಯಲ್ಲಿ ಕ್ಷೀರ ಸಮುದ್ರವು. ಇದರ ಮಧ್ಯ

ಪೀಠ ಮಧ್ಯೇ–

ಪರದೇವತಾಯೈ ಶ್ರೀಲಕ್ಷ್ಮೀನಾರಾಯಣಾಯ ನಮಃ ।
ವಾಮೇ ಗುರುವೇ ಶ್ರೀವಾಯವೇ ನಮಃ ।
ದಕ್ಷಿಣೇ–ಸರ್ವದೇವತಾಭ್ಯೋ ಬ್ರಹ್ಮರುದ್ರಾದಿಭ್ಯೋ ನಮಃ ।
ಪುನರ್ವಾಮೇ ಸರ್ವಗುರು ಸನಕ ಸನಂದಾದಿಭ್ಯೋ ನಮಃ ।
ಏತೈರನುಜ್ಞಾತಃ ಪೀಠಪೂಜಾಂ ಕರಿಷ್ಯೇ ।

ಪೀಠ ಅಧೋಭಾಗೇ –

ಆಗ್ನೇಯೆ ಗಂ ಗರುಡಾಯ ನಮಃ ।
ನೈರ್ಋತ್ಯೇ ವ್ಯಾಂ ವೇದವ್ಯಾಸಾಯ ನಮಃ ।
ವಾಯವ್ಯೇ ದುಂ ದುರ್ಗಾಯೈ ನಮಃ ।
ಐಶಾನ್ಯೇ ಸಂ ಸರಸ್ವತ್ಯೈ ನಮಃ । ಏತಾಃ ಪೀಠಪಾದದೇವತಾಃ ।

ಪೀಠಪಾದೋರ್ಧ್ವಭಾಗೇ –

ಧರ್ಮಾಧಿಪತಯೇ ಯಮಾಯ ನಮಃ ।
ಜ್ಞಾನಾದಿ ಪತಯೇ ವಾಯವೇ ನಮಃ ।
ವೈರಾಗ್ಯಧಿಪತಯೆ ಶಿವಾಯ ನಮಃ ।
ಐಶ್ವರ್ಯಾಧಿಪತಯೇ ಇಂದ್ರಾಯ ನಮಃ ।

---

ಶ್ವೇತ ದ್ವೀಪವನ್ನು, ಅಲ್ಲಿ ಒಂದು ದಿವ್ಯಮಂಟಪವನ್ನು ಈ ಮಂಟಪವ ನಾವು ಪೂಜಿಸುತ್ತಿರುವ ಮಂಟಪವೆಂದು ಅನುಸಂಧಾನವಿರಬೇಕು. ಈ ಪೀಠದಲ್ಲಿ ನಾಲ್ಕು ಚೌಕದ ಪೀಠವಿರುತ್ತದೆ. ಆ ಪೀಠದ ಮಧ್ಯದಲ್ಲಿ ಆರು ದಳ ಕಮಲವಿರುತ್ತದೆ. ಆ ಪದ್ಮದ ಮೇಲೆ ಮತ್ತೊಂದು ಎಂಟು ದಳ ಕಮಲವನ್ನು ಚಿಂತಿಸಬೇಕು. ಇದರ ಮಧ್ಯದಲ್ಲಿ "ಅನುಗ್ರಹ" ಶಕ್ತಿಯ ಮೇಲೆ ಶೇಷನಿರುತ್ತಾನೆ. ಅದರ ಮೇಲೆ ರಮಾರೂಪರಾದ ಯೋಗಪೀಠವನ್ನು, ಚಿಂತಿಸಿ, ಈ ಪೀಠದಲ್ಲಿ ಆವಾಹಿತನಾದ ಬಿಂಬಮೂರ್ತಿಯು ಕುಳಿತು ನಮ್ಮ ಪೂಜೆಯನ್ನು ಸ್ವೀಕರಿಸುತ್ತಾನೆ ಎಂಬ ಅನುಸಂಧಾನವೇ "ಪೀಠಪೂಜೆ" ಇಷ್ಟು ಅನುಸಂಧಾನ ಮಾಡಿ ಪುಷ್ಪವನ್ನು ಶಾಲಿಗ್ರಾಮದ ಮೇಲೆ ಹಾಕಿ, ವಿಷ್ಣೋರಾಸನ ಭೂತಾಯ ಇತ್ಯಾದಿ ಹೇಳಿ ನಮಿಸಬೇಕು.





ಪೀಠಫಲಕೇಷು: –

ಪೂರ್ವೇ–ಅಧರ್ಮಾಧಿಪತಯೇ ನಿರ್ಋತಯೇ ನಮಃ।

ದಕ್ಷಿಣೇ–ಅಜ್ಞಾನಾಧಿಪತಯೇ ದುರ್ಗಾಯೈ ನಮಃ।

ಪಶ್ಚಿಮೇ – ವೈರಾಗ್ಯಾಧಿಪತಯೇ ರುದ್ರಾಯ ನಮಃ।

ಉತ್ತರೇ – ಅವೈರಾಗ್ಯಾಧಿಪತಯೇ ಕಾಮಾಯ ನಮಃ।

ಏತಾ ಪೀಠಫಲಕ ದೇವತಾಃ।

ಪೀಠಾಧಸ್ತಾತ್ –

ಮಧ್ಯೇ (ಪಾತಾಲೇ) ಪರಮ ಪುರುಷಾಯ ನಮಃ।

ತದುಪರಿ ಉದಕೇ – ಬ್ರಹ್ಮಾಂಡಾಧಾರಾಯ ವಿಷ್ಣು ಕೂರ್ಮಾಯ ನಮಃ।

ತದುಪರಿ ಗರ್ಭೋದಕೇ – ಕೂರ್ಮರೂಪಾಯ ವಿಷ್ಣವೇ ನಮಃ।

ಆಧಾರರೂಪಿಣ್ಯೈ ಶ್ರೀ ಶಕ್ತ್ಯೈ ನಮಃ।

ತತ್ಪುಚ್ಛಾಶ್ರಿತಾಯ ವಾಯು ಕೂರ್ಮಾಯ ನಮಃ।

ತತ್ಪುಚ್ಛಾಶ್ರಿತಾಯ ಅನಂತನಾಮಕಶೇಷಾಯ ನಮಃ।

ತತ್ಫಣಾಶ್ರಿತಾಯೈ ಪೃಥಿವ್ಯಭಿಮಾನಿನ್ಯೈ ಭೂಮ್ಯೈ ನಮಃ।

ತದುಪರಿ ಕ್ಷೀರಸಾಗರಮಾನಿನೇ ವರುಣಾಯ ನಮಃ।

ತದುಪರಿ ಶ್ವೇತ ದ್ವೀಪರೂಪಾಯೈ ರಮಾಯೈ ನಮಃ।

ತತ್ರ ನವರತ್ನ ಖಚಿತ ಚತುಃಸ್ತಂಭಯುಕ್ತಮಹಾಮಂಟಪಾಯ ನಮಃ।

ತನ್ಮಧ್ಯೇ ರಮಾರೂಪ–ಕಂದನಾಲ ಸಹಿತ ಪದ್ಮಾಯ ನಮಃ।

ಪದ್ಮಷಟ್ಕೋಣೇಷು–

ದಕ್ಷಿಣಕೋಣೇ–ಸೂರ್ಯಾಯ ನಮಃ।

ವಾಮಕೋಣೇ–ಸೋಮಾಯ ನಮಃ।

ಸಮ್ಮುಖೇ – ಹುತಾಶನ – ಮಂಡಲಾಯ ನಮಃ।



ದೇವವಾಮಕೋಣೇ–ಸತ್ವಾಭಿಮಾನಿನ್ಯೈ ಶ್ರಿಯೈ ನಮಃ।

ದಕ್ಷಿಣಕೋಣೇ–ರಜೋಭಿಮಾನಿನ್ಯೈ ಭೂಮ್ಯೈ ನಮಃ।

ದೇವಪೃಷ್ಠಭಾಗೇ ಉಪಬರ್ಹಣ ರೂಪಾಯೈ ತಮೋಭಿಮಾನಿನ್ಯೈ ದುರ್ಗಾಯೈ ನಮಃ।

ಪೂರ್ವೆ–ಆತ್ಮನೇ ನಮಃ।

ದಕ್ಷಿಣೇ–ಅಂತರಾತ್ಮನೇ ನಮಃ।

ಪಶ್ಚಿಮೇ–ಪರಮಾತ್ಮನೇ ನಮಃ।

ಉತ್ತರೇ–ಜ್ಞಾನಾತ್ಮನೇ ನಮಃ।

ಕಮಲಾಷ್ಟಪತ್ರೇಷು –

ವಿಮಲಾಯೈ ನಮಃ। ಉತ್ಕರ್ಷಿಣ್ಯೈ ನಮಃ।

ಜ್ಞಾನಾಯೈ ನಮಃ। ಕ್ರಿಯಾಯೈ ನಮಃ।

ಯೋಗಾಯೈ ನಮಃ। ಪ್ರಹ್ವ್ಯೈ ನಮಃ।

ಸತ್ಯಾಯೈ ನಮಃ। ಈಶಾನಾಯೈ ನಮಃ।

ಮಧ್ಯೇ ಅನುಗ್ರಹಾಯೈ ನಮಃ।

ಅನುಗ್ರಹಾಖ್ಯಶಕ್ತ್ಯೌ ಸಹಸ್ರ ಫಣಾಮಂಡಲಮಂಡಿತಾಯ, ತಲ್ಪಾಕಾರಾಯ ಹರೇರ್ಯೋಗಾಸನರೂಪಾಯ ಶ್ರೀಮದನಂತಾಯ ನಮಃ।

ತದುಪರಿ ರಮಾರೂಪ ಚಿತ್ರಾಸನಾಯ ನಮಃ । (ಪುಷ್ಪಂ ಸಮರ್ಪಯೇತ್ ಪೀಠಪೂಜಾಂ ಸಮರ್ಪಯಾಮಿ)

ವಿಷ್ಣೋರಾಸನಭೂತಾಯ ದಿವ್ಯರತ್ನಮಯಾಯ ಚ।

ಪ್ರಧಾನ ಪುರುಷೇಶಾಯ ಮಹಾಪೀಠಾಯ ತೇ ನಮಃ॥

ಇಲ್ಲಿಗೆ ಪೀಠ ಪೂಜೆಯು ಮುಗಿಯಿತು





2. ಪ್ರಾಣಾಯಾಮಃ

ಪ್ರಣವಸ್ಯ ಪರಬ್ರಹ್ಮ ಋಷಿಃ । ಪರಮಾತ್ಮಾ ದೇವತಾ । ದೈವೀ ಗಾಯತ್ರೀ ಛಂದಃ । ಪ್ರಾಣಾಯಾಮೇ ವಿನಿಯೋಗಃ॥

ಓಂ ಭೂಃ । ಓಂ ಭುವಃ । ಓಂ ಸ್ವಃ । ಓಂ ಮಹಃ । ಓಂ ಜನಃ । ಓಂ ತಪಃ। ಓಂ ಸತ್ಯಂ ॥

ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥ ಓಮಾಪೋ ಜ್ಯೋತೀರಸೋಽಮೃತಂ ಬ್ರಹ್ಮ ಭೂರ್ಭುವಸ್ಸ್ವರೋಮ್॥

3. ಸಂಕಲ್ಪ

ಶ್ರೀಗೋವಿಂದ ಗೋವಿಂದ ಶುಭೇ ಶೋಭನೇ ಮುಹೂರ್ತೇ ಆದ್ಯಬ್ರಹ್ಮಣಃ ದ್ವಿತೀಯಪರಾರ್ಧೇ ಶ್ರೀಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ, ಪ್ರಥಮಪಾದೇ, ಜಂಬೂದ್ವೀಪೇ, ಭರತವರ್ಷೇ, ಭರತಖಂಡೇ, ದಂಡಕಾರಣ್ಯೇ, ಗೋದಾವರ್ಯಾಃ ದಕ್ಷಿಣೇ ಪಾರ್ಶ್ವೇ ಶಾಲೀವಾಹನಶಕೇ ಬೌದ್ಧಾವತಾರೇ, ರಾಮಕ್ಷೇತ್ರೇ, ಅಸ್ಮಿನ್ವರ್ತಮಾನೇ ಚಾಂದ್ರಮಾನೇನ .............. ಸಂವತ್ಸರೇ .......... ಆಯನೇ ........ ಋತೌ ........ ಮಾಸೇ .......... ಪಕ್ಷೇ........ ಶುಭತಿಥೌ ......... ವಾಸರೇ..... ಪೂರ್ವೋಕ್ತ ಏವಂಗುಣ..... ಶುಭತಿಥೌ ಶ್ರೀವಿಷ್ಣು ಪ್ರೀತ್ಯರ್ಥಂ ವೈಶ್ವದೇವಾಂಗ ಭೂತಯಜ್ಞಂ ಕರಿಷ್ಯೇ । (ಇತಿ ಸಂಕಲ್ಪ್ಯ)

1. ಓಂ ಸೂರ್ಯಾಯ ಸ್ವಾಹಾ ।
2. ಓಂ ಪ್ರಜಾಪತಯೇ ಸ್ವಾಹಾ ।
3. ಓಂ ಅಗ್ನಯೇ ಸ್ವಾಹಾ ।
4. ಓಂ ಪ್ರಜಾಪತಯೇ ಸ್ವಾಹಾ ।
5. ಓಂ ಸೋಮಾಯ ವನಸ್ಪತಯೇ ಸ್ವಾಹಾ ।
6. ಓಂ ಅಗ್ನೀಷೋಮಾಭ್ಯಾಂ ಸ್ವಾಹಾ ।

7. ಓಂ ಇಂದ್ರಾಗ್ನಿಭ್ಯಾಂ ಸ್ವಾಹಾ ।

8. ಓಂ ದ್ಯಾವಾಪೃಥಿವೀಭ್ಯಾಂ ಸ್ವಾಹಾ ।

9. ಓಂ ಧನ್ವಂತರಯೇ ಸ್ವಾಹಾ ।  10. ಓಂ ಇಂದ್ರಾಯ ಸ್ವಾಹಾ ।

11. ಓಂ ವಿಶ್ವೇಭ್ಯೋ ದೇವೇಭ್ಯಃ ಸ್ವಾಹಾ ।

12.ಓಂ ಬ್ರಹ್ಮಣೇ ಸ್ವಾಹಾ ।  13. ಓಂ ಅದ್ಭ್ಯಃ ಸ್ವಾಹಾ ।

14.ಓಂ ಓಷಧಿವನಸ್ಪತಿಭ್ಯಃ ಸ್ವಾಹಾ ।

15. ಓಂ ಗೃಹಾಯ ಸ್ವಾಹಾ ।  16. ಓಂ ಗೃಹದೇವತಾಭ್ಯಃ ಸ್ವಾಹಾ ।

17. ಓಂ ವಾಸ್ತುದೇವತಾಭ್ಯಃ ಸ್ವಾಹಾ ।

(ಇತಿ ದತ್ತ್ವಾ ಚಕ್ರಾದ್ಬಹಿಃ ಪ್ರಾಚ್ಯಾಂ ಪ್ರಾಕ್ಸಂಸ್ಥಂ)

18. ಓಂ ಇಂದ್ರಾಯ ಸ್ವಾಹಾ ।

19. ಓಂ ಇಂದ್ರಪುರುಷೇಭ್ಯಃ ಸ್ವಾಹಾ । (ದಕ್ಷಿಣೇ–ಉದಕ್ಸಂಸ್ಥಂ)

20.ಓಂ ಯಮಾಯ ಸ್ವಾಹಾ ।

21. ಓಂ ಯಮಪುರುಷೇಭ್ಯಃ ಸ್ವಾಹಾ । (ಪಶ್ಚಿಮೇ ಪ್ರಾಕ್ಸಂಸ್ಥಂ)

22.ಓಂ ವರುಣಾಯ ಸ್ವಾಹಾ ।

23.ಓಂ ವರುಣಪುರುಷೇಭ್ಯಃ ಸ್ವಾಹಾ । (ಉತ್ತರೇ– ಉದಕ್ಸಂಸ್ಥಂ)

24.ಓಂ ಸೋಮಾಯ ಸ್ವಾಹಾ ।

25.ಓಂ ಸೋಮ ಪುರುಷೇಭ್ಯಃ ಸ್ವಾಹಾ । (ಅಥ ಚಕ್ರಾಕಾರ ಮಧ್ಯೇ)

26.ಓಂ ಬ್ರಹ್ಮಣೇ ಸ್ವಾಹಾ । (ತತ್ಪ್ರಾಚ್ಯಾಂ)

27.ಓಂ ಬ್ರಹ್ಮಪುರುಷೇಭ್ಯಃ ಸ್ವಾಹಾ । (ಬ್ರಹ್ಮಣೋ ದಕ್ಷಿಣತಃ)

28.ಓಂ ವಿಶ್ವೇಭ್ಯೋದೇವೇಭ್ಯಃ ಸ್ವಾಹಾ । (ತದುಪರಿಭಾಗೇ)

29.ಓಂ ಸರ್ವೇಭ್ಯೋ ಭೂತೇಭ್ಯಃ ಸ್ವಾಹಾ । (ಬ್ರಹ್ಮಣ ಉತ್ತರತಃ)

**30.ಓಂ ದಿವಾಚಾರಿಭ್ಯಃ ಸ್ವಾಹಾ ।** (ಸಾಯಂ – ನಕ್ತಂ ಚಾರಿಭ್ಯಃ ಸ್ವಾಹಾ) (ಚಕ್ರಾದ್ಬಹಿಃ)

**31. ಓಂ ನಕ್ತಂಚಾರಿಭ್ಯಃ ಸ್ವಾಹಾ ।** (ಚಕ್ರಾದ್ಬಹಿಃ ಈಶಾನ್ಯಕೋಣೇ)

**32.ಓಂ ರಕ್ಷೋಭ್ಯಃ ಸ್ವಾಹಾ ।**

(ಇತಿ ಭೂತಯಜ್ಞಃ ॥ ಆಗ್ನೇಯಕೋಣೇ ಪ್ರಾಚೀನಾವೀತಿ)

**33.**(ತೃತೀಯಭಾಗಮನ್ನಮ್) **ಓಂ ಸ್ವಧಾ ಪಿತೃಭ್ಯಃ ।**

(ಅಪ ಉಪಸ್ಪೃಶ್ಯ ಸವ್ಯಂ ನೈಋತ್ಯಕೋಣೇ)

**34.ಓಂ ಶ್ಯಾಮಾಯ ಸ್ವಾಹಾ ।** (ವಾಯವ್ಯ ಕೋಣೇ)

**35.ಓಂ ಶಬಲಾಯ ಸ್ವಾಹಾ ।**

**36.ಓಂ ಸನಕಾದಿ ಮನುಷ್ಯೇಭ್ಯೋ ಹಂತ ॥** (ಹೊರಗೆ ಅಂಗಣದಲ್ಲಿ ನೀರನ್ನು ಚೆಲ್ಲಿ ಅದರ ಮೇಲೆ) **ಶ್ವಚಂಡಾಲಪತಿತಭೂತವಾಯಸೇಭ್ಯಃ** (ಎಂದು ಬಲಿಯನ್ನು ಹಾಕಬೇಕು.)

**ಇಂದ್ರವಾರುಣವಾಯವ್ಯಾ ಯಾಮ್ಯಾ ವೈ ನೈರ್ಋತಿಕಾಶ್ಚ ಯೇ ।**
**ತೇ ಕಾಕಾಃ ಪ್ರತಿಗೃಹ್ಣಂತು ಭೂಮ್ಯಾಂ ಪಿಂಡಂ ಮಯೋಜ್ಝಿತಮ್ ॥**

(ಇತಿ ಪಿತೃಯಜ್ಞಶೇಷೇಣ ದದ್ಯಾತ್ ॥)

**ಯೇ ಭೂತಾಃ ಪ್ರಚರಂತಿ ದಿವಾನಕ್ತಂ ಬಲಿಮಿಚ್ಛಂತೋ ವಿತುದಸ್ಯ ಪ್ರೇಷ್ಯಾಃ।**
**ತೇಭ್ಯೋ ಬಲಿಂ ಪುಷ್ಟಿಕಾಮೋ ದದಾಮಿ ಮಯಿ ಪುಷ್ಟಿಂ**
**ಪುಷ್ಟಿಪತಿರ್ದದಾತು॥**

(ಬಲಿಹಾಕಿದ ಮೇಲೆ ಅಂಗಣದಲ್ಲಿ ದನ ಕರೆಯುವಷ್ಟು ಕಾಲ ನಿಂತು ಅತಿಥಿಗಳನ್ನು ನಿರೀಕ್ಷಿಸಬೇಕು. ಆಮೇಲೆ ಕೈಕಾಲು ತೊಳೆದು ಆಚಮನ ಮಾಡಿ, ಒಳಗೆ ಬರುವಾಗ ಈ ಮಂತ್ರ ಪಠಿಸಬೇಕು.)

**ಶಾಂತಾ ಪೃಥಿವೀ ಶಿವಮಂತರಿಕ್ಷಂ ದ್ಯೌರ್ನೋ ದೇವ್ಯಭಯಂ**

ನೋ ಅಸ್ತು । ಶಿವಾ ದಿಶಃ ಪ್ರದಿಶ ಉದ್ದಿಶೋನ ಆಪೋ ವಿಶ್ವತಃ ಪರಿಪಾಂತು ಸರ್ವತಃ ॥ ಓಂ ಶಾಂತಿಃ ಶಾಂತಿಃ ಶಾಂತಿಃ॥

ಸರ್ವಾರಿಷ್ಟಶಾಂತಿರಸ್ತು ॥

ಯಸ್ಯಸ್ಮೃತ್ಯಾ....... ಅನೇನ ಬಲಿಹರಣೇನ ಭಗವಾನ್ ಮುಖ್ಯ ಪ್ರಾಣಾಂತರ್ಯಾಮಿ ಶ್ರೀವಿಷ್ಣುಃ ಪ್ರೀಯತಾಂ ॥ ಶ್ರೀಕೃಷ್ಣಾರ್ಪಣಮಸ್ತು॥

॥ ಇತಿ ಬಲಿಹರಣಮ್ ॥

# ವಿಭಾಗ - 5

## 1. ರಾತ್ರಿ ಪೂಜಾ ವಿಧಾನಂ

1. **ರಾತ್ರಿ ಪೂಜಾ :**

**ಆಚಮ್ಯ – ಪ್ರಾಣಾನಾಯಮ್ಯ – ಶುಭತಿಥೌ – ರಾತ್ರೌ ಶ್ರೀ ಲಕ್ಷ್ಮೀನಾರಾಯಣಸ್ಯ, ಗಂಧ ಪುಷ್ಪಾದಿ ಪಂಚೋಪಚಾರ ಪೂಜಾಂ ವಾ ಷೋಡಶೋಪಚಾರ ಪೂಜಾಂ ವಾ ಕರಿಷ್ಯೇ ।**

2. **ಘಂಟಾನಾದಂ ಕೃತ್ವಾ :**

**ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಂ ।**
**ಕುರು (ಕುರ್ವೇ) ಘಂಟಾರವಂ ತತ್ರೇ ದೇವತಾऽऽಹ್ವಾನಲಾಂಛನಂ ॥**

**ನಮೋ ಬ್ರಹ್ಮಣ್ಯ ದೇವಾಯ ಗೋಬ್ರಾಹ್ಮಣ ಹಿತಾಯ ಚ ।**
**ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥**

**ಶ್ರೀಸೂಕ್ತಂ – ಪಠಿತ್ವಾ, ಓಂ ನಮೋ ನಾರಾಯಣಾಯ ಓಂ**
**ಶ್ರೀ ಲಕ್ಷ್ಮೀನಾರಾಯಣಾಯ ನಮಃ । ಧ್ಯಾಯಾಮಿ ।**
**ಶ್ರೀ ಲಕ್ಷ್ಮೀನಾರಾಯಣಾಯ ನಮಃ । ಆವಾಹಯಾಮಿ ।**
**ಶ್ರೀ ಲಕ್ಷ್ಮೀನಾರಾಯಣಾಯ ನಮಃ । ಆಸನಂ ಸಮರ್ಪಯಾಮಿ ।**
**ಶ್ರೀ ಲಕ್ಷ್ಮೀನಾರಾಯಣಾಯ ನಮಃ । ಪಾದಯೋಃ ಪಾದ್ಯಂ ಸಮರ್ಪಯಾಮಿ ।**
**ಶ್ರೀ ಲಕ್ಷ್ಮೀನಾರಾಯಣಾಯ ನಮಃ । ಹಸ್ತಯೋಃ ಅರ್ಘ್ಯಂ ಸಮರ್ಪಯಾಮಿ ।**
**ಶ್ರೀ ಲಕ್ಷ್ಮೀನಾರಾಯಣಾಯ ನಮಃ । ಆಚಮನೀಯಂ ಸಮರ್ಪಯಾಮಿ ।**

---

1. ರಾತ್ರಿಪೂಜೆಯಲ್ಲಿ ರಾತ್ರಿಯಲ್ಲಿ ಹೊಸದಾಗಿ ಅನ್ನಾದಿಗಳನ್ನು ತಯಾರಿಸಿದ್ದರೆ ಅದನ್ನು ನಿವೇದಿಸಬೇಕು. ಫಲಾಹಾರಾದಿಗಳನ್ನೂ ನಿವೇದಿಸದೇ ತಿನ್ನಬಾರದು. ಹಾಲು, ತೆಂಗಿನಕಾಯಿ, ಬಾಳೆಹಣ್ಣು ಇವುಗಳನ್ನು ನಿವೇದಿಸಿಯೆ ಭುಂಜಿಸಬೇಕು. ರಾತ್ರಿಪೂಜೆಯಲ್ಲಿ ದೇವರಿಗೆ ಸ್ನಾನವಿಲ್ಲ.

ಶ್ರೀ ಲಕ್ಷ್ಮೀನಾರಾಯಣಾಯ ನಮಃ। ಸ್ನಾನಂ ಸಮರ್ಪಯಾಮಿ।
ಶ್ರೀ ಲಕ್ಷ್ಮೀನಾರಾಯಣಾಯ ನಮಃ। ವಸ್ತ್ರಂ ಸಮರ್ಪಯಾಮಿ।
ಶ್ರೀ ಲಕ್ಷ್ಮೀನಾರಾಯಣಾಯ ನಮಃ। ಗಂಧಾನ್ ಧಾರಯಾಮಿ।

3. **ಅರ್ಚನಂ :**

ಶ್ರೀಕೃಷ್ಣಃ ಕಮಲಾನಾಥೋ ವಾಸುದೇವಃ ಸನಾತನಃ।
ವಸುದೇವಾತ್ಮಜಃ ಪುಣ್ಯೋ ಲೀಲಾಮಾನುಷ ವಿಗ್ರಹಃ।
ಕೇಶವಾಯ ನಮಃ । ಶ್ರೀಕೃಷ್ಣಾಯ ನಮಃ । ಮತ್ಸ್ಯಾಯ ನಮಃ । ಕಲ್ಕಿನೇ ನಮಃ।

4. **ಧೂಪಂ :**

ವನಸ್ಪತ್ಯುದ್ಭವೋ ದಿವ್ಯೋ ಗಂಧಾಢ್ಯೋ ಗಂಧ ಉತ್ತಮಃ।
ಆಘ್ರೇಯಃ ಸರ್ವದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಂ॥
ಓಂ ನಮೋ ನಾರಾಯಣಾಯ ಧೂಪಮ್ ಆಘ್ರಾಪಯಾಮಿ।

5. **ದೀಪಮಂತ್ರ :**

ಸಾಜ್ಯಂ ತ್ರಿವರ್ತಿಸಂಯುಕ್ತಂ ವಹ್ನಿನಾ ಯೋಜಿತಾಂ ಮಯಾ।
ಗೃಹಾಣ ಮಂಗಳಂ ದೀಪಂ ತ್ರೈಲೋಕ್ಯ ತಿಮಿರಾಪಹ।
ಓಂ ನಮೋ ನಾರಾಯಣಾಯ ಏಕಾರ್ತಿಕ್ಯ ದೀಪಂ ಸಮರ್ಪಯಾಮಿ॥

6. **ನೈವೇದ್ಯಂ :**

ಓಂ ಭೂರ್ಭುವಸ್ಸ್ವಃ। ಋತಂ ತ್ವಾ ಸತ್ಯೇನ ಪರಿಷಿಂಚಾಮಿ।
ಓಂ ಪ್ರಾಣಾಯ ಸ್ವಾಹಾ ...... ಬ್ರಹ್ಮಣೇ ನಮಃ।
ಓಂ ನಮೋ ನಾರಾಯಣಾಯ ಕ್ಷೀರಾದಿ ನೈವೇದ್ಯಂ ಸಮರ್ಪಯಾಮಿ।
ನಾನಾ ಫಲಾನಿ ದಿವ್ಯಾನಿ ಸ್ವಾದೂನಿ ಸುರಭೀಣಿ ಚ।
ಅನಿಷಿದ್ಧಾನಿ ದೇವೇಶ ಭಕ್ತ್ಯಾ ದತ್ತಾನಿ ಗೃಹ್ಯತಾಂ॥
ಫಲ, ಗುಡ –ಕ್ಷೀರಾದಿ ನೈವೇದ್ಯಂ ಸಮರ್ಪಯಾಮಿ। ಪುನಃ ಧೂಪದೀಪೌ।
ಮಂಗಳ ನೀರಾಜನಂ – ಜಯತ್ಯಜೋಽಖಂಡ.......
ಮಂತ್ರಪುಷ್ಪಂ ಸಮರ್ಪಯಾಮಿ।

ಪ್ರದಕ್ಷಿಣ – ನಮಸ್ಕಾರಾನ್ ಸಮರ್ಪಯಾಮಿ । ಯಸ್ಯ ಸ್ಮೃತ್ಯಾ..... ಅನೇನ ರಾತ್ರೌ ಲಕ್ಷ್ಮೀನಾರಾಯಣಸ್ಯ ಷೋಡಶೋಪಚಾರ ಪೂಜಾ ಕರ್ಮಣಾ ಭಗವಾನ್ ಮಧ್ವಾಂತರ್ಗತ ಗೋಪಾಲಕೃಷ್ಣಃ ಪ್ರೀಯತಾಂ।

7. ರಾತ್ರಿ ಸೂಕ್ತಮ್ :

ಓಂ ರಾತ್ರೀ ವ್ಯಖ್ಯದಾಯತೀ ಪುರುತ್ರಾ ದೇವ್ಯ (ಅ) ೧ ಕ್ಷಭಿಃ ।

ವಿಶ್ವಾ ಅಧಿ ಶ್ರಿಯೋಽಧಿತ ॥ ೧ ॥

ಓರ್ವಪ್ರಾ ಅಮರ್ತ್ಯಾ ನಿವತೋ ದೇವ್ಯ (ಉ) ೧ ದ್ವತಃ॥

ಜ್ಯೋತಿಷಾ ಬಾಧತೇ ತಮಃ ॥ ೨ ॥

ನಿರುಸ್ವಸಾರಮಸ್ಕೃತೋಷಸಂ ದೇವ್ಯಾಯತೀ । ಅಪೇದು ಹಾಸತೇ ತಮಃ ॥ ೩ ॥

ಸಾನೋ ಅದ್ಯಯಸ್ಯಾ ವಯಂ ನಿ ತೇ ಯಾಮನ್ನವಿಕ್ಷ್ಮಹಿ। ವೃಕ್ಷೇ ನ ವಸತಿಂ ವಯಃ ॥ ೪ ॥

ನಿ ಗ್ರಾಮಾಸೋ ಅವಿಕ್ಷತ ನಿ ಪದ್ವಂತೋ ನಿ ಪಕ್ಷಿಣಃ । ನಿ ಶ್ಯೇನಾಸಶ್ಚಿದರ್ಥಿನಃ ॥ ೫ ॥

ಯಾವಯಾ ವೃಕ್ಯ (ಅಂ) ೧ ವೃಕಂ ಯವಯಸ್ತೇ- ನಮೂರ್ಮ್ಯೇ ॥ ಅಥಾ ನಃ ಸುತರಾ ಭವ ॥ ೬ ॥

ಉಪ ಮಾ ಪೇಪಿಶತ್ತಮಃ ಕೃಷ್ಣಂ ವ್ಯಕ್ತಮಸ್ಥಿತ ॥ ಉಷ ಋಣೇವ ಯಾತಯ ॥ ೭ ॥

ಉಪ ತೇ ಗಾ ಇವಾಕರಂ ವೃಣೀಷ್ವ ದುಹಿತರ್ದಿವಃ । ರಾತ್ರಿ ಸ್ತೋಮಂ ನ ಜಿಗ್ಯುಷೇ ॥ ೮ ॥

ಆ ರಾತ್ರೀ ಪಾರ್ಥಿವಂ ರಜಃ ಪಿತರಃ ಪ್ರಾಯುಧಾಮಭಿಃ॥ ದಿವಃ ಸದಾಂಸಿ ಬೃಹತೀ ವಿ ತಿಷ್ಠ ಸ ಆತ್ವೇಷಂ ವರ್ತತೇ ತಮಃ ॥ ೧॥

ಯೇ ತೇ ರಾತ್ರಿ ನೃಚಕ್ಷಸೋ ಯುಕ್ತಾಸೋ ನವತಿರ್ನವ। ಅಶೀತಿಃ ಸಂತ್ವಷ್ಟಾ ಉತೋ ತೇ ಸಪ್ತ ಸಪ್ತತೀಃ ॥ ೨ ॥

ರಾತ್ರೀಂ ಪ್ರಪದ್ಯೇ ಜನನೀಂ ಸರ್ವಭೂತನಿವೇಶನೀಮ್। ಭದ್ರಾಂ ಭಗವತೀಂ ಕೃಷ್ಣಾಂ ವಿಶ್ವಸ್ಯ ಜಗತೋ ನಿಶಾಮ್ ॥ ೩॥

ಸಂವೇಶಿನೀಂ ಸಂಯಮಿನೀಂ ಗ್ರಹನಕ್ಷತ್ರಮಾಲಿನೀಮ್। ಪ್ರಪನ್ನೋಽಹಂ ಶಿವಾಂ ರಾತ್ರೀಂ ಭದ್ರೇ ಪಾರಮಶೀಮಹಿ। ಭದ್ರೇ ಪಾರಮಶೀಮಹ್ಯೋಂ ನಮಃ ॥ ೪ ॥

ಸ್ತೋಷ್ಯಾಮಿ ಪ್ರಯತೋ ದೇವೀಂ ಹಿರಣ್ಯಾಂ ಬಹ್ವೃಚಪ್ರಿಯಾಮ್ । ಸಹಸ್ರಸಮ್ಮಿತಾಂ ದುರ್ಗಾಂ ಜಾತವೇದಸೇ ಸುನವಾಮ ಸೋಮಮ್ ॥ ೫ ॥

ಶಾಂತ್ಯರ್ಥಂ ತದ್ವಿಜಾತೀನಾಮೃಷೀಭಿಃ ಸೋಮಪಾಶ್ರಿತಾಃ।
ಋಗ್ವೇದೇ ತ್ವಂ ಸಮುತ್ಪನ್ನಾಽರಾತ್ರೀಯತೋ ನಿ ದಹಾತಿ
ವೇದಃ ॥ ೬ ॥

ಯೇ ತ್ವಾಂ ದೇವಿ ಪ್ರಪದ್ಯಂತಿ ಬ್ರಾಹ್ಮಣಾ ಹವ್ಯವಾಹನೀಮ್।
ಅವಿದ್ಯಾ ಬಹುವಿದ್ಯಾ ವಾ ಸನಃ ಪರ್ಷದತಿ ದುರ್ಗಾಣಿ
ವಿಶ್ವಾ॥೭ ॥

ಯೇ ಅಗ್ನಿವರ್ಣಾಂ ಶುಭಾಂ ಸೌಮ್ಯಾಂ ಕೀರ್ತಯಿಷ್ಯಂತಿ ಯೇ
ದ್ವಿಜಾಃ । ತಾಂ ಸ್ತಾರಯತಿ ದುರ್ಗಾಣಿ ನಾವೇವ ಸಿಂಧುಂ
ದುರಿತಾತ್ಯಗ್ನಿಃ ॥ ೮ ॥

ದುರ್ಗೇಷು ವಿಷಮೇ ಘೋರೇ ಸಂಗ್ರಾಮೇ ರಿಪುಸಂಕಟೇ।
ಅಗ್ನಿಚೋರ ನಿಪಾತೇಷು ದುಷ್ಟ ಗ್ರಹನಿವಾರಣೇ ॥ ೯ ॥

ದುರ್ಗೇಷು ವಿಷಮೇಷು ತ್ವಂ ಸಂಗ್ರಾಮೇಷು ವನೇಷು ಚ ।
ಮೋಹಯಿತ್ವಾ ಪ್ರಪದ್ಯಂತೇ ತೇಷಾಂ ಮೇ ಅಭಯಂ ಕುರು
ತೇಷಾಂ ಮೇ ಅಭಯಂ ಕುರ್ವೊನ್ನಮಃ ॥ ೧೦ ॥

ಕೇಶಿನೀಂ ಸರ್ವಭೂತಾನಾಂ ಪಂಚಮೀತಿ ಚ ನಾಮ ಚ। ಸಾ ಮಾಂ ಸಮಾನಿಶಾದೇವೀ ಸರ್ವತಃ ಪರಿರಕ್ಷತು। ಸರ್ವತಃ ಪರಿರಕ್ಷತ್ವೋನ್ನಮಃ ॥ ೧೧ ॥

ತಾಮಗ್ನಿವರ್ಣಾಂ ತಪಸಾ ಜ್ವಲಂತೀಂ ವೈರೋಚನೀಂ ಕರ್ಮಫಲೇಷು ಜುಷ್ಟಾಮ್ । ದುರ್ಗಾಂ ದೇವೀಂ ಶರಣಮಹಂ ಪ್ರಪದ್ಯೆ ಸುತರಸಿ ತರಸೇ ನಮಃ । ಸುತರಸಿ ತರಸೇ ನಮಃ ॥೧೨॥

ದುರ್ಗಾ ದುರ್ಗೇಷು ಸ್ಥಾನೇಷು ಶಂ ನೋ ದೇವಿ–ರಭಿಷ್ಟಯೇ । ಯ ಇಮಂ ದುರ್ಗಾಸ್ತವಂ ಪುಣ್ಯಂ ರಾತ್ರೌ ರಾತ್ರೌ ಸದಾ ಪಠೇತ್ ॥ ೧೩ ॥

ರಾತ್ರಿಃ ಕುಶಿಕಃಸೌಭರೋ ರಾತ್ರಿರ್ವಾ ಭಾರದ್ವಾಜೀ ರಾತ್ರಿಸ್ತವಂ ಗಾಯತ್ರಂ । ರಾತ್ರೀಸೂಕ್ತಂ ಜಪೇನ್ನಿತ್ಯಂ ತತ್ಕಾಲಮುಪಪದ್ಯತೇ ॥ ೧೪ ॥

ಉಲೂಕಯಾತುಂ ಶುಶುಲೂಕಯಾತುಂ ಜಹಿಶ್ವಯಾತು–ಮುತ ಕೋಕಯಾತುಮ್ । ಸುಪರ್ಣಯಾತುಮ್ಮೃತ ಗೃಧ್ರಯಾತುಂ ದೃಷದೇವ ಪ್ರಮ್ಮೃಣ ರಕ್ಷ ಇಂದ್ರ ॥೧೫॥

ಪಿಶಂಗಭೃಷ್ಟಿಮಂ ಭೃಣಂ ಪಿಶಾಚಿಮಿಂದ್ರ ಸಂ ಮೃಣ। ಸರ್ವಂ ರಕ್ಷೋ ನಿಬರ್ಹಯ ॥ ೧೭ ॥

ಯತ ಇಂದ್ರ ಭಯಾಮಹೆ ತತೋ ನೋ ಅಭಯಂ ಕೃಧಿ । ಮಘವಚ್ಛಗ್ಧಿ ತವ ತನ್ನ ಊತಿಭಿರ್ವಿದ್ವಿಷೋ ವಿಮೃದೋ ಜಹಿ॥ ಸ್ವಸ್ತಿದಾ ವಿಶಸ್ಪತಿರ್ವೃತ್ರಹಾ ವಿಮೃಧೋ ವಶೀ ॥ ವೃಷೇಂದ್ರಃ ಪುರ ಏತು ನಃ ಸೋಮಪಾ ಅಭಯಂಕರಃ ॥ ಹಿಮಸ್ಯತ್ವಾ ಜರಾಯುಣಾ ಶಾಲೇ ಪರಿವ್ಯಯಾಮಸಿ । ಉತಹ್ರದೋ ಹಿ ನೋ ಧಿಯೋಽಗ್ನಿರ್ದದಾತು ಭೇಷಜಮ್ ॥೧೭ ॥

ಶಿಶೀತ ಹ್ರದೊ ಹಿ ನೋ ಧಿಯೋಽಗ್ನಿರ್ದದಾತು ಭೇಷಜಮ್। ಅಂತಿಕಾಮಗ್ನಿಮಜನಯ ದೂರ್ವಾತಃ ಶಿಶುಲಾಗಮತ್ ॥ ೧೮॥ ಅಜಾತಪುತ್ರಪಕ್ಷಾಯಾ ಹೃದಯಂ ಮಮ ದೂಯತೇ। ವಿಪುಲಂ ವನಂ ಬಹ್ವಾಕಾಶಂ ಚರ ಜಾತವೇದಃ ಕಾಮಾಯ ॥೧೯ ॥

ಮಾಂ ಚ ರಕ್ಷ ಪುತ್ರಾಂಶ್ಚ ಶರಣಮಭೂತ್ತವ । ಪಿಂಗಾಕ್ಷ ಲೋಹಿತಗ್ರೀವ ಕೃಷ್ಣವರ್ಣ ನಮೋಽಸ್ತು ತೇ ॥ ೨೦ ॥



ಅಸ್ಮಾನ್ನಿ ಬರ್ಹಣಸ್ಯೇನಾಂ ಸಾಗರಸ್ಯೋರ್ಮಯೋ ಯಥಾ।
ಇಂದ್ರಃ ಕ್ಷತ್ರಂ ದದಾತು ವರುಣಮಭಿಷಿಂಚತು ॥ ೨೧ ॥

ಶತ್ರವೋ ನಿಧನಂ ಯಾಂತು ಜಯ ತ್ವಂ ಬ್ರಹ್ಮತೇಜಸಾ।
ಕಪಿಲಜಟೇಂ ಸರ್ವಭಕ್ಷಂ ಚಾಗ್ನಿಂ ಪ್ರತ್ಯಕ್ಷದೈವತಮ್ ॥೨೨॥

ವರುಣಂ ಚ ವಶಾಮ್ಯಗ್ರೇ ಮಮ ಪುತ್ರಾಂಶ್ಚ ರಕ್ಷತು । ಮಮ
ಪುತ್ರಾಂಶ್ಚ ರಕ್ಷತ್ವೋನ್ನಮಃ ॥ ೨೩ ॥

ಸಾಗ್ರಂ ವರ್ಷಶತಂ ಜೀವ ಪಿಬ ಖಾದ ಚ ಮೋದ ಚ।
ದುಃಖಿತಾಂಶ್ಚ ದ್ವಿಜಾಂಶ್ಚೈವ ಪ್ರಜಾಂ ಚ ಪಶು ಪಾಲಯ॥೨೪॥

ಯಾವದಾದಿತ್ಯಸ್ತಪತಿ ಯಾವದ್ ಭ್ರಾಜತಿ ಚಂದ್ರಮಾಃ।
ಯಾವದ್ವಾಯುಃ ಪ್ಲವಾಯತಿ ತಾವಜ್ಜೀವ ಜಯಾ ಜಯ
॥೨೫॥

ಯೇನ ಕೇನ ಪ್ರಕಾರೇಣ ಕೋಽಹಿನಾ ಮನುಜೀವತಿ ।
ಪರೇಷಾಮುಪಕಾರಾರ್ಥಂ ಯಜ್ಜೀವತಿ ಸ ಜೀವತಿ । ಏ ತಾಂ
ವೈಶ್ವಾನರೀಂ ಸರ್ವದೇವ ನಮೋಽಸ್ತು ತೇ ॥ ೨೬ ॥

ನ ಚೋರ ಭಯಂ ನ ಚ ಸರ್ಪಭಯಂ ನ ಚ ವ್ಯಾಘ್ರಭಯಂ ನ

ಚ ಮೃತ್ಯುಭಯಮ್ । ಯಸ್ಯಾಪಮೃತ್ಯುರ್ನ ಚ ಮೃತ್ಯುಃ ಸರ್ವಂ ಲಭತೇ ಸರ್ವಂ ಜಯತೇ ॥ ೨೭ ॥

ರಕ್ಷಾಣೋ ಅಗ್ನೆ ತವ ರಕ್ಷಣೇಭೀರಾರಕ್ಷಾಣಂ ಸುಮುಖ ಪ್ರೀಣಾನಃ ॥ ೨೮ ॥

ಪ್ರತಿಷ್ಫುರ ವಿರುಜ ವೀಡ್ವಂಹೋ ಜಹಿ ರಕ್ಷೋ ಮಹಿಚಿದ್ವಾವೃಧಾನಂ । ಬ್ರಹ್ಮಚ ತೇ ಜಾತವೇದೋ ನಮಶ್ಚೇಯಂ ಚ ಗೀಃ ಸದಮಿದ್ ವರ್ಧನೀಭೂತ ರಕ್ಷಾಣೊ ಅಗ್ನೆ ತನಯಾನಿ ತೋಕಾ ರಕ್ಷೋತನಸ್ತನ್ವೋಽಕ್ಷಿ ಅಪ್ರಯುಚ್ಛನ್ ॥

ಯೇ ತೆ ಪಂಥಾಃ ಸವಿತಃ ಪೂರ್ವ್ಯಾಸೋ ರಣೇವಃ ಸುಕೃತಾ ಅಂತರಿಕ್ಷೆ॥ ತೇಭಿರ್ನೋ ಅದ್ಯ ಪಥಿಭಿಃ ಸುಗೇಭೀ ರಕ್ಷಾಚನೋ ಅಧಿ ಚ ಬ್ರೂಹಿ ದೇವ ॥

ಅದ್ಯಾದ್ಯಾ ಶ್ವಶ್ವ ಇಂದ್ರ ತ್ರಾಸ್ವ ಪರೇ ಚ ನಃ । ವಿಶ್ವಾ ಚ ನೋ ಜರಿತೃಂತ್ಸತ್ಪತೆ ಅಹಾ ದಿವಾ ನಕ್ತಂ ಚ ರಕ್ಷಿಷಃ । ಸ್ವಪ್ನ ಸ್ವಪ್ನಾಧಿಕರಣೆ ಸರ್ವಂ ನಿಷ್ಪಾಪಯಾ ಜರಮ್ । ತಸ್ಮಿನ್ ಹಿ ಸರ್ಪಸ್ಸುಧಿತೆಸ್ತೇನಸ್ತ್ವಾ ಸ್ವಾಪಯಾಮಸಿ ॥

ಸರ್ಪಃ ಸರ್ಪೋ ಅಜಗರಸ್ಸರ್ಪಿರವಿಷೋ ಮಹಾನ್ । ತಸ್ಯ ಶುಷ್ಕಾಕ್ತಿಸ್ಸಿಂಧವಸ್ತಸ್ಯ ಗಾಧ ಮಶೀಮಹಿ । ಕಾಳಿಕೋ ನಾಮ ಸರ್ಪೋ ನವನಾಗಸಹಸ್ರಫಣಃ। ಯಮುನಹ್ರದೇ ಸೋ ಜಾತೋಽ ಯೋ ನಾರಾಯಣ ವಾಹನಃ । ಯದಿ ಕಾಳಿಕದೂತಸ್ಯ ಯದಿ ಕಾಃಕಾಳಿಕಾದ್ಭಯಮ್ ॥

ಜನ್ಮಭೂಮಿ ಪರಿಕ್ರಾಂತೋ ನಿರ್ವಿಷೋ ಯಾತಿ ಕಾಳಿಕಃ। ಆಯಾಹೀಂದ್ರ ಪಥಿಭಿರೀಳಿತೇಭಿರ್ಯಜ್ಞಮಿಮಂ ನೋ ಭಾಗಧೇಯಂ ಜುಷಸ್ವ ॥

ತೃಪ್ತಾ ಜಹುರ್ಮಾತುಳಸ್ಯೇವ ಯೋಷಾ ಭಾಗಸ್ತೇ ಪೈತೃಷ್ವಸೇಯೀ ವಪಾಮಿವ।ಯಶಸ್ಕರಂ ಬಲವಂತಂ ಪ್ರಭುತ್ವಂ ತವೇವ ರಾಜಾಧಿಪತಿರ್ಬಭೂವ । ಸಂಕೀರ್ಣನಾಗಾಶ್ವಪತಿರ್ನರಾಣಾಂ ಸುಮಾಂಗಲ್ಯಂ ಸತತಂ ದೀರ್ಘಮಾಯುಃ ॥

ಕರ್ಕೋಟಕೋ ನಾಮ ಸರ್ಪೋ ಯೋ ದೃಷ್ಟೀರ್ವಿಷ ಉಚ್ಯತೇ । ತಸ್ಯ ಸರ್ಪಸ್ಯ ಸರ್ಪತ್ವಂ ತಸ್ಮೈ ಸರ್ಪ ನಮೋಽಸ್ತುತೇ । ನಮೋ ಅಸ್ತು ಸರ್ಪೇಭ್ಯೋ ಯೇ ಕೇಚ ಪೃಥಿವಿಮನು ॥

ಯೇ ಅಂತರಿಕ್ಷೇ ಯೇ ದಿವಿ ತೇಭ್ಯಸ್ಸರ್ಪೇಭ್ಯೋ ನಮಃ। ಯೇ
ದೋರೋಚನೇ ದಿವಿ ಯೇವಾ ಸೂರ್ಯಸ್ಯ ರಶ್ಮಿಷು।
ಯೇಷಾಮಪ್ಸುಷದಃ ಕೃತಃ ತೇಭ್ಯಃ ಸರ್ಪೇಭ್ಯೋ ನಮಃ ॥
ಯಾ ಇಷವೊ ಯಾತುಧಾನಾನಾಂ ಯೇ ವಾ ವನಸ್ಪತಿರನು।
ಯೇ ವಾ ವಟೇಷು ಶೇರತೇ ತೇಭ್ಯಃ ಸ್ಸರ್ಪೇಭ್ಯೋ ನಮಃ ॥
ನರ್ಮದಾಯ್ಯೆ ನಮಃ ಪ್ರಾತರ್ನರ್ಮದಾಯ್ಯೆ ನಮೋ ನಿಶಿ ।
ನಮೋಽಸ್ತು ನರ್ಮದೇ ತುಭ್ಯಂ ತ್ರಾಹಿ ಮಾಂ ವಿಷ ಸರ್ಪತಃ ॥
ಭೋ ಸರ್ಪಭದ್ರ ಭದ್ರಂ ತೇ ದೂರಂ ಗಚ್ಛ ಮಹಾಯಶಾಃ।
ಜನ್ಮೇಜಯಸ್ಯ ಯಜ್ಞಾಂತೆ ಆಸ್ತೀಕವಚನಂ ಸ್ಮರ ।
ಆಸ್ತೀಕವಚನಂ ಶೃತ್ವಾ ಯಸ್ಸರ್ಪೋ ನ ನಿವರ್ತತೆ ॥
ಶತಧಾ ಭಿದ್ಯತೆ ಮೂರ್ಧ್ನಿ ಶಿಂಶುವೃಕ್ಷ ಫಲಂ ಯಥಾ।
ಅಗಸ್ತ್ಯಂ ಮಾಧವಂ ಚೈವ ಮುಚುಕುಂದಂ ಮಹಾಮುನಿಂ ।
ಶ್ವಫಲ್ಕಮಾಸ್ತಿಕಂ ಚೈವ ಪಂಚೈತಾನಿ ಸ್ಮರೇನ್ನಿಶಿ ॥
ಕುಷುಂಭಕಸ್ತದಬ್ರವೀದ್ಗಿರೇಃ ಪ್ರವರ್ತಮಾನಕಃ ।
ವೃಶ್ಚಿಕಸ್ಯಾರಸಂ ವಿಷಮ ರಸಂ ವೃಶ್ಚಿಕತೆ ವಿಷಮ್ ॥

ಯೇ ಮೇ ರಾಜನ್ ಯುಜ್ಯೋ ವಾ ಸಖಾ ವಾ ಸ್ವಪ್ನೇ ಭಯಂ ವಿಷಹ್ಯಮಾಹ ॥

ಸ್ತೇನೊ ವಾಯೋ ದಿಪ್ಸತಿನೋ ವೃಕೋ ವಾ ತ್ವಂ ತಸ್ಮಾದ್ ವರುಣ ಪಾಹ್ಯಸ್ಮಾನ್ ॥

ಮಾ ಬಿಭೇರ್ನಮರಿಷ್ಯಸಿ ಪರಿ ತ್ವಾಪಾಮಿ ಸರ್ವತಃ । ಘನೇನ ಹಸ್ಮಿ ವೃಶ್ಚಿಕಮಹಂ ದಂಡೆನಾಗತಮ್ ॥

ಆದಿತ್ಯರಥವೇಗೇನ ವಿಷ್ಣೋರ್ಬಾಹುಬಲೇನ ಚ । ಗರುಡ ಪಕ್ಷ ನಿಪಾತೇನ ಭೂಮಿಂ ಗಚ್ಛ ಮಹಾಯಶಾಃ ॥

ಗರುಡಸ್ಯ ಜಾತಮಾತ್ರೇಣ ತ್ರಯೋ ಲೋಕಾಃ ಪ್ರಕಂಪಿತಾಃ। ಪ್ರಕಂಪಿತಾ ಮಹೀ ಸರ್ವಾ ಸಶೈಲವನಕಾನನಾ ॥

ಗಗನಂ ನಷ್ಟಚಂದ್ರಾರ್ಕಂ ಜ್ಯೋತಿಷಂ ನ ಪ್ರಕಾಶತೇ । ದೇವತಾ ಭಯಭೀತಾಶ್ಚ ಮಾರುತೋ ನ ಪ್ಲವಾಯತಿ। ಮಾರುತೋ ನ ಪ್ಲವಾಯತ್ಯೋಂ ನಮಃ ॥

॥ ಇತಿ ರಾತ್ರಿ ಸೂಕ್ತಮ್ ಸಮಾಪ್ತಮ್ ॥

## 2. ಅಷ್ಟಾವಧಾನ ಸೇವಾ

ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಮ್ । ವಿಶ್ವಂ ನಾರಾಯಣಂ ದೇವಮಕ್ಷರಂ ಪರಮಂ ಪದಮ್ । ವಿಶ್ವತಃ ಪರಮಾನ್ನಿತ್ಯಂ ವಿಶ್ವಂ ನಾರಾಯಣಗ್ಂ ಹರಿಮ್। ವಿಶ್ವಮೇವೇದಂ ಪುರುಷಸ್ತದ್ವಿಶ್ವಮುಪಜೀವತಿ । ಪತಿಂ ವಿಶ್ವಸ್ಯಾತ್ಮೇಶ್ವರಗ್ಂ ಶಾಶ್ವತಗ್ಂ ಶಿವಮಚ್ಯುತಮ್ । ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಮ್। ನಾರಾಯಣ ಪರೋ ಜ್ಯೋತಿರಾತ್ಮಾ ನಾರಾಯಣಃ ಪರಃ। ನಾರಾಯಣ ಪರಂ ಬ್ರಹ್ಮ ತತ್ತ್ವಂ ನಾರಾಯಣಃ ಪರಃ। ನಾರಾಯಣ ಪರೋಧ್ಯಾತಾ ಧ್ಯಾನಂ ನಾರಾಯಣಃ ಪರಃ ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿವಾ ॥

ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಸ್ಥಿತಃ। ಅನಂತಮವ್ಯಯಂ ಕವಿಗ್ಂ ಸಮುದ್ರೇಽನ್ತಂ ವಿಶ್ವ-

ಶಂಭುವಮ್। ಪದ್ಮಕೋಶ ಪ್ರತೀಕಾಶಗ್ಂ ಹೃದಯಂ
ಚಾಪ್ಯಧೋಮುಖಮ್ । ಅಧೋನಿಷ್ಟ್ಯಾ ವಿತಸ್ತ್ಯಾಂತೇ
ನಾಭ್ಯಾಮುಪರಿ ತಿಷ್ಠತಿ । ಜ್ವಾಲಮಾಲಾ ಕುಲಂ ಭಾತೀ
ವಿಶ್ವಸ್ಯಾಯತನಂ ಮಹತ್ । ಸನ್ತತಗ್ಂ ಶಿಲಾಭಿಸ್ತು
ಲಂಬತ್ಯಾಕೋಶಸನ್ನಿಭಮ್ । ತಸ್ಯಾನ್ತೇ ಸುಷಿರಗ್ಂ ಸೂಕ್ಷ್ಮಂ
ತಸ್ಮಿನ್‌ಥ್ಸರ್ವಂ ಪ್ರತಿಷ್ಠಿತವ್ । ತಸ್ಯ ಮಧ್ಯೇ
ಮಹಾನಗ್ನಿರ್ವಿಶ್ವಾರ್ಚಿರ್ವಿಶ್ವತೋ ಮುಖಃ।
ಸೋಽಗ್ರಭುಗ್ವಿಭಜನ್‌ತಿಷ್ಠನ್ನಾಹಾರ ಮಜರಃ ಕವಿಃ ।
ತಿರ್ಯಗೂರ್ಧ್ವಮಧಶ್ಶಾಯೀ ರಶ್ಮಯಸ್ತಸ್ಯ ಸನ್ತತಾ ।
ಸಂತಾಪಯತಿ ಸ್ವಂ ದೇಹಮಾಪಾದತಲಮಸ್ತಕಃ। ತಸ್ಯ ಮಧ್ಯೇ
ವಹ್ನಿಶಿಖಾ ಅಣೀಯೋರ್ಧ್ವಾ ವ್ಯವಸ್ಥಿತಃ।
ನೀಲತೋಯದಮಧ್ಯಸ್ಥಾದ್ವಿದ್ಯುಲ್ಲೇಖೇವ ಭಾಸ್ವರಾ ।
ನೀವಾರಶೂಕವತ್ತನ್ವೀ ಪೀತಾ ಭಾಸ್ವತ್ಯಣೂಪಮಾ ।
ತಸ್ಯಾಶ್ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ । ಸ ಬ್ರಹ್ಮಾ
ಸ ಶಿವ ಸ್ಸ ಹರಿ ಸ್ಸೇಂದ್ರ ಸ್ಸೋಽಕ್ಷರಃ ಪರಮ ಸ್ಸ್ವರಾಟ್ ॥

ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ। ತನ್ನೋ

ವಿಷ್ಣುಃ ಪ್ರಚೋದಯಾತ್ ॥

ಮಂತ್ರಪುಷ್ಪಂ :

ಓಂ ರಾಜಾಧಿರಾಜಾಯ ಪ್ರಸಹ್ಯ ಸಾ ಹಿನೇ ನಮೋ ವಯಂ

ವೈಶ್ರವಣಾಯ ಕುರ್ಮಹೇ ॥ ೧ ॥

ಸಮೇ ಕಾಮಾನ್ ಕಾಮಕಾಮಾಯ ಮಹ್ಯಂ ಕಾಮೇಶ್ವರೋ

ವೈಶ್ರವಣೋ ದದಾತು ॥ ೨ ॥

ಕುಬೇರಾಯ ವೈಶ್ರವಣಾಯ ಮಹಾರಾಜಾಯ ನಮಃ।

ಯೋ ವೈ ತಾಂ ಬ್ರಹ್ಮಣೋ ವೇದ ಅಮೃತೇನಾವೃತಾಂ

ಪುರೀಮ್ । ತಸ್ಮೈ ಬ್ರಹ್ಮ ಚ ಬ್ರಹ್ಮಾ ಚ ಆಯುಃ ಕೀರ್ತಿಂ ಪ್ರಜಾಂ

ದದುಃ ॥ ೩ ॥

ತಾಸಾಮಾವಿರಭೂತ್ ಶೌರಿಃ ಸ್ಮಯಮಾನ ಮುಖಾಂಬುಜಃ।

ಪೀತಾಂಬರಧರಃ ಸ್ರಗ್ವೀ ಸಾಕ್ಷಾತ್ ಮನ್ಮಥಮನ್ಮಥಃ ॥

ಯಸ್ಸರ್ವಗುಣ ಸಂಪೂರ್ಣಃ ಸರ್ವದೋಷವಿವರ್ಜಿತಃ।

ಪ್ರೀಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಸ್ಸುಹೃತ್ ॥

1. ಋಗ್ವೇದ :

ದೇವದೇವೋತ್ತಮ, ದೇವತಾ ಸಾರ್ವಭೌಮ, ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ, ಆದಿಮಧ್ಯಾಂತರಹಿತ, ಶ್ರೀ ಸೀತಾಪತೇ ಶ್ರೀರಾಮಚಂದ್ರ! ಪರಾಕ್ ಬಹುಪರಾಕ್ ! ಋಗ್ವೇದಪ್ರಿಯ ! ಋಗ್ವೇದಸೇವಾಮವಧಾರಯ।

ಓವರ್ ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಮ್। ಹೋತಾರಂ ರತ್ನಧಾತಮಮ್ ॥ ಅಗ್ನಿಃ ಪೂರ್ವೇಭಿರ್ಋಷಿಭಿರೀಡ್ಯೋ ನೂತನೈರುತ । ಸ ದೇವಾ ಏಹ ವಕ್ಷತಿ ॥ ಅಗ್ನಿನಾ ರಯಿಮಶ್ನವತ್ಪೋಷಮೇವ ದಿವೇದಿವೇ । ಯಶಸಂ ವೀರವತ್ತಮಮ್। ಅಗ್ನೇ ಯಂ ಯಜ್ಞಮಧ್ವರಂ ವಿಶ್ವತಃ ಪರಿಭೂರಸಿ । ಸ ಇದ್ದೇವೇಷು ಗಚ್ಛತಿ॥ ಅಗ್ನಿರ್ಹೋತಾ ಕವಿಕ್ರತುಃ ಸತ್ಯಶ್ಚಿತ್ರಶ್ರವಸ್ತಮಃ। ದೇವೋ ದೇವೇಭಿರಾಗಮತ್ ॥ ೧ ॥

ಯದಂಗ ದಾಶುಷೇ ತ್ವಮಗ್ನೇ ಭದ್ರಂ ಕರಿಷ್ಯಸಿ । ತವೇತ್ತತ್ಸತ್ಯಮಂಗಿರಃ ॥ ಉಪ ತ್ವಾಗ್ನೇ ದಿವೇ ದಿವೇ ದೋಷಾವಸ್ತರ್ಧಿಯಾ ವಯಮ್ । ನಮೋ ಭರಂತ ಏಮಸಿ। ರಾಜಂತಮಧ್ವರಾಣಾಂ ಗೋಪಾಮೃತಸ್ಯ ದೀದಿವಿಮ್। ವರ್ಧಮಾನಂ ಸ್ವೇ ದಮೇ ॥ ಸ ನಃ ಪಿತೇವ ಸೂನವೇಽಗ್ನೇ ಸೂಪಾಯನೋ ಭವ। ಸಚಸ್ವಾ ನಃ ಸ್ವಸ್ತಯೇ ಓಂ ಸ್ವಸ್ತಿ ।

2. ಯಜುರ್ವೇದ :

ದೇವದೇವೋತ್ತಮ, ದೇವತಾ ಸಾರ್ವಭೌಮ, ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ, ಯಜ್ಞರೂಪ, ಯದುಕುಲತಿಲಕ, ಯಾಗಾದಿಪ್ರಿಯ

ಸ್ವಾಮಿನ್, ಶ್ರೀಸೀತಾಪತೇ ಶ್ರೀರಾಮಚಂದ್ರ ! ಪರಾಕ್ ! ಯಜುರ್ವೇದ ಪ್ರಿಯ ಯಜುರ್ವೇದ ಸೇವಾಮವಧಾರಯ ।

ಓಮ್ ಇಷೇ ತ್ವೋರ್ಜೇ ತ್ವಾ ವಾಯವಃ ಸ್ಥೋಪಾಯವಃ ಸ್ಥ ದೇವೋ ವಃ ಸವಿತಾ ಪ್ರಾರ್ಪಯತು ಶ್ರೇಷ್ಠತಮಾಯ ಕರ್ಮಣ ಆ ಪ್ಯಾಯಧ್ವಮಘ್ನಿಯಾ ದೇವಭಾಗವಮೂರ್ಜಸ್ವತೀಃ ಪಯಸ್ವತೀಃ ಪ್ರಜಾವತೀರನಮೀವಾ ಅಯಕ್ಷ್ಮಾ ಮಾ ವಃ ಸ್ತೇನ ಈಶತ ಮಾಘಶಗ್ಂ ಸೋ ರುದ್ರಸ್ಯ ಹೇತಿಃ ಪರಿ ವೋ ವೃಣಕ್ತು ಧ್ರುವಾ ಅಸ್ಮಿನ್ ಗೋಪತೌ ಸ್ಯಾತ ಬಹ್ವೀರ್ಯಜಮಾನಸ್ಯ ಪಶೂನ್ ಪಾಹಿ॥ ಓಂ ಸ್ವಸ್ತಿ।

3. ಸಾಮವೇದ :

ದೇವದೇವೋತ್ತಮ, ದೇವತಾ ಸಾರ್ವಭೌಮ, ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ, ಸಂಗೀತಲೋಲ, ಸಾಮಗಾನಪ್ರಿಯ, ಸ್ವಾಮಿನ್! ಶ್ರೀಸೀತಾಪತೇ ಶ್ರೀರಾಮಚಂದ್ರ ! ಪರಾಕ್ ! ಸಾಮವೇದ ಪ್ರಿಯ ಸಾಮವೇದ ಸೇವಾಮವಧಾರಯ ।

ಓಮ್ ಅಗ್ನ ಆ ಯಾಹಿ ವೀತಯೇ ಗೃಣಾನೋ ಹವ್ಯದಾತಯೇ। ನಿ ಹೋತಾ ಸತ್ಸಿ ಬರ್ಹಿಷಿ।

ಹರಿಃ ಓಂ । ಏತತ್ ಸಮ ಗಾಯನ್ನಾಸ್ತೇ । ಹಾಽ ಉಹಾಽ ಉಹಾಽಽ ಉ । ಅಹಮನ್ನ ಮಹಮನ್ನ ಮಹಮನ್ನಮ್ ।



ಅಹಮನ್ನಾದೋಽಹಮಽಹನ್ನಾದೋಽಽಹಮನ್ನಾದಃ । ಅಹಗ್ಂ ಶ್ಲೋಕಕೃದಹಗ್ಂ ಶ್ಲೋಕಕೃದಹಗ್ಂ ಶ್ಲೋಕಕೃತ್ । ಅಹಮಸ್ಮಿ ಪ್ರಥಮಜಾ ಋತಾಽಸ್ಯ । ಪೂರ್ವಂ ದೇವೇಭ್ಯೋ ಅಮೃತಸ್ಯ ನಾಽಭಾಯಿ। ಯೋ ಮಾ ದದಾತಿ ಸ ಇದೇವ ಮಾಽವಾಃ । ಅಹಮನ್ನಮನ್ನಮದಂತಮಾಽದ್মಿ । ಅಹಂ ವಿಶ್ವಂ ಭುವನಮಭ್ಯಭವಾಮ್ । ಸುವರ್ಣಜ್ಯೋತೀಃ ॥ ಯ ಏವಂ ವೇದ ಇತ್ಯುಪನಿಷತ್ ॥ ಓಂ ಸ್ವಸ್ತಿ ।

4. ಅಥರ್ವಣವೇದ :

ದೇವದೇವೋತ್ತಮ, ದೇವತಾ ಸಾರ್ವಭೌಮ, ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ, ಅಮಿತವಿಕ್ರಮ ಅಖಿಲಮಂತ್ರಸ್ವರೂಪ, ಅನಂತಗುಣಗಂಭೀರ ಸ್ವಾಮಿನ್ ಶ್ರೀಸೀತಾಪತೇ ಶ್ರೀರಾಮಚಂದ್ರ ! ಪರಾಕ್ ! ಅಥರ್ವಣವೇದಪ್ರಿಯ ಅಥರ್ವಣವೇದ ಸೇವಾಮವಧಾರಯ।

ಶಂ ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ । ಶಂ ಯೋರಭಿ ಸ್ರವಂತು ನಃ । ಭದ್ರಂ ನೋ ಅಪಿವಾತಯ ಮನಃ । ಮರುತಾ ಮೋಜಸೇ ಸ್ವಾಹಾ । ಇಂದ್ರೋ ವಿಶ್ವಸ್ಯ ರಾಜಸಿ । ಶಂ ನೋ ಭವ ದ್ವಿಪದೇ ಶಂ ಚತುಷ್ಪದೇ ॥ ೬ ॥ ಓಂ ಸ್ವಸ್ತಿ ।

ಗಂಧದ್ವಾರಾಂ ದುರಾಧರ್ಷಾಂ ನಿತ್ಯ ಪುಷ್ಟಾಂ ಕರೀಷಿಣೀಮ್। ಈಶ್ವರೀಂ ಸರ್ವಭೂತಾನಾಂ ತಾಮಿ- ಹೋಪಹ್ವಯೇ ಶ್ರಿಯಮ್ ॥ ಓಂ ಸ್ವಸ್ತಿ

5. ಸಚ್ಛಾಸ್ತ್ರ :

ದೇವದೇವೋತ್ತಮ, ದೇವತಾ ಸಾರ್ವಭೌಮ, ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ, ಶಂಖಚಕ್ರಗದಾಪದ್ಮಧರ, ಶರಣಾಗತರಕ್ಷಕ, ಶುಕಶೌನಕಾದಿ ಮುನಿಸೇವಿತ, ಸ್ವಾಮಿನ್ ಶ್ರೀಸೀತಾಪತೇ ಶ್ರೀರಾಮಚಂದ್ರ! ಪರಾಕ್ ! ಸಚ್ಛಾಸ್ತ್ರ ಪ್ರಿಯ ಸಚ್ಛಾಸ್ತ್ರ ಸೇವಾಮವಧಾರಯ ।

ಇಹ ಖಲು 'ಸುಖಮೇವ ಮೇ ಸ್ಯಾದ್, ದುಃಖಂ ಮನಾಗಪಿ ಮಾ ಭೂದಿತಿ' ನಿಖಿಲಾಪೇಕ್ಷಿತಮೋಕ್ಷಸ್ಯ ಭಗವತ್ತದನ್ಯಸ್ವಾತಂತ್ರ್ಯಾ ಸ್ವಾತಂತ್ರ್ಯ ಜ್ಞಾನಸಾಧ್ಯತ್ವಾತ್, ಮುಮುಕ್ಷುಣಾ ಪರತಂತ್ರಮಿದಂ ಸ್ವತಂತ್ರಭಗವದಾಯತ್ತಯಾವಶ್ಯಂ ವೇದಿತವ್ಯಮ್। ತದುಕ್ತಂ ಭಾಷ್ಯ ಕಾರೈಃ ।

ಯ ಏತತ್ ಪರತಂತ್ರಂ ತು ಸರ್ವಮೇವ ಹರೇಃ ಸದಾ ।
ವಶಮಿತ್ಯೇವ ಜಾನಾತಿ ಸಂಸಾರಾನ್ಮುಚ್ಯತೇ ಹಿ ಸಃ ॥

6. ಪುರಾಣ :

ದೇವದೇವೋತ್ತಮ, ದೇವತಾ ಸಾರ್ವಭೌಮ, ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ, ಪರಾಕ್ ! ಪುರಾಣಪ್ರಿಯ ಪುರಾಣ ಸೇವಾಮವಧಾರಯ ।

ಓಂ ಜನ್ಮಾದ್ಯಸ್ಯ ಯತೋಽನ್ವಯಾದಿತರತಶ್ಚಾರ್ಥೇಷ್ವಭಿಜ್ಞಃ ಸ್ವರಾಟ್ ।
ತೇನೇ ಬ್ರಹ್ಮ ಹೃದಾಯ ಆದಿಕವಯೇ ಮುಹ್ಯಂತಿ ಯಂ ಸೂರಯಃ ॥

ತೇಜೋವಾರಿ ಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋಽಮೃಷಾ ।
ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ ಸತ್ಯಂ ಪರಂ ಧೀಮಹಿ ॥ ಓಂಸ್ವಸ್ತಿ ॥

7. ಪಂಚಾಂಗ :

ದೇವದೇವೋತ್ತಮ, ದೇವತಾ ಸಾರ್ವಭೌಮ, ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ, ಪರಾಕ್ ! ಪಂಚಾಂಗಪ್ರಿಯ ಪಂಚಾಂಗ ಸೇವಾಮವಧಾರಯ ।

ತಿಥಿರ್ವಿಷ್ಣುಸ್ತಥಾ ವಾರೋ ನಕ್ಷತ್ರಂ ವಿಷ್ಣುರೇವ ಚ ।
ಯೋಗಶ್ಚ ಕರಣಂ ಚೈವ ಸರ್ವಂ ವಿಷ್ಣುಮಯಂ ಜಗತ್ ॥

ತಿಥೇಶ್ಚ ಶ್ರಿಯಾಮಾಪ್ನೋತಿ ವಾರಾದಾಯುಷ್ಯವರ್ಧನಮ್ ।
ನಕ್ಷತ್ರಾದ್ಧರತೇ ಪಾಪಂ ಯೋಗಾದ್ ರೋಗನಿವಾರಣಮ್ ।
ಕರಣಾತ್ ಕಾರ್ಯಸಿದ್ಧಿಶ್ಚ ಪಂಚಾಂಗಫಲಮುಚ್ಯತೇ ॥ ಓಂ ಸ್ವಸ್ತಿ ॥

(ಆ ದಿನದ ಪಂಚಾಂಗ ಓದಬೇಕು)

8. ಸ್ತೋತ್ರ :

ದೇವದೇವೋತ್ತಮ, ದೇವತಾ ಸಾರ್ವಭೌಮ, ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ, ಪರಾಕ್ ! ಸ್ತೋತ್ರಪ್ರಿಯ ಸ್ತೋತ್ರಸೇವಾ–ಮವಧಾರಯ ।

ಪಾಲಯಾಚ್ಯುತ ಪಾಲಯಾಜಿತ ಪಾಲಯಾ ಕಮಲಾಲಯ ।
ಲೀಲಯಾ ಧೃತ ಭೂಧರಾಂಬುರುಹೋದರ ಸ್ವಜನೋದರ ॥

ಜಯತಿ ತೇಽಧಿಕಂ ಜನ್ಮನಾ ವ್ರಜಃ ಶ್ರಯತ ಇಂದಿರಾ ಸಾಧು ತತ್ರ ಹಿ ।
ದಯಿತ ದೃಶ್ಯತಾಂ ತ್ವಾದಿದೃಕ್ಷತಾಂ ತ್ವಯಿ ಧೃತಾಸವ ಸ್ತ್ವಾಂ ವಿಚಿನ್ವತೇ ॥
ಓಂ ಸ್ವಸ್ತಿ ॥

9. ಗದ್ಯ :

ದೇವದೇವೋತ್ತಮ, ದೇವತಾ ಸಾರ್ವಭೌಮ, ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ, ಗಂಗಾಜನಕ ಗೋಪಕುಮಾರ ಗೋಕುಲದ್ವಾರಕಾವಾಸ ಗೋಪಾಲಕೃಷ್ಣ ಗೋಪಿಕಾಪ್ರೀತಿವಿಲಾಸ ಗೋವರ್ಧನೋದ್ಧಾರಿನ್ ಸ್ವಾಮಿನ್! ಪರಾಕ್ ! ಗದ್ಯ ಪ್ರಿಯ ಗದ್ಯಪಠನಸೇವಾಮವಧಾರಯ ।

ಸೂರ್ಯವಂಶಧ್ವಜ ರಘುಕುಲತಿಲಕ ಲಕ್ಷ್ಮಣಭರತಶತ್ರುಘ್ನಾಗ್ರಜ ಶ್ರೀಮದ್ಧನುಮದುಪಾಸಿತಚರಣ ಸೀತಾಪತೇ ಶ್ರೀರಾಮಚಂದ್ರ । ತ್ವದಾಜ್ಞಯಾ ತ್ವತ್ ಪ್ರಸಾದಾತ್ ತ್ವತ್ ಪ್ರೇರಣಯಾ ತ್ವತ್ ಪ್ರೀತ್ಯರ್ಥಂ ತ್ವದುಪಾಸಕೇನ ಶ್ರೀಮುಖ್ಯಪ್ರಾಣೇನ ಪ್ರೇರಿತಸ್ಸನ್ ತ್ವತ್ ಸಂಸ್ಮೃತಿಪೂರ್ವಕಂ ಶಯನಾತ್ ಸಮುತ್ಥಾಯ ಅದ್ಯತನಂ ಸ್ವವರ್ಣಾಶ್ರಮೋಚಿತಂ ದೇಶಕಾಲಾವಸ್ಥೋಚಿತಮ್ ನಿತ್ಯನೈಮಿತ್ತಿಕ–ಕಾಮ್ಯಭೇದೇನ ತ್ರಿವಿಧಂ ತ್ವತ್ ಪೂಜಾತ್ಮಕಂ ಕರ್ಮ ಯಥಾಶಕ್ತಿ ಯಥಾಜ್ಞಪ್ತಿ ಯಥಾವೈಭವಂ ಕರಿಷ್ಯೇ ॥ ಓಂ ಸ್ವಸ್ತಿ ॥

10. ಸಂಗೀತ :

ದೇವದೇವೋತ್ತಮ, ದೇವತಾ ಸಾರ್ವಭೌಮ, ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ, ಬಹುಪರಾಕ್ ! ಸಂಗೀತ ಪ್ರಿಯ ಸಂಗೀತ ಸೇವಾಮವಧಾರಯ ।

ರೋಗಹರನೇ ಕೃಪಾಸಾಗರ ಶ್ರೀ ಗುರು
ರಾಘವೇಂದ್ರ ಪರಿಪಾಲಿಸೋ ।

ಸಂತತದುರ್ವಾದಿಧ್ವಾಂತ ದಿವಾಕರ
ಸಂತವಿನುತ ಮಾತ ಲಾಲಿಸೋ ॥ ರೋಗಹರನೇ ॥

ಪಾವನ ಗಾತ್ರ ಸುದೇವವರನೇ ತವ
ಸೇವಕ ಜನರೊಳಗಾಡಿಸೋ ॥ ರೋಗಹರನೇ ॥



ಘನ್ನ ಮಹಿಮ ಜಗನ್ನಾಥ ವಿಠಲ ಪ್ರಿಯ
ನಿನ್ನಾರಾಧನೆ ಮಾಡಿಸೋ ॥ ರೋಗಹರನೇ ॥

**11. ಲಾಲಿ ಹಾಡು :**

ದೇವದೇವೋತ್ತಮ, ದೇವತಾ ಸಾರ್ವಭೌಮ, ಅಖಿಲಾಂಡಕೋಟಿ ಬ್ರಹ್ಮಾಂಡನಾಯಕ, ಪರಾಕ್ ! ಲಾಲಿ ಪ್ರಿಯ ಲಾಲಿ ಸೇವಾಮವಧಾರಯ ।

ಲಾಲಿ ಶ್ರೀಹಯವದನ ಲಾಲಿ ರಂಗವಿಠಲ ।
ಲಾಲಿ ಗೋಪೀನಾಥ ಲಕ್ಷ್ಮೀಸಮೇತ ॥ ಪ ॥

ಮುತ್ತುಮಾಣಿಕ ಬಿಗಿದ ತೊಟ್ಟಿಲೊಳಗೊಲ್ಲ ।
ಎತ್ತಿದರು ಎನ್ನಯ್ಯ ಕೈಯೊಳಗೆ ನಿಲ್ಲ ॥
ಭಕ್ತರಿಗೆ ವರಗಳನು ಕೊಡುವ ಹೊತ್ತಿಲ್ಲ ।
ಪುತ್ರನನು ಎತ್ತಿಕೋ ನಂದಗೋಪಾಲ ॥ 1 ॥

ಮನೆಯೊಳಗೆ ಇರನೀತ ಬಹು ರಚ್ಚೆವಂತ ।
ಮನೆವಾರ್ತೆ ಯಾರು ಮಾಡುವರು ಶ್ರೀಕಾಂತ ॥
ಗುಣಿಗುಣಗಳೊಳಗಿಪ್ಪ ಬಹು ಗುಣವಂತ ।
ಗುಣಬದ್ಧನಾಗದಿಹ ಶ್ರೀ ಲಕ್ಷ್ಮಿಕಾಂತ ॥ 2 ॥

ಕ್ಷೀರಾಂಬುನಿಧಿಯೊಳಗೆ ಸೆಜ್ಜೆಯೊಳಗಿರುವ ।
ಶ್ರೀರಮಣ ಭಕ್ತರಿಚ್ಛೆಗೆ ನಲಿದು ಬರುವ ॥
ಕಾರುಣ್ಯಹಯವದನ ಕಾಯ್ವ ತುರುಕರುವ ।
ನೀರೆ ಗೋಪಿಯರೊಳು ಮೆರೆವ ಕಡುಚೆಲುವ ॥ 3 ॥

* * * *

ಲಾಲಿ ಲಾಲಿ ಶ್ರೀಹನುಮ ಭೀಮ ಮಧ್ವಾರ್ಯ ।
ಲಾಲಿ ರಾಮಕೃಷ್ಣ ವ್ಯಾಸರ ಪ್ರಿಯ ॥ ಲಾಲಿ ॥

ಮೂಜಗಾದಲಿ ನೀನು ಬಾಲಬ್ರಹ್ಮಾಚಾರಿ
ಈಜಗಾದಲ್ಲಿ ನೀನು ಕಪಿರಾಜ್ಯವಾಳಿ
ತೇಜ ಮುತ್ತಿನ ಕವಚನ ಕುಂಡಲಾಧಾರಿ
ಪೂಜಿಪರ ಪಾಲಪ ಸುಜನರು ಪರಾರಿ ॥ ಲಾಲಿ ॥

ಭೂಮಿ ಭಾರವ ನಿಳುಹೇಬಂದೇ ಕಲಿ ಭೀಮ
ಕಾಮಿ ಕೀಚಕನನ್ನು ಕುಟ್ಟಿ ರಣಧಾಮ
ಭಾಮಿನೀ ದ್ರೌಪದೀ ಕಷ್ಟ ನಿರ್ಧೂಮ
ಕಾಮಿತಾರ್ಥಗಳಿತ್ತು ಸಲಹೋ ನಿಸ್ಸೀಮ ॥ ಲಾಲಿ ॥

ಸೌಂದರ್ಯರೂಪದ ಶ್ರೀಮದಾನಂದ
ಬಂದು ಉಡುಪಿಯಲ್ಲಿ ನೆಲೆಯಾಗಿ ನಿಂದ
ತಂದೇ ಶ್ರೀಹಯವದನ ಪ್ರೇಮದ ಕಂದ
ವಂದಿಸುವೆ ನಿದ್ರೆಗೈ ಹರಿಧ್ಯಾನದಿಂದ ॥ ಲಾಲೀ ॥

ತೂಗೀರೆ ರಾಯರ ತೂಗೀರೆ ಗುರುಗಳ
ತೂಗೀರೆ ಯತಿಕುಲ ತಿಲಕರ
ತೂಗೀರೆ ಯೋಗೀಂದ್ರ ಕರಕಮಲ ಪೂಜ್ಯರ
ತೂಗೀರೆ ಗುರು ರಾಘವೇಂದ್ರರ
ದೇವ.... ಲಾಲಿಪ್ರಿಯಾ ಲಾಲಿಸೇವಮವಧಾರಯ

* * * *

ತೂಗಿರೆ ರಂಗನ ತೂಗಿರೆ ಕೃಷ್ಣನ ।
ತೂಗಿರೆ ಅಚ್ಯುತಾನಂತನ ॥ ಪ ॥

ತೂಗಿರೆ ವರಗಿರಿ ಅಪ್ಪ ತಿಮ್ಮಪ್ಪನ ।
ತೂಗಿರೆ ಕಾವೇರಿ ರಂಗಯ್ಯನ ॥ ಅ.ಪ. ॥

ನಾಗಲೋಕದಲ್ಲಿ ನಾರಾಯಣ ಮಲಗ್ಯಾನೆ ।
ನಾಗಕನ್ನಿಕೆಯರು ತೂಗಿರೆ ॥



ನಾಗವೇಣಿಯರು ನೇಣು ಪಿಡಿದುಕೊಂಡು ।
ಬೇಗನೆ ತೊಟಿಲ ತೂಗಿರೆ ॥ 1 ॥

ಇಂದ್ರಲೋಕದಲ್ಲಿ ಉಪೇಂದ್ರ ಮಲಗ್ಯಾನೆ ।
ಇಂದುಮುಖಿಯರೆಲ್ಲ ತೂಗಿರೆ ॥

ಇಂದ್ರಕನ್ನಿಕೆಯರು ಚಂದದಿ ಬಂದು ।
ಮುಕುಂದನ ತೊಟ್ಟಿಲ ತೂಗಿರೆ ॥ 2 ॥

ಆಲದೆಲೆಯ ಮೇಲೆ ಶ್ರೀಲೋಲ ಮಲಗ್ಯಾನೆ ।
ನೀಲಕುಂತಳೆಯರೆ ತೂಗಿರೆ ।

ವ್ಯಾಲಶಯನ ಹರಿ ಮಲಗು ಮಲಗು ಎಂದು ।
ಬಾಲಕೃಷ್ಣಯ್ಯನ ತೂಗಿರೆ ॥ 3 ॥

ಸಾಸಿರನಾಮನೆ ಸರ್ವೋತ್ತಮನೆಂದು ।
ಸೂಸುತ್ತ ತೊಟ್ಟಿಲ ತೂಗಿರೆ ॥

ಲೇಸಾಗಿ ಮಡುವಿನೋಲ್ ಶೇಷನ ತುಳಿದಿಟ್ಟ ।
ದೋಷವಿದೂರನ್ನ ತೂಗಿರೆ ॥ 4 ॥

ಅರಳೆಲೆ ಮಾಗಾಯಿ ಕೊರಳ ಮುತ್ತಿನ ಸರ ।
ತರಳನ ತೊಟ್ಟಿಲ ತೂಗಿರೆ ॥

ಸಿರಿದೇವಿರಮಣನೆ ಪುರಂದರವಿಠಲನೆ ।
ಕರುಣದಿ ಮಲಗೆಂದು ತೂಗಿರೆ ॥ 5 ॥ ಓಂ ಸ್ವಸ್ತಿ ॥

ಸ್ವಸ್ತಿ ಮಂತ್ರಾರ್ಥಾಃ ಸತ್ಯಾಃ ಸಫಲಾಃ ಸಂತ್ವಿತಿ ಭವಂತೋ ಮಹಾಂತೋಽನು ಗೃಹ್ಣಂತು ॥ ತಥಾಸ್ತು ॥

ಶ್ರೀಮದ್ರಾಘವೇಂದ್ರ ತೀರ್ಥಾಂತರ್ಗತ ಭಾರತೀರಮಣ ಮುಖ್ಯ ಪ್ರಾಣಹೃದಯಾಮಲಮಂದಿರಸ್ಯ, ರಘುಮಾನಾಮಕರಮಾಸಮೇತ ಗುರುಪಾಂಡುರಂಗವಿಠಲಾಭಿನ್ನಸ್ಯ, ಹಯಗ್ರೀವ-ಕಪಿಲದತ್ತಾತ್ರೇ-ಯಾದ್ಯನಂತ ರೂಪಾತ್ಮಕಸ್ಯ, ಜಾಂಬವತ್ಸುಗ್ರೀವಾಂಗದ-





ವಿಭೀಷಣಾದಿಭಕ್ತ ಜನಪರಿವೃತಸ್ಯ, ಲಕ್ಷ್ಮಣಭರತಶತ್ರುಘ್ನಾಗಜಸ್ಯ, ಹನುಮದುಪಾಸಿತರಚರಣಸ್ಯ, ಸೀತಾ ಸಮೇತಸ್ಯ ಶ್ರೀ ಶ್ರೀ ಶ್ರೀ ಮೂಲರಾಮಚಂದ್ರ ಸ್ವಾಮಿನಃ ನಿತ್ಯೋತ್ಸವ-ಪಕ್ಷೋತ್ಸವ-ಮಾಸೋತ್ಸವ-ಸಂವತ್ಸರೋತ್ಸವಾದಿ ವಿವಿಧ ಸೇವಾನಾಂ ನಿತ್ಯಾಭಿವೃದ್ಧಿ ಪ್ರದೋಭೂಯಾದಿತಿ ಭವಂತೋ ಮಹಾಂತೋಽನು ಗೃಹ್ಣಂತು ।
ಅನೇನ ಸಾಯಂಕಾಲಪೂಜಾವಿಧಾನೇನ ಭಗವಾನ್ ಸರ್ವಾಂತರ್-ಗತಃ ಅಸ್ಮದ್ಗುರ್ವಂತರ್ಗತ ಶ್ರೀಮದ್ರಾಘವೇಂದ್ರತೀರ್ಥ ಹೃತ್ಕಮಲ-ಮಧ್ಯಸ್ಥಿತ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯಾಣಾಂ ಬಿಂಬರೂಪೀ ಶ್ರೀ ಮನ್ಮೂಲರಾಮಚಂದ್ರೋ ದೇವತಾ, ಅಸ್ಮಿನ್ ದಿವಸೇ (ದೇಶಕಾಲ ತಿಥ್ಯಾದಿಗಳನ್ನು ಉಚ್ಚರಿಸಿ) ಶುಭತಿಥೌ ............ ಗೋತ್ರೋದ್ಭವಸ್ಯ ............... ನಕ್ಷತ್ರೇ ............... ರಾಶೌ ಜಾತಸ್ಯ ................ ನಾಮಧೇಯಸ್ಯ ಮಮ ಸಕುಟುಂಬಸ್ಯ ಸಪರಿವಾರಸ್ಯ ಕ್ಷೇಮಸ್ಥೈರ್ಯವೀರ್ಯ ವಿಜಯಾಯುರಾರೋಗ್ಯದ್ಯೈಶ್ವರ್ಯಜಾತಸ್ಯ ತಥಾ ಜ್ಞಾನ-ಭಕ್ತಿ-ವೈರಾಗ್ಯಾದಿ ಸಂಪದಾಂ ಚ ನಿರಂತರಾಭಿವೃದ್ಧಿ-ಪ್ರದೋ ಭೂಯಾದಿತಿ ಭವಂತೋ ಮಹಾಂತೋಽನುಗೃಹ್ಣಂತು ।
ಸಮಸ್ತ ಸನ್ಮಂಗಲಾನಿ ಭವಂತ್ವಿತಿ ಭವಂತೋ ಮಹಾಂತಃ ಪ್ರಾರ್ಥಯಂತು । ತಥಾಸ್ತು ॥

ಇತಿ ಅಷ್ಟಾವಧಾನ ಸೇವಾ ಸಮಾಪ್ತಾ

# ವಿಭಾಗ - 6
# ಪೂಜಾವಿಧಿ ವಿವರಣೆ [ಪರಿಶಿಷ್ಟ]

## 1. ಗುರು ನಮಸ್ಕಾರದ ಬಗ್ಗೆ ವಿವರಣೆ :

ಗುರು ನಮಸ್ಕಾರವು ಪ್ರತಿಯೊಂದು ಕರ್ಮದಲ್ಲೂ ಸಿದ್ಧಿಪಡೆಯಲು ಅತ್ಯವಶ್ಯವಾಗಿದೆ. ಗುರುವೆಂದರೆ ಯಾರು? ತನಗೆ ಸಂಶಯವಿಲ್ಲದಿರುವ ಹಾಗೂ ಮತ್ತೊಬ್ಬರ ಸಂಶಯವನ್ನು ಪರಿಹರಿಸುವವರೇ ನಿಜವಾದ ಗುರುಗಳು ಈ ಅರ್ಥದಲ್ಲಿ ವಾಯುದೇವರೇ ನಿಜವಾದ ಗುರುಗಳೆನಿಸುವರು.

**ಅಸಂಶಯಃ ಸಂಶಯಚ್ಛಿತ್ ಗುರುರುಕ್ತೋ ಮನೀಷಿಭಿಃ।**
**ತಸ್ಮಾದ್ ಬ್ರಹ್ಮಾ ಗುರುರ್ಮುಖ್ಯಃ ಸರ್ವೇಷಾಮೇವ ಸರ್ವದಾ ॥**
– ತಾ.ನಿ. 1/120

ಇವರ ಉಪದೇಶದಿಂದಲೇ ಕಡೆಗೆ ಮುಕ್ತಿಯು.

**ಉಪದೇಶೋ ಬ್ರಹ್ಮಣಸ್ತು ಸರ್ವೇಷಾಮೇವ ಮುಕ್ತಯೇ ॥** –ಅ.ವ್ಯಾ

**"ಯಥಾದೇವೇ ತಥಾ ಗುರೌ"** ಎಂದು ಭಗವಂತನಲ್ಲಿ ಭಕ್ತಿಯನ್ನು ಮಾಡುವಂತೆ ಗುರುಗಳಲ್ಲೂ ಯೋಗ್ಯತಾನುಸಾರವಾಗಿ ವಂದನೆ–ಭಕ್ತಿಗಳನ್ನು ಮಾಡಲೇಬೇಕು.

ಗುರು ವಂದನದಿಂದ ಅಜ್ಞಾನಾದಿಗಳು ದೂರವಾಗಿ ಇಷ್ಟಾರ್ಥಗಳು ಸಿದ್ಧಿಸುವುವು.

**ಗುಕಾರಸ್ತ್ವಂಧಕಾರ ಸ್ಯಾತ್ ರುಕಾರ ಸ್ತನ್ನಿರೋಧಕಃ।**
**ಅಂಧಕಾರ ನಿರೋಧಿತ್ವಾತ್ ಗುರುರಿತ್ಯಭಿಧೀಯತೇ ॥**

ಗುರುವಿನ ಲಕ್ಷಣವನ್ನು ಹೊಂದಿರುವ ವ್ಯಕ್ತಿಯು ಏನನ್ನು ಉಪದೇಶಿ–ಸುತ್ತಾನೆಯೋ ಅವನ ಮಾತಿನಲ್ಲಿ ಅವಿಶ್ವಾಸ ತೋರಬಾರದು.

**ಆನುಕೂಲ್ಯೇನಾಗಮಾನಾಂ ನಾಶಂಕ್ಯಂ ತದ್ವಚಃ ಕ್ವಚಿತ್** । –ಬೃ.ಭಾ.ಅ.

ವಿಭೀಷಣಾದಿಭಕ್ತ ಜನಪರಿವೃತಸ್ಯ, ಲಕ್ಷ್ಮಣಭರತಶತ್ರುಘ್ನಾಗಜಸ್ಯ, ಹನುಮದುಪಾಸಿತರಚರಣಸ್ಯ, ಸೀತಾ ಸಮೇತಸ್ಯ ಶ್ರೀ ಶ್ರೀ ಶ್ರೀ ಮೂಲರಾಮಚಂದ್ರ ಸ್ವಾಮಿನಃ ನಿತ್ಯೋತ್ಸವ-ಪಕ್ಷೋತ್ಸವ-ಮಾಸೋತ್ಸವ-ಸಂವತ್ಸರೋತ್ಸವಾದಿ ವಿವಿಧ ಸೇವಾನಾಂ ನಿತ್ಯಾಭಿವೃದ್ಧಿ ಪ್ರದೋಭೂಯಾದಿತಿ ಭವಂತೋ ಮಹಾಂತೋಽನು ಗೃಹ್ಣಂತು ।
ಅನೇನ ಸಾಯಂಕಾಲಪೂಜಾವಿಧಾನೇನ ಭಗವಾನ್ ಸರ್ವಾಂತರ್-ಗತಃ ಅಸ್ಮದ್ಗುರ್ವಂತರ್ಗತ ಶ್ರೀಮದ್ರಾಘವೇಂದ್ರತೀರ್ಥ ಹೃತ್ಕಮಲ-ಮಧ್ಯಸ್ಥಿತ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯಾಣಾಂ ಬಿಂಬರೂಪೀ ಶ್ರೀ ಮನ್ಮೂಲರಾಮಚಂದ್ರೋ ದೇವತಾ, ಅಸ್ಮಿನ್ ದಿವಸೇ (ದೇಶಕಾಲ ತಿಥ್ಯಾದಿಗಳನ್ನು ಉಚ್ಚರಿಸಿ) ಶುಭತಿಥೌ ............ ಗೋತ್ರೋದ್ಭವಸ್ಯ ............... ನಕ್ಷತ್ರೇ ............... ರಾಶೌ ಜಾತಸ್ಯ ................ ನಾಮಧೇಯಸ್ಯ ಮಮ ಸಕುಟುಂಬಸ್ಯ ಸಪರಿವಾರಸ್ಯ ಕ್ಷೇಮಸ್ಥೈರ್ಯವೀರ್ಯ ವಿಜಯಾಯುರಾರೋಗ್ಯದ್ಯೈಶ್ವರ್ಯಜಾತಸ್ಯ ತಥಾ ಜ್ಞಾನ-ಭಕ್ತಿ-ವೈರಾಗ್ಯಾದಿ ಸಂಪದಾಂ ಚ ನಿರಂತರಾಭಿವೃದ್ಧಿ-ಪ್ರದೋ ಭೂಯಾದಿತಿ ಭವಂತೋ ಮಹಾಂತೋಽನುಗೃಹ್ಣಂತು ।
ಸಮಸ್ತ ಸನ್ಮಂಗಲಾನಿ ಭವಂತ್ವಿತಿ ಭವಂತೋ ಮಹಾಂತಃ ಪ್ರಾರ್ಥಯಂತು । ತಥಾಸ್ತು ॥

ಇತಿ ಅಷ್ಟಾವಧಾನ ಸೇವಾ ಸಮಾಪ್ತಾ

# ವಿಭಾಗ - 6
# ಪೂಜಾವಿಧಿ ವಿವರಣೆ [ಪರಿಶಿಷ್ಟ]

**1. ಗುರು ನಮಸ್ಕಾರದ ಬಗ್ಗೆ ವಿವರಣೆ :**

ಗುರು ನಮಸ್ಕಾರವು ಪ್ರತಿಯೊಂದು ಕರ್ಮದಲ್ಲೂ ಸಿದ್ಧಿಪಡೆಯಲು ಅತ್ಯವಶ್ಯವಾಗಿದೆ. ಗುರುವೆಂದರೆ ಯಾರು? ತನಗೆ ಸಂಶಯವಿಲ್ಲದಿರುವ ಹಾಗೂ ಮತ್ತೊಬ್ಬರ ಸಂಶಯವನ್ನು ಪರಿಹರಿಸುವವರೇ ನಿಜವಾದ ಗುರುಗಳು ಈ ಅರ್ಥದಲ್ಲಿ ವಾಯುದೇವರೇ ನಿಜವಾದ ಗುರುಗಳೆನಿಸುವರು.

**ಅಸಂಶಯಃ ಸಂಶಯಚ್ಛಿತ್ ಗುರುರುಕ್ತೋ ಮನೀಷಿಭಿಃ ।**
**ತಸ್ಮಾದ್ ಬ್ರಹ್ಮಾ ಗುರುರ್ಮುಖ್ಯಃ ಸರ್ವೇಷಾಮೇವ ಸರ್ವದಾ ॥**
– ತಾ.ನಿ. 1/120

ಇವರ ಉಪದೇಶದಿಂದಲೇ ಕಡೆಗೆ ಮುಕ್ತಿಯು.

**ಉಪದೇಶೋ ಬ್ರಹ್ಮಣಸ್ತು ಸರ್ವೇಷಾಮೇವ ಮುಕ್ತಯೇ ॥** –ಅ.ವ್ಯಾ

**"ಯಥಾದೇವೇ ತಥಾ ಗುರೌ"** ಎಂದು ಭಗವಂತನಲ್ಲಿ ಭಕ್ತಿಯನ್ನು ಮಾಡುವಂತೆ ಗುರುಗಳಲ್ಲೂ ಯೋಗ್ಯತಾನುಸಾರವಾಗಿ ವಂದನೆ–ಭಕ್ತಿಗಳನ್ನು ಮಾಡಲೇಬೇಕು.

ಗುರು ವಂದನದಿಂದ ಅಜ್ಞಾನಾದಿಗಳು ದೂರವಾಗಿ ಇಷ್ಟಾರ್ಥಗಳು ಸಿದ್ಧಿಸುವುವು.

**ಗುಕಾರಸ್ತ್ವಂಧಕಾರ ಸ್ಯಾತ್ ರುಕಾರ ಸ್ತನ್ನಿರೋಧಕಃ ।**
**ಅಂಧಕಾರ ನಿರೋಧಿತ್ವಾತ್ ಗುರುರಿತ್ಯಭಿಧೀಯತೇ ॥**

ಗುರುವಿನ ಲಕ್ಷಣವನ್ನು ಹೊಂದಿರುವ ವ್ಯಕ್ತಿಯು ಏನನ್ನು ಉಪದೇಶಿ–ಸುತ್ತಾನೆಯೋ ಅವನ ಮಾತಿನಲ್ಲಿ ಅವಿಶ್ವಾಸ ತೋರಬಾರದು.

**ಆನುಕೂಲ್ಯೇನಾಗಮಾನಾಂ ನಾಶಂಕ್ಯಂ ತದ್ವಚಃ ಕ್ವಚಿತ್** । –ಬೃ.ಭಾ.ಅ.

ನಮಗಿಂತ ಉತ್ತಮರೆಲ್ಲರೂ ಕ್ರಮವಾಗಿ ಗುರುಗಳೆನಿಸಿದ್ದಾರೆ. ಗುರುಗಳು ಅನುಗ್ರಹಿಸಿ ಏನನ್ನಾದರೂ ಪ್ರೀತಿಯಿಂದ ಉಪದೇಶಿಸಿದರೆ ಅದು ಸತ್ಯವಾಗುತ್ತವೆ. ಆದ್ದರಿಂದಲೇ ಗುರುವಿನ ಅನುಗ್ರಹಬೇಕೇ ಬೇಕು.

ಗುರುಗಳಲ್ಲಿ ಗುರುಗಳು, ಪೂರ್ವಗುರು, ಆದಿಗುರು, ಮೂಲಗುರು ಎಂದಿರುವರು.

ಗುರುಗಳೆಂದರೆ ನಮಗೆ ನೇರವಾಗಿ ತತ್ತ್ವೋಪದೇಶ ಮಾಡಿದವರು. ಸಾಕ್ಷಾತ್ ಗುರುಗಳು ಪೂರ್ವಗುರುಗಳೆಂದರೆ ಆ ಗುರುಗಳಿಗೂ ಗುರುಗಳೆನಿಸಿದವರು. ಉದಾ.: ರಾಘವೇಂದ್ರರು ಗುರುಗಳೆನಿಸಿದರೆ, ಅವರ ಗುರುಗಳಾದ ಸುಧೀಂದ್ರರು ಪೂರ್ವ ಗುರುಗಳೆನಿಸುವರು. ಸುಧೀಂದ್ರರಲ್ಲದೆ ರಾಘವೇಂದ್ರರಗಿಂತ ಮೊದಲು ಬಂದು ಅನುಗ್ರಹಿಸಿರುವ ಶ್ರೀಪಾದರಾಜರು, ವ್ಯಾಸರಾಜರು, ವಿಜಯಿಂದ್ರರು, ವಾದಿರಾಜರು ಇವರೂ ಪೂರ್ವ ಗುರುಗಳೇ.

ಸಾಮಾನ್ಯವಾಗಿ ಗುರು ಹಾಗೂ ಪೂರ್ವ ಗುರುಗಳು ಎಲ್ಲರಿಗೂ ಒಬ್ಬರೇ ಆಗಿರುವುದಿಲ್ಲ. ಬೇರೆ ಬೇರೆಯಾಗಿರುವರು. ನಮ್ಮ ಗುರುಗಳಿಂದ ಹಿಡಿದು ಪದ್ಮನಾಭತೀರ್ಥರವರೆಗೂ ಪೂರ್ವಗುರುಗಳೇ ಆಗಿರುವರು.

ಆದಿಗುರುಗಳೆಂದರೇ–ಶ್ರೀಮದಾರ್ಚಾಯರು. ಹಾಗೆಯೇ ಶ್ರೀಮದಾ–ಚಾರ್ಯರಂತೆ ಅವರಿಗೂ ಆದಿ ಗುರುಗಳೆನಿಸಿದ ಶ್ರೀವೇದವ್ಯಾಸರೂ ಆದಿ ಗುರುಗಳೇ ಆಗಿರುವರು.

ಮೂಲ ಗುರುಗಳೆಂದರೆ ಭಾರತೀ–ಸರಸ್ವತೀಯವರು. ಬ್ರಹ್ಮ–ವಾಯುಗಳು, ಭಾಗ್ಯಾತ್ಮಿಕಳಾದ ಶ್ರೀಮಹಾಲಕ್ಷ್ಮೀದೇವಿಯವರು ಹಾಗೂ ಇಷ್ಟ ಸ್ವಾಮಿಯಾದ ಶ್ರೀಮನ್ನಾರಾಯಣ ದೇವರು ಹೀಗೆ ಆರು ದೇವತೆಗಳನ್ನು ಮೂಲ–ಗುರುಗಳೆನ್ನುವರು. ಇದರ ಜೊತೆಗೆ ಮಂತ್ರದೇವತೆಯಾದ ಭಗವದ್ರೂಪ ಹಾಗೂ ಮುಕ್ತಿಪ್ರದಾಯಕ ಶ್ರೀವಾಸುದೇವ ರೂಪವು ಸೇರಿ ದ್ವಾದಶಗುರುಗಳು.

**ಸ್ಮೃತ್ವಾ ಗುರುಂ ಪೂರ್ವಗುರುಂ ಆದಿ ಮೂಲಗುರುಂ ತಥಾ ।**
**ದೇವತಾಂ ವಾಸುದೇವಂ ಚ ವಿದ್ಯಾಭ್ಯಾಸೀ ತು ಸಿದ್ಧಿಭಾಕ್ ॥**

– ತಂತ್ರಸಾರ 4/117



**ಇಷ್ಟಂ ದೈವಂ ಹರಿಃ ಸಾಕ್ಷಾತ್ ಲಕ್ಷ್ಮೀರ್ಭಾರ್ಗ್ಯಸ್ಯ ದೇವತಾ ।**
**ಗುರುರ್ಬ್ರಹ್ಮಾಥ ವಾಯುರ್ವಾ ವಿದ್ಯಾದೇವ್ಯೌ ಪ್ರಕೀರ್ತಿತೇ ॥**

**ತಸ್ಮಾದೇತೇ ಪ್ರಿಯಾ ವಿಷ್ಣೋಃ ಅಂತರಂಗತಯಾ ಸದಾ ।**
**ಜ್ಞೇಯಾಶ್ಚೈವ ಪ್ರಪೂಜ್ಯಾಶ್ಚ ವಿಷ್ಣೋಃ ಪ್ರೀತಿಮಭೀಪ್ಸತಾ ॥**

ಹೀಗೆ ದ್ವಾದಶ ಗುರುಗಳಿಗೆ ವಂದಿಸಿ ಕರ್ಮವನ್ನು ಮಾಡಿದರೆ ಕರ್ಮದಲ್ಲಿ ನ್ಯೂನತೆಗಳಿದ್ದರೂ ಭಗವಂತನ ಅನುಗ್ರಹದಿಂದ ಮಹಾಫಲ-ವುಂಟಾಗುತ್ತದೆ.

ಶ್ರೀಮದಾನಂದತೀರ್ಥರನ್ನು ಆದಿ ಗುರುಗಳನ್ನಾಗಿಯು, ಶ್ರೀವೇದವ್ಯಾಸ, ಭಾರತೀ, ಸರಸ್ವತೀ, ಬ್ರಹ್ಮ–ವಾಯು, ಲಕ್ಷ್ಮೀ–ನಾರಾಯಣರನ್ನು ಮೂಲ ಗುರುಗಳನ್ನಾಗಿಯೂ ತಿಳಿಸಿದ್ದಾರೆ.

**ವ್ಯಾಸಂ ಚ ಭಾರತೀಂ ವಾಣೀಂ ವಿಧಿಂ ವಾಯುಂ ರಮಾಂ ತಥಾ ।**
**ತಥಾ ನಾರಾಯಣಂ ಮೂಲಗುರೂನಾಹುಃ ವಿಪಶ್ಚಿತಃ ॥**

## 2. ದ್ವಾರಪಾಲಕ ಪೂಜೆಯ ಬಗ್ಗೆ ವಿವರಗಳು :

ವಸ್ತುತಃ ಒಂದೊಂದು ದಿಕ್ಕಿನಲ್ಲಿ ನಾಲ್ಕು ನಾಲ್ಕು ದ್ವಾರಗಳಿವೆಯಾದ್ದರಿಂದ ನಾಲ್ಕು ದಿಕ್ಕಿಗೂ ಒಟ್ಟು ಹದಿನಾರು ದ್ವಾರಗಳಾಗಬೇಕು ಹಾಗೂ ಹದಿನಾರು ದ್ವಾರ ದೇವತೆಗಳಿಗೂ ನಮಸ್ಕಾರವನ್ನು ಹೇಳಬೇಕಿತ್ತು. ಆದರೂ ಪೂರ್ವಾದಿ ನಾಲ್ಕು ಮೊದಲಿನ ನಾಲ್ಕು ದಿಕ್ಕಿನಲ್ಲಿರುವ ನಾಲ್ಕು ದ್ವಾರ ದೇವತೆಗಳನ್ನು ನಮಿಸಿದಾಗ, ಮಧ್ಯದ್ವಾರಗಳಲ್ಲಿರುವ ದೇವತೆಗಳ ನಮಸ್ಕಾರ ಕೃತಪ್ರಾಯವೆಂದು ಭಾವಿಸಿ, ಪ್ರಥಮ ನಾಲ್ಕು ದಿಕ್ಕಿನ ದ್ವಾರ ದೇವತೆಗಳಾದ ನಂದಾದಿಗಳನ್ನು ನಮಿಸಲಾಗಿದೆ ಎಂದು ತಿಳಿಯುವುದು. – ಪೂಜಾಕಲ್ಪಲತಾ.[1]

---

1. ಯದ್ಯಪ್ಯತ್ರ ಏಕಸ್ಯಾಮೇಕಸ್ಯಾಂ ದಿಶಿ ಚತ್ವಾರಿ ಚತ್ವಾರಿ ದ್ವಾರಾಣಿ ಸಂತೀತಿ ದಿಕ್‌ಚತುಷ್ಟಯಂ ಮಿಲಿತ್ವಾ ಷೋಡಶದ್ವಾರಾಣಿ ಭವಂತಿ । ತಥಾಪಿ ದಿಕ್ ಚತುಷ್ಟಯಗತ ಪ್ರಥಮ ಚತುರ್ಥದ್ವಾರಗತ ದೇವತಾ ನಮಸ್ಕಾರೇಣ ಮಧ್ಯಮದ್ವಾರಗತ ಪ್ರಥಮ ಚತುರ್ಥ ದ್ವಾರಗತ ದೇವತಾ ನಮಸ್ಕಾರಸ್ಯ ಕೃತಪ್ರಾಯತ್ವಮಿತಿ ಜ್ಞೇಯಮ್

**ಹದಿನಾರು ದೇವತೆಗಳು :**

**ಪೂರ್ವದ್ವಾರದಲ್ಲಿ – ಶ್ರೀ, ಭಾರತೀ, ಪ್ರಾಣ, ಚಕ್ಷುದೇವತೆ ಸೂರ್ಯ, ಜಯ–ವಿಜಯ**

**ದಕ್ಷಿಣದಲ್ಲಿ – ಶ್ರೀ ವಿದ್ಯುತ್, ವ್ಯಾನ, ಶ್ರೋತ್ರ–ಸೋಮ, ಬಲ ಪ್ರಬಲರು**

**ಪಶ್ಚಿಮದಲ್ಲಿ – ಶ್ರೀ, ಪೃಥಿವೀ, ಅಪಾನ, ವಾಕ್, ಅಗ್ನಿ, ನಂದಸುನಂದರು**

**ಉತ್ತರದಲ್ಲಿ – ಶ್ರೀ, ದಿಕ್‌ದೇವತೆ, ಸಮಾನ, ಮನ, ಇಂದ್ರ–ಕುಮುದ, ಕುಮುದಾಕ್ಷರು।**

ಭಗವಂತನ ಅರಮನೆಯನ್ನು ಪ್ರವೇಶಿಸಲು ಒಂದೊಂದು ದ್ವಾರದಲ್ಲಿ ಇಬ್ಬಿಬ್ಬರು ದ್ವಾರಪಾಲಕರಿರುವರು. ಇವರೆಲ್ಲರೂ ಮುಕ್ತಿಕೋಟಿಗೆ ಸೇರಿರುವರು. ಮುಕ್ತರಾದ ಜಯ–ವಿಜಯರು ಒಳಗಿನ ಏಳನೆಯ ಪ್ರಾಕಾರದಲ್ಲಿರುವರು.

ಅಮುಕ್ತರಾದ ಜಯ–ವಿಜಯರು ಹೊರಗಡೆ ಏಳನೆಯ ಪ್ರಾಕಾರದಲ್ಲಿರುವರು. ದಾಸರ ಪ್ರಕಾರ 41 (ನಲವತ್ತೊಂದು) ಬಾಗಿಲುಗಳಿದ್ದು ಏಳು ಪ್ರಾಕಾರಗಳಲ್ಲಿ ಒಂದೊಂದು ದಿಕ್ಕಿಗೆ ಏಳರಂತೆ ನಾಲ್ಕು ದಿಕ್ಕಿಗೆ 28 ದ್ವಾರಗಳು, ಹರಿಮಂದಿರದ ಮೂರು ಪ್ರಾಕಾರಗಳಲ್ಲಿ ನಾಲ್ಕು ದಿಕ್ಕಿನಲ್ಲಿ ದಿಕ್ಕಿಗೆ ಮೂರರಂತೆ 12 ದ್ವಾರಗಳು ಅಂತಃಪುರದ ದ್ವಾರವೊಂದು. ಒಟ್ಟು 41 ದ್ವಾರಗಳು.

ಒಂದೊಂದು ದ್ವಾರದಲ್ಲಿಯೂ ಇಬ್ಬಿಬ್ಬರಂತೆ ದ್ವಾರಪಾಲಕರು ಇರುವರು. ಪೂರ್ವದಲ್ಲಿ ರಮಾದೇವಿ, ಎರಡನೆಯ ದ್ವಾರದಲ್ಲಿ ಚಕ್ಷುಸ್ಸಿಗೆ ಅಭಿಮಾನಿ ಪ್ರಾಣನಾಮಕ ಸೂರ್ಯ ಹಾಗೂ ದ್ಯುನಾಮಕ ಭಾರತೀದೇವಿಯು, ತೃತೀಯ ದ್ವಾರದಲ್ಲಿ ಜಯ–ವಿಜಯರು, ನಂತರ ಮುಕ್ತ ಜಯ–ವಿಜಯರು, ದಕ್ಷಿಣದ ಪ್ರಥಮ ದ್ವಾರದಲ್ಲಿ ರಮಾದೇವಿ. ದ್ವಿತೀಯ ದ್ವಾರದಲ್ಲಿ ಶ್ರೋತ್ರಾಭಿಮಾನಿ ವ್ಯಾನನಾಮಕ ಚಂದ್ರನು. ದಿಙ್‌ನಾಮಕಗಳಾದ ಭಾರತೀದೇವಿ, ಬಲ–ಪ್ರಬಲರು.

ಪಶ್ಚಿಮ ದ್ವಾರದ ಪ್ರಥಮದಲ್ಲಿ ರಮಾದೇವಿ, ದ್ವಿತೀಯದಲ್ಲಿ

ವಾಗಭಿಮಾನಿಯಾದ ಅಪಾನ ನಾಮಕ ವಹ್ನಿಯು, ಪೃಥ್ವಿನಾಮಕ ಭಾರತಿಯು, ತೃತೀಯದಲ್ಲಿ ಕುಮುದ–ಕುಮುದಾಕ್ಷರು, ಉತ್ತರದ ದ್ವಾರದ ಪ್ರಥಮದಲ್ಲಿ ರಮಾದೇವಿ, ದ್ವಿತೀಯದಲ್ಲಿ ಮನೋಭಿಮಾನಿ ಸಮಾನನಾಮಕ ಇಂದ್ರದೇವನು, ವಿದ್ಯುನ್ನಾಮಕಳಾದ ಭಾರತೀದೇವಿ. ತೃತೀಯದಲ್ಲಿ ನಂದ–ಸುನಂದರು, ಹದಿಮೂರನೇ ಊರ್ಧ್ವದ್ವಾರದಲ್ಲಿ ಆಕಾಶನಾಮಕ ಲಕ್ಷ್ಮೀದೇವಿಯು.

ದೇವರ ಪೂಜೆಯಲ್ಲಿ ದ್ವಾರಪಾಲಕರನ್ನು ನಮಿಸುವಾಗ ಈ ರೀತಿಯ ಚಿಂತನೆ ಕ್ರಮವನ್ನು ಅಳವಡಿಸಿಕೊಳ್ಳಬೇಕು.

**ಪಂಚಪಾತ್ರ ಪೂಜೆ :**

ಹದಿನಾರು ಉಪಚಾರ ಪೂಜೆಗಳಲ್ಲಿ ಅರ್ಘ್ಯ, ಪಾದ್ಯ, ಆಚಮನ, ಮಧುಪರ್ಕ ಹಾಗೂ ಸ್ನಾನ. ಈ ಐದು ಸ್ನಾನದ ಅಂಗಗಳಿವೆ.

ಅರ್ಘ್ಯವೆಂದರೆ ಕೈಗೆ ನೀರು ಕೊಡುವುದು. ಪಾದ್ಯವೆಂದರೆ ಕಾಲು ತೊಳೆದುಕೊಳ್ಳಲು ಕೊಡುವ ನೀರು ಎಂದರ್ಥ.

ಈ ಪಂಚೋಪಚಾರ ಪೂಜೆಗಾಗಿ ಮಠಗಳಲ್ಲಿ ಐದು ಚಿಕ್ಕ ಚಿಕ್ಕ ಪಾತ್ರೆಗಳಿರುತ್ತವೆ. ಭಗವಂತನಿಗೆ ಅರ್ಘ್ಯಾದಿಗಳನ್ನು ಕೊಡುವಾಗ ಅರ್ಘ್ಯ, ಪಾದ್ಯ ಮೊದಲಾದವುಗಳಿಗೆ ಯೋಗ್ಯವಾದ ಆ ಪಾತ್ರೆಯಲ್ಲಿರುವ ಮೀಸಲು ನೀರಿನಿಂದಲೇ ನೀಡಬೇಕು.

ಪಂಚಪಾತ್ರೆ ಪೂಜೆಯೆಂದು ಐದು ಪಾತ್ರೆಗಳು ಮಾತ್ರ ಇಡಬೇಕಾದರೂ, ಪುನರಾಚಮನವು ಆಚಮನದಲ್ಲೇ ಸೇರುವುದರಿಂದ ಆರು ಪಾತ್ರೆ ಬೇಕಾಗಿರುವುದಿಲ್ಲ, ಐದೇ ಸಾಕು. ಆರು ಪಾತ್ರೆಗಳನ್ನಿಟ್ಟರೂ ತೊಂದರೆ ಇರುವುದಿಲ್ಲ. ಐದು ಪಾತ್ರೆಗಳ ಅನುಕೂಲವಿಲ್ಲದಿದ್ದಾಗ ಕಲಶದಲ್ಲಿದ್ದ ಶುದ್ಧ ನೀರನ್ನೇ ಉದ್ಧರಣೆಯಿಂದ ಆರು ಬಾರಿ ನೀರನ್ನು ಪಾತ್ರಾಂತರದಲ್ಲಿ ಹಾಕಿದರೂ ಸಾಕು.

ಪಾತ್ರೆಗಳಿಲ್ಲದಿದ್ದರೆ ಶಂಖದಿಂದಲೇ ಆರು ಬಾರಿ ಹಾಕುವುದು.

ಈ ಪಾತ್ರೆಗಳನ್ನು ವಾಯುವ್ಯಾದಿ ದಿಕ್ಕಿನಲ್ಲಿಟ್ಟು ಅವುಗಳಲ್ಲಿ ತುಳಸೀ ಪುಷ್ಪಗಳನ್ನು ಹಾಕಿ, ಗಂಧ ಹಚ್ಚಿ, ಸುಗಂಧದ್ರವ್ಯಗಳನ್ನು ಹಾಕಬಹುದು.

ಆವಾಹ್ಯ ದೇವತೆಗಳು – ಅರ್ಘ್ಯದಲ್ಲಿ ಲಕ್ಷ್ಮೀದೇವಿಯನ್ನು, ಪಾದ್ಯದಲ್ಲಿ ಸರಸ್ವತಿ, ಆಚಮನೀಯದಲ್ಲಿ ರತಿ, ಮಧುಪರ್ಕದಲ್ಲಿ ಬ್ರಹ್ಮದೇವ, ಸ್ನಾನೀಯದಲ್ಲಿ ವರುಣನನ್ನು, ಅಂತರ್ಯಾಮಿ ದೇವತೆಯನ್ನು ಆವಾಹಿಸಿಬೇಕು.

**ಅರ್ಘ್ಯಂ ಶ್ರಿಯಾ ಸಮಾಯುಕ್ತಂ ಪಾದ್ಯಪಾತ್ರೆ ಸರಸ್ವತೀಮ್ ।**
**ರತಿ ಮಾಚಮನೀಯೇ ಸ್ಯಾತ್ ಮಧುಪರ್ಕೇ ಪಿತಾಮಹಮ್ ॥**

3. **ಬ್ರಹ್ಮಪಾರಸ್ತೋತ್ರ – ವಿವರಣೆ :**

**ಆರುಹ್ಯ ವೇದಿಕಾಂ ಪಶ್ಚಾತ್ ಬ್ರಹ್ಮಪಾರಸ್ತವಂ ಪಠೇತ್ ।**

ಎಂದು ಪದ್ಯಮಾಲೆಯಲ್ಲಿ ಹೇಳಲಾಗಿದೆ– 414ನೇ ಶ್ಲೋಕ.

ಪಂಚಮಹಾಪಾತಕ, ಉಪಪಾತಕಗಳು ಪಾಪಪುರುಷ ರೂಪದಿಂದ ನಾಭಿಯ ಎಡಭಾಗದಲ್ಲಿ ಇರುತ್ತವೆ. ಇವನು ಎರಡು ನಿಮಿಷಕ್ಕೆ ಹೊಸ–ಹೊಸದಾಗಿ ಹುಟ್ಟಿಕೊಳ್ಳುತ್ತಿರುವನು. ಇಂತಹ ಪಾಪಗಳನ್ನು ನಿರಾಸ ಮಾಡದೇ ಪೂಜಾಧಿಕಾರವೇ ಹುಟ್ಟುವುದಿಲ್ಲ. ಅದಕ್ಕಾಗಿ ಬ್ರಹ್ಮಪಾರ–ಸ್ತೋತ್ರ ಪಠಿಸಿದರೆ ಆ ಪಾಪಗಳು ನಾಶವಾಗಿ ಶುದ್ಧರಾಗಬಹುದು. ಶ್ರೀಮದಾಚಾರ್ಯರು ಕೂಡ ಅನುವ್ಯಾಖ್ಯಾನದಲ್ಲಿ (3/21) ತಿಳಿಸಿದ್ದಾರೆ.

**ಏಕೈವ ಬ್ರಹ್ಮಹತ್ಯಾ ಹಿ ವರಾಹ ಹರಿಣೋದಿತಾ ।**
**ಬ್ರಹ್ಮಪಾರಸ್ತವೇನೈವ ನಿಷ್ಕ್ರಾಂತಾ ರಾಜದೇಹತಃ ॥**

ಈ ಸ್ತೋತ್ರದ ಮಹಿಮೆಯಿಂದಲೇ ವ್ಯಾಧನಾಗಿದ್ದು ರಾಜನೊಬ್ಬನು ಪುನಃ ಜ್ಞಾನವನ್ನು ಹೊಂದಿ ಭಗವಂತನನ್ನು ಸೇರಿದನು ಎಂದು ಹೇಳಲಾಗಿದೆ.

**ಸ್ತೋತ್ರಸ್ಯ ತಸ್ಯ ಮಾಹಾತ್ಮ್ಯಾತ್ ವ್ಯಾಧತ್ವಂ ಗಮಿತಾ ಪುನಃ ।**
**ಪ್ರಾಪ್ಯ ಜ್ಞಾನಂ ಪರಂ ಚಾಪ ತಥಾನ್ಯಾನ್ಯಪಿ ಸರ್ವಶಃ ॥**

– ಅನುವ್ಯಾ–3/2/218–219

ವಿಷ್ಣುತೀರ್ಥೀಯದಲ್ಲೂ ಹೀಗೆ ಹೇಳಲಾಗಿದೆ –

**ರಾಜ್ಞಾಕೃತಾ ಬ್ರಹ್ಮಹತ್ಯಾ ಪರಬ್ರಹ್ಮಸ್ತವೇನ ತು ।**
**ಸ್ತುತೇ ಹರೌ ನಿರ್ಗತಾऽಸ್ಯ ಕ್ಷಣಾದ್ ದೇಹಾನ್ ಮಹಾತ್ಮನಃ ॥**

–ವಿಷ್ಣು–3/142

**ಸಂಕಲ್ಪ್ಯ ವಿಧಿವತ್ ಪಶ್ಚಾದ್ ಬ್ರಹ್ಮಪಾರಸ್ತವಂ ಪಠೇತ್ ।**
**ಬ್ರಹ್ಮಹತ್ಯಾದಿಪಾಪಾನಾಂ ಯತೋ ನಿಷ್ಕೃತಿಕಾರಣಮ್ ॥**

ಬ್ರಹ್ಮಹತ್ಯಾದಿ ಪಾಪಗಳು ಇದರಿಂದ ನಿವೃತ್ತಿ ಹೊಂದುವುದರಿಂದ ನಿತ್ಯವು ಸಂಕಲ್ಪಾನಂತರ ಬ್ರಹ್ಮಪಾರಸ್ತವವನ್ನು ಪಠಿಸಬೇಕು.

**ಬ್ರಹ್ಮಪಾರಸ್ತವಸ್ತಸ್ಮಾತ್ ನಿತ್ಯಂ ಪಾಠ್ಯೋ ಬುಭೂಷಿಭಿಃ ।**

**ವಿಷ್ಣುಪುರಾಣ ಕಥೆ :**

"ಕಂಡು" ಎಂಬ ಋಷಿಗಳು ಸರ್ವದಾ ತಪೋನಿರತರಾಗಿದ್ದರು. ಇವರ ತಪಸ್ಸಿನ ನಿಷ್ಠೆಯನ್ನು ಕಂಡ ಇಂದ್ರದೇವನು ಇವರ ತಪಸ್ಸು ಹೀಗೆ ಸಾಗಿದರೆ ಸಾಧನೆ ಪೂರ್ತಿಯಾಗಿ ತಕ್ಷಣ ಮೋಕ್ಷ ಹೊಂದಬೇಕಾದೀತು ಎಂದಾಲೋಚಿಸಿ ತಪೋಭಂಗಕ್ಕಾಗಿ "ಪ್ರಮ್ಲೋಚೆ" ಎಂಬ ಅಪ್ಸರಾಸ್ತ್ರೀಯನ್ನು ಕಳುಹಿಸಿದನು. ಇವಳನ್ನು ನೋಡಿದ ಕಂಡುವು ತಪಸ್ಸನ್ನು ನಿಲ್ಲಿಸಿ ಅವಳ ಜೊತೆ ಸಂಸಾರಕ್ಕಿಳಿದನು. 997 ವರ್ಷ, 6 ತಿಂಗಳು, ಮೂರು ದಿವಸಗಳಷ್ಟು ಕಾಲ ಸಂಸಾರಿಯಾದನು. ನಂತರ ಎಚ್ಚೆತ್ತು ಪ್ರಮ್ಲೋಚೆಗೆ ಶಾಪ ಕೊಡಲು ಮುಂದಾದಾಗ ಅವಳ ಬೆವರಿದಳು. ಆದರೆ ತನ್ನದೇ ತಪ್ಪಿರುವಾಗ ಇವಳಿಗೆ ಶಾಪ ಕೊಡುವುದು ಸರಿಯಲ್ಲ. ತನಗೆ ಇಂದ್ರಿಯ ನಿಗ್ರಹವಿಲ್ಲದಿರುವಾಗ ಈ ಮೋಹದ ಪೆಟ್ಟಿಗೆಗೆ ಏಕೆ ಶಾಪ ಕೊಡಲಿ? ಎಂದು ತೀರ್ಮಾನಿಸಿ ತನ್ನ ತಪ್ಪಿಗಾಗಿ ಭಕ್ತಿಯಿಂದ ಭಗವಂತನನ್ನು ನೆನೆದರು. ಭಕ್ತಿಯಿಂದ ಅರಳಿದ ಕುಸುಮವನ್ನು ಭಗವಂತನಿಗೆ ಅರ್ಪಿಸಿದರು. ಇದೇ ಭಗವಂತನ ಪಾರಮ್ಯ ಸಾರುವ ಬ್ರಹ್ಮಪಾರಸ್ತವ. ಈ ಸ್ತವವನ್ನು ಚಂದ್ರನು ಪ್ರಾಚೀನ ಬರ್ಹಿಯ ಮಕ್ಕಳಾದ

ಹತ್ತು ಪ್ರಚೇತಸರಿಗೆ ತಿಳಿಸಿದನು. ಭಗವಂತನು ಪ್ರಚೇತಸರಿಗೆ ಸೃಷ್ಟಿ ಮಾಡಲು ಆಜ್ಞಾಪಿಸಿದನು. ಸೃಷ್ಟಿಗಾಗಿ ಸ್ಥಳವಿಲ್ಲದೆ ದಟ್ಟವಾಗಿ ಬೆಳೆದಿದ್ದ ಅರಣ್ಯವನ್ನೆಲ್ಲಾ ಸುಡಲು ಪ್ರಾರಂಭಿಸಿದರು. ಇದನ್ನು ಕಂಡ ವನಸ್ಪತಿಗಳಿಗೆ ದೇವತೆಯಾದ ಚಂದ್ರದೇವನು ಪ್ರಚೇತಸರನ್ನು ಸಮಾಧಾನ ಮಾಡಿ ತನ್ನ ಹಾಗೂ ಕಂಡು ಋಷಿಯಿಂದ ಜನಿಸಿದ "ಮಾರಿಷಾ" ಎಂಬ ಕನ್ಯೆಯನ್ನು ಪ್ರಚೇತಸರಿಗೆ ಕೊಟ್ಟು ವಿವಾಹ ಮಾಡಿದನು. ಆ ಸಂದರ್ಭದಲ್ಲಿಯೇ ಪ್ರಚೇತಸರಿಗೆ ಬ್ರಹ್ಮಪಾರಸ್ತೋತ್ರದ ಮಹಿಮೆಯನ್ನು ತಿಳಿಸಿ ಪಠಿಸಲು ತಿಳಿಸಿದನು.

**4. ಘಂಟೆಯ ಬಗ್ಗೆ ವಿವರಣೆ :**

**ಘಂಟೆಯ ಲಕ್ಷಣ :**

'ಓಂ' ಎಂಬ ಧ್ವನಿಯಿಂದ ಕೂಡಿರುವ, ಬ್ರಹ್ಮಾಂಡಗೋಳಕದ ಆಕಾರವಿರುವ, ಸುಂದರವಾದ, ದೀಪದಂತೆ ಮಿನುಗುವ, ಹೊರಗೆ ಇರುವ ಹಿಡಿಯುವ ದಂಡವು ಒಳಗಿನ ತಾಳದಷ್ಟೇ ಉದ್ದವಿರಬೇಕು.

**ಶಬ್ದ ಬ್ರಹ್ಮಮಯೀ ವರ್ಣಹಸ್ತೋತ್ಸೇಧ ಪ್ರಮಾಣಿಕಾ ।**
**ಬ್ರಹ್ಮಾಂಡಗೋಲಕಾ ಕಾರಸೌಷ್ಠವಾವಯವಾ ಭವೇತ್ ॥**

**ಅದೋ ಮುಸ್ತಾಳಮಾನಾ ಚ ವಿಸ್ತರೋತ್ಸೇಧಸಂಮಿತಾ ।**
**ಪ್ರದೀಪತುಲ್ಯ ಸಂಸ್ಥಾನಾ ಶ್ಲಕ್ಷ್ಣಾಭ್ಯಂತರತಾಲಕಾ ॥**

- **ಘಂಟೆಯು ಸರ್ವವಾದ್ಯಮಯವಾಗಿದೆ :**

**ವಾದಿತ್ರಾಣಾಂ ಅಭಾವೇ ತು ಪೂಜಾಕಾಲೇ ಹಿ ಸರ್ವದಾ ।**
**ಘಂಟಾ ಭವೇದ್ ಅಶಕ್ತಸ್ಯ ಸರ್ವವಾದ್ಯಮಯೋ ಯತಃ ॥**

ಘಂಟೆಯು ಭಗವಂತನಿಗೆ ಪ್ರಿಯವಾದದ್ದು ವಾಜಪೇಯ ಫಲ ನೀಡುತ್ತದೆ.

**ಘಂಟಾಲೋಹಮಯಾಘಂಟಾ ಕೃಷ್ಣಸ್ಯಾಹ್ಲಾದಕಾರಿಣೀ ।**
**ತಸ್ಯ ವಾದನಮಾತ್ರೇಣ ವಾಜಪೇಯ ಫಲಂ ಭವೇತ್ ॥**

ಘಂಟಾನಾದವಿಲ್ಲದೆ ಪೂಜಿಸಿದರೆ ಕಿವುಡತನ ಪ್ರಾಪ್ತಿ–

**ಭೇರೀ ಶಬ್ದಂ ಅಕೃತ್ವಾ ತು ಯಸ್ತು ಮಾಂ ಪ್ರತಿಬೋಧಯೇತ್ ।**
**ಬದಿರೋ ಜಾಯತೇ ಭೂಮೌ ಜನ್ಮೈಕಂ ಚನ ಸಂಶಯಃ ॥**

ಘಂಟಾರಹಿತ ಪೂಜೆಯು ಮೂಕತ್ವ ನೀಡುತ್ತದೆ.

**ಘಂಟಾನಾದವಿಹೀನಂ ಯಃ ಪೂಜಾಕರ್ಮ ಸಮಾಚರೇತ್ ।**
**ವಿಷ್ಣುದ್ರೋಹಾತ್ ಪತತ್ಯಂಧಃ ಇಹ ಮೂಕ್ಷೋಽಭಿ ಜಾಯತೇ ॥**

ಘಂಟಾನಾದವಿಲ್ಲದ ಪ್ರದೇಶವು ರಾಕ್ಷಸ–ಪಿಶಾಚಿಗಳ ಆವಾಸಸ್ಥಾನ.

**ಅಜ್ಞಾನಾತ್ ಜ್ಞಾನತೋ ವಾಽಪಿ ಕಾಂಸ್ಯಘಂಟಾಂ ನ ವಾದಯೇತ್ ।**
**ರಾಕ್ಷಸಾನಾಂ ಪಿಶಾಚಾನಾಂ ತದ್ದೇಶೇ ವಸತಿರ್ಭವೇತ್ ॥**
**(ನ ವಾದಯೇದ್ ಇತ್ಯನಂತರಂ ಯದೀತಿ ಶೇಷಃ)**

ಸ್ನಾನ, ಧೂಪ, ದೀಪ, ನೈವೇದ್ಯ, ನೀರಾಜನ ಕಾಲಗಳಲ್ಲಿ ಘಂಟಾನಾದ ಮಾಡಬೇಕು.

**ಸ್ನಾನೇ ಧೂಪೇ ತಥಾ ದೀಪೇ ನೈವೇದ್ಯೇ ಶಯನೇ ತಥಾ ।**
**ಬೋಧನೇ ಭೂಷಣೇ ಚೈವ ಕುರ್ಯಾದ್ ಘೋಷಂ ಸದಾ ನರಃ ॥**

**ಘಂಟಾನಾದಂ ಪ್ರಕುರ್ವೀತ ತಥಾ ನೀರಾಜನೇಽಪಿ ಚ ।**

- **ಘಂಟಾ ದೇವತೆಗಳು :**

**ಘಂಟಾಯಾಂ ವಸತೇ ಲಕ್ಷ್ಮೀಃ ಜಿಹ್ವಾಯಾಂ ವಾಯುರಾಸ್ಥಿತಃ ।**
**ಘಂಟಾಗ್ರೇ ಬ್ರಹ್ಮದೈವತ್ಯಂ ಮುಕುಲೇ ರುದ್ರದೈವತಂ ॥**

**ಸೂತ್ರಾಣಾಂ ಚ ಮಹಾನಾಗಂ ಸ್ವರೇ ಚೈವ ಸರಸ್ವತೀಂ ।**
**ನಾದಂ ಪ್ರಜಾಪತಿಂ ವಿದ್ಯಾದ್ ಘಂಟಾನಾಮಧಿ ದೇವತಾಃ ॥**

– ಪರಮಪುರುಷ ಸಂಹಿತೆ

ಘಂಟೆಯಲ್ಲಿ ಗರುಡನ ಪ್ರತೀಕದಿಂದ ಪೂರ್ಣಫಲವು

**ಯಸ್ತು ವಾದಯತೇ ಘಂಟಾಂ ವೈನತೇನೇನ ಚಿಹ್ನಿತಾಂ ।**
**ಧೂಪೇ ದೀಪೇ ತಥಾ ಸ್ನಾನೇ ಪೂಜಾಕಾಲೇ ವಿಲೇಪನೇ ॥**

ವಿಧಿನಾ ಹ್ಯಕೃತಾ ಪೂಜಾ ಸಫಲಾ ಜಾಯತೇ ನೃಣಾಮ್ ।
ನ ಸರ್ಪಾಣಾಂ ಭಯಂ ತತ್ರ ನಾಗ್ನಿ ವಿದ್ಯುತ್ ಸಮುದ್ಭವಮ್ ॥

ಸುದರ್ಶನ ಚಕ್ರವಿರುವ ಘಂಟೆಯ ನಾದ ಮಾತ್ರದಿಂದ ಜನ್ಮಮೃತ್ಯು ಭಯವಿರುವುದಿಲ್ಲ.

ನಾಗಾರಿ ಚಿಹ್ನಿತಾ ಘಂಟಾ ರಥಾಂಗೇನ ಸಮನ್ವಿತಾ ।
ವಾದನಾತ್ ಕುರುತೇ ನಾಶಂ ಜನ್ಮಮೃತ್ಯುಭಯಸ್ಯ ಚ ॥

ಘಂಟೆಯಲ್ಲಿ ಮುಖ್ಯಪ್ರಾಣ ಘಂಟಾ ನಾದವು ಭಗವದ್ಗುಣವಾಚಕವು.

ತದಪೇಕ್ಷಯಾ ಅನ್ಯನೀಚತ್ವಂ ಘಂಟಾದ್ಯಾಃ ಸ್ವರಿತಾತ್ಮಕಾಃ ।
ಘಂಟಾಸ್ತನಿತಮೂಲಾಸ್ತೇ ಪ್ರಬುದ್ಧಾಃ ಕರ್ಮಸಿದ್ಧಿದಾ ॥

ಘಂಟಾ ನಾದದಿಂದ ವರ್ಣದಲ್ಲಿರುವ ದೇವತೆಗಳು ಅನುಗ್ರಹ ಮಾಡುವರು

ಪರಶಬ್ದೋತ್ಥಿತಾ ಶಕ್ತಿಃ ಘಂಟಾಸ್ತನಿತರೂಪಿಣೀ ।
ವರ್ಣತ್ವಂ ಸಮನುಪ್ರಾಪ್ತಾಃ ತೈಃ ವರ್ಣೈಃ ಮುನಿಸತ್ತಮ ॥

ಮಂತ್ರಾಣಾಂ ಕಲ್ಪನಾದೇಹಾ ನಾನಾಕಾರಾಃ ಸಹಸ್ರಶಃ ।
ಸ್ವೇಚ್ಛಯಾ ತ್ವನಯಾ ಶಕ್ತ್ಯಾ ಸಾಮರ್ಥ್ಯಾಃ ಸ್ವಾತ್ಮನಃ ಸ್ವಯಂ ॥

ಘಂಟಾ ನಾದವನ್ನು ದೃಷ್ಟಿಪರ್ಯಂತ ಎತ್ತಿ ಮಾಡಬೇಕು

ಉತ್ತೋಲ್ಯ ದೃಷ್ಟಿಪರ್ಯಂತಂ ಘಂಟಾಂ ಯಮದಿಶಿಸ್ಥಿತಂ ।
ವಾದಯನ್ ವಾಮಹಸ್ತೇನ ದಕ್ಷಹಸ್ತೇನ ಚಾರ್ಚಯೇತ್ ॥

- ಒಡೆದಿರುವ ಘಂಟೆಯು ಪೂಜೆಯಲ್ಲಿ ನಿಷಿದ್ಧ :

  ಹೀನನಾದಾ ತು ಯಾ ಘಂಟಾ ವರ್ಜನೀಯಾ ಪ್ರಯತ್ನತಃ ।

- ಬಲಗೈಯಿಂದ ಎತ್ತಿಕೊಂಡು ಎಡಗೈಯಿಂದ ನಾದ ಮಾಡಬೇಕು :

  ದಕ್ಷಹಸ್ತೇನ ಉದ್ಧೃತ್ಯ ವಾಮಹಸ್ತೇನ ಚಾಲಯನ್ ।
  ಪೂಜಾಂ ಕುರ್ವೀತ ವಿಷ್ಣೋಸ್ತು ಅನ್ಯಥಾ ನಿಷ್ಫಲಂ ಭವೇತ್ ॥

ಘಂಟೆಯನ್ನು ಮೊದಲು ತೊಳೆದು, ಆವಾಹಿಸಿ, ನಂತರ ವಾದನ ಮಾಡಬೇಕು.

**ಅಸಂಸ್ಕೃತಾಯಾಶ್ಚಾಲನೇ ಗ್ರಾಮಾದೇಃ ಚಲನಂ ಭವೇತ್ ।**
**ನಿಷ್ಫಲಾ ಚಾಪಿ ಪೂಜಾ ಸ್ಯಾತ್ ಪರಸ್ಯ ಪರಮಾತ್ಮನಃ ॥**

- **ಪೂಜೆಯ ಕಡೆಯಲ್ಲಿಯೂ ಘಂಟಾನಾದ ಮಾಡಬೇಕು :**

**ಪೂಜಾಂತೇ ತು ಪ್ರಕುರ್ವೀತ ಘಂಟಾನಾದಂ ಸುರೋತ್ತಮಾಃ ।**
**ಸಂಪೂರ್ಣಾರ್ಥಂ ಮಂಗಲಾರ್ಥಂ ಪೂಜಾಯ ಪರಮಾತ್ಮನಃ ॥**

- **ಪೂಜಾಕಾಲ ಹೊರತಾಗಿ ಅನ್ಯಕಾಲದಲ್ಲಿ ಘಂಟಾನಾದ ನಿಷಿದ್ಧ :**

**ಪೂಜಾಕಾಲಂ ವಿನಾಽನ್ಯತ್ರ ಹಿತಂ ನಾಸ್ಯಾಃ ಪ್ರಚಾಲನಂ ।**
**ನಾನಯಾ ತು ವಿನಾ ಕಾರ್ಯಂ ಪೂಜನಂ ಸಿದ್ಧಿಮಿಚ್ಛತಾ ॥**

### ೭. ನಿರ್ಮಾಲ್ಯ ವಿಸರ್ಜನಮ್ ಬಗ್ಗೆ ವಿವರಣೆ :

ನಿರ್ಮಾಲ್ಯವೆಂದರೇನು?

ನಿರ್ಮಾಲ್ಯವೆಂದರೇ ಹಿಂದಿನ ರಾತ್ರಿ ದೇವರನ್ನು ಪೂಜಿಸುವಾಗ ಉಪಯೋಗಿಸಿದ ತುಲಸೀ, ಪುಷ್ಪ, ಇವುಗಳು ಮಾರನೇ ದಿನ ಪ್ರಾತಃಕಾಲಕ್ಕೆ ನಿರ್ಮಾಲ್ಯವೆನಿಸುತ್ತದೆ. (ನಿರ್+ಮಲಧಾರಣೆ+ಣ್ಯತ್) ಭಗವಂತನ ಮೇಲೆ ಇರುವಷ್ಟು ಕಾಲ ನೈವೇದ್ಯವೆನಿಸಿದರೆ, ತೆಗೆದ ಮೇಲೆ "ನಿರ್ಮಾಲ್ಯ"ವಾಗುತ್ತದೆ.

ನಿರ್ಮಾಲ್ಯವು ಮೇರು, ಸಪ್ತಸಾಗರಗಳಿಗಿಂತಲೂ ಭಾರವು – ಮೇರುತಂತ್ರೇ

**ನ ಭಾರಂ ಮೇರುಶಿಖರಂ ನ ಭಾರಂ ಸಪ್ತಸಾಗರಂ ।**
**ರಾತ್ರೌ ಪೂಜಿತನಿರ್ಮಾಲ್ಯಂ ಪ್ರಭಾತೇ ಭಾರಮದ್ಭುತಮ್ ॥**

–ಮೇರುತಂತ್ರೇ

ಆದ್ದರಿಂದ ಆ ಕಾಲದಲ್ಲಿ ಶ್ರೀಸೂಕ್ತ ಪಠಿಸಬೇಕು.

- **ನಿರ್ಮಾಲ್ಯಾಭಿಮಾನಿ ಲಕ್ಷ್ಮೀದೇವಿ :**

**ನಿರ್ಮಾಲ್ಯಮಾನಿನೀ ದೇವೀ ಶ್ರೀಲಕ್ಷ್ಮೀಃ ಸಂಪ್ರಕೀರ್ತಿತಾ।**
**ನಿರ್ಮಾಲ್ಯೋತ್ಸರ್ಜನೇ ಕಾಲೇ ಶ್ರೀಸೂಕ್ತಂ ಸಂಪಠೇತ್ ಸುಧೀಃ॥**

– ಸಂಗ್ರಹ

ಅಂಗುಷ್ಟ–ತರ್ಜನೀ ಬೆರಳುಗಳಿಂದ ನಿರ್ಮಾಲ್ಯ ತೆಗೆಯಬೇಕು – ಪೂಜಾ ಕಲ್ಪಲತೆ.

**ಅಂಗಷ್ಟ–ತರ್ಜನ್ಯಗ್ರಾಭ್ಯಾಂ ನಿರ್ಮಾಲ್ಯಮನೋದಯೇತ್।**

ನಿರ್ಮಾಲ್ಯವನ್ನು ಚಿನ್ನದ ಹರಿವಾಣ ಧರಿಸಿರುವ ಶಿವನ ಶಿರಸ್ಸಿನಲ್ಲಿ ಹಾಕುವುದು.

**ಜೀವಸ್ಯ ವಾಮಭಾಗೇ ತು ವಾಮದೇವಂ ಸ್ಮರೇದ್ ದ್ವಿಜಃ।**
**ವಿಷ್ಣೋಃ ನಿರ್ಮಾಲ್ಯಶೇಷಂ ವೈ ರುದ್ರೇ ಶಿರಸಿ ನಿಕ್ಷಿಪೇತ್॥**

**ವಿಷ್ವಕ್ಸೇನನು ನಿರ್ಮಾಲಯಧಾರೀ।** – ಅನಂತ ಸಂಹಿತೆ

**ನಿರ್ಮಾಲ್ಯಧಾರಿ ವಿಷ್ಣೋಸ್ತು ವಿಷ್ವಕ್ಸೇನಃ ಚತುರ್ಭುಜಃ।**

ನಿರ್ಮಾಲ್ಯವನ್ನು ನೀರು, ಗಿಡದ ಪಾತಿ, ತುಳಿಯದ ಸ್ಥಳದಲ್ಲಿ ಹಾಕಬೇಕು.

**ಉದಕೇ ತರುಮೂಲೇ ವಾ ನಿರ್ಮಾಲ್ಯಂ ತಸ್ಯ ಸಂತ್ಯಜೇತ್।**

ನಿರ್ಮಾಲ್ಯವನ್ನು ದಾಟಬಾರದು ದಾಟಿದರೆ ಬ್ರಾಹ್ಮಣರ ಎಂಜಲೆಲೆ ಎತ್ತಬೇಕು – ನೃಸಿಂಹ ಪುರಾಣ.

- **ನಿರ್ಮಾಲ್ಯದ ಕಾಲ–ಅರುಣೋದಯ ಕಾಲವೇ ಮುಖ್ಯ :**

**ಅರುಣೋದಯ ವೇಲಾಯಾಂ ನಿರ್ಮಾಲ್ಯಂ ಶಲ್ಯತಾಂ ವ್ರಜೇತ್।**
**ಪ್ರಾತಸ್ತು ಸ್ಯಾನ್ ಮಹಾಶಲ್ಯಂ ಘಟಿಕಾಯೋಗ ಮಾತ್ರತಃ।**
**ಅತಿಶಲ್ಯಂ ವಿಜಾನೀಯಾತ್ ತತೋ ವಜ್ರಪ್ರಹಾರವತ್॥**

ಅರುಣೋದಯದ ಶಲ್ಯದೇಟನ್ನು ಸಹಿಸುವನು.

**ಅರುಣೋದಯವೇಲಾಯಾಂ ಶಲ್ಯಂ ತತ್ ಕ್ಷಮತೇ ಹರಿ।**
**ಘಟಿಕಾಯಾ ಅತಿಕ್ರಾಂತೌ ಕ್ಷುದ್ರಪಾತಕ ಮಾವಹೇತ್॥**

ಮುಹೂರ್ತೇ ಸಮಕ್ರಾಂತೇ ಪೂರ್ಣ ಪಾತಕಮುಚ್ಯತೇ ।
ತತಃ ಕಿಲ ಬ್ರಹ್ಮವಧಃ ಮಹಾಪಾತಕ ಪಂಚಕಮ್ ॥

- ಕಾಲಾತಿಕ್ರಮಕ್ಕೆ ಗಾಯತ್ರೀಜಪ (ಪೂ.ಕ.) :

ಅತಿಕ್ರಾಂತಮುಹೂರ್ತಾರ್ಧೇ ಸಹಸ್ರಂ ಜಪಮಾಚರೇತ್ ।
ಪೂರ್ಣೇ ಮುಹೂರ್ತೇ ಸಂಜಾತೇ ಸಹಸ್ರಂ ಸಾರ್ಧಮುಚ್ಯತೇ ॥
ಪ್ರಹರೇ ಪೂರ್ಣತಾಂ ಯಾತೇ ಪ್ರಾಯಶ್ಚಿತ್ತಂ ನ ವಿದ್ಯತೇ ॥

ನಿರ್ಮಾಲ್ಯ ವಿಸರ್ಜನೆಯಿಂದ ರೋಗ–ದಾರಿದ್ರಾದಿಗಳು ದೂರ–ವಾಗುವುವು –ನೃಸಿಂಹ ಪುರಾಣ.

ಯಃ ಪ್ರಾತರುತ್ಥಾಯ ವಿಧಾಯ ನಿತ್ಯಂ ನಿರ್ಮಾಲ್ಯಮೀಶಸ್ಯ ನಿರಾಕರೋತಿ ।
ನ ತಸ್ಯ ದುಃಖಂ ನ ದರಿದ್ರತಾ ಚ ನಾಕಾಲಮೃತ್ಯುಃ ನ ಚ ರೋಗಮಾತ್ರಮ್ ॥

- ನಿರ್ಮಾಲ್ಯ ವಿಸರ್ಜನೆಯಲ್ಲಿ ಅಂಭೃಣೀಸೂಕ್ತ (ಸ್ಮೃಮು) :

ಸಂಪುಟೋದ್ಘಾಟನಂ ಕೃತ್ವಾ ಗಾಯತ್ರ್ಯಾ ವಿಷ್ಣುಸಂಜ್ಞಯಾ ।
ಲಕ್ಷ್ಮೀಸೂಕ್ತೇನ ನಿರ್ಮಾಲ್ಯಂ ವಿಸೃಜ್ಯ ಸ್ನಾನಪಾತ್ರಕೇ ॥
ನಿರ್ಮಾಲ್ಯ ವಿಸರ್ಜನೇ "ಅಹಂ ರುದ್ರೇಭಿಂ" ಇತ್ಯಾದಿ ಸೂಕ್ತಂ ಪಠೇತ್ ।
ನಿರ್ಮಾಲ್ಯಾಭಿಷೇಕೇ ಪುರುಷಸೂಕ್ತಂ ಋಷಭಸೂಕ್ತಂ ವಾ ಪಠೇತ್ ॥
– ಪೂ.ಕ.ಪುಟ–67

- ಪುರುಷಸೂಕ್ತಕ್ಕಿಂತ ಉತ್ತಮ ಸೂಕ್ತ ಇನ್ನೊಂದಿಲ್ಲ :

ತದ್ವಿಷ್ಣೋರಿತಿ ಮಂತ್ರೇಣ ಸೂಕ್ತೇನ ಪುರುಷೇಣ ತು ।
ನೈತಾಭ್ಯಾಂ ಸದೃಶೋಮಂತ್ರಃ ವೇದೇಷೂಕ್ತೋ ಚತುರ್ಷ್ವಪಿ ॥

- ಸ್ವದೇಹಸ್ಥ ಭಗವಂತನಿಗೂ ಪುರುಷಸೂಕ್ತದಿಂದ ಅಭಿಷೇಕ :

ಸಿಂಚೇತ್ ಪುರುಷಸೂಕ್ತೇನ ಸ್ವದೇಹಸ್ಥಂ ಹರಿಂ ಸ್ಮರನ್ ।

ನಿರ್ಮಾಲ್ಯ ತೀರ್ಥ ಸೇವನೆಯಿಂದ ಹನ್ನೆರಡು ವರ್ಷ ಉಪವಾಸ ಮಾಡಿದ ಫಲ.

**ದ್ವಾದಶಾಬ್ದೋಪವಾಸಸ್ಯ ವಿಷ್ಣುಪಾದೋದಕಸೇವನಮ್ ।**

- **ನಿರ್ಮಾಲ್ಯ ತೀರ್ಥದಲ್ಲಿ ವಿಶ್ವಾದಿ ಭಗವಂತನ ಸ್ಮರಣೆ :**

**ತೀರ್ಥಗ್ರಹಣ ಕಾಲೇ ತು ವಿಶ್ವಾದಿ ಸ್ಮರಣಂ ಸ್ಮೃತಮ್ ।**
**ತಾಪತ್ರಯಾದಿಹರಣಂ ತುರೀಯೇಣ ತು ಪ್ರೋಕ್ಷಣಮ್ ॥**

**ತತ್ತೀರ್ಥಂ ವಿಮಲಂ ಪುಣ್ಯಂ ನತ್ವಾ ಪೀತ್ವಾ ತು ಮಸ್ತಕೇ ।**
**ಧಾರಯೇದ್ ಯಃ ಸ ಸರ್ವಜ್ಞೋ ವಿಧಿನಾ ವಿಧಿದರ್ಶಕಃ ॥**

**ನಿರ್ಮಾಲ್ಯ ಕ್ರಮಃ –**

ಪೂಜಕನು ಪೂರ್ವ ಅಥವಾ ಉತ್ತರ ದಿಕ್ಕನ್ನು ನೋಡುತ್ತಾ ದೇವರಿಗೆ ಅಭಿಮುಖನಾಗಿಯಾಲೀ ಕುಳಿತುಕೊಳ್ಳಬೇಕು. ದೇವರ ಸಂಪುಟವನ್ನು **"ನಾರಾಯಣಾಯವಿದ್ಮಹೇ"** ಇತ್ಯಾದಿ ನಾರಾಯಣ ಗಾಯತ್ರಿ–ಯಿಂದಲೂ, ಹಾಗೂ **ಓಂ ಪಕ್ಷಿ ಸ್ವಾಹಾ** ಎಂಬ ಗರುಡ ಪಂಚಾಕ್ಷರಿಯಿಂದಾಗಲೀ ತೆಗೆಯಬೇಕು. ಶ್ರೀಸೂಕ್ತ ಹಾಗೂ ಅಂಭೃಣಿಯಿಂದ ಹಿಂದಿನ ದಿವಸ ಹಾಕಿದ ತುಲಸ್ಯಾದಿಗಳನ್ನು ವಿಸರ್ಜಿಸಬೇಕು. ದೇವರ ಎಡಭಾಗದಲ್ಲಿ ಶುದ್ಧ ಸ್ಥಳದಲ್ಲಿ ಅಂಜಲಿಬದ್ಧನಾಗಿ ರುದ್ರನನ್ನು ಸ್ಮರಿಸುವುದು. ಆ ರುದ್ರದೇವನ ತಲೆಯ ಮೇಲೆ ಸುವರ್ಣದ ತಟ್ಟೆಯನ್ನು ಚಿಂತಿಸಿ, ಅಲ್ಲಿ **'ಭೂಮ್ಯೈ ನಮಃ'** ಎಂದು ಭೂದೇವಿಯನ್ನು ಆವಾಹಿಸಬೇಕು. **'ಓಂ ಪ್ರಾಣಾಯ ನಮಃ'** ಎಂದು ಆ ಪಾತ್ರೆಯನ್ನು ನೀರಿನಿಂದ ಪ್ರೋಕ್ಷಿಸಬೇಕು. ಆ ಪಾತ್ರೆಯಲ್ಲಿ ಸನ್ನಿಹಿತರಾದ ಪ್ರಾಣದೇವರ ಶಿರಸ್ಸಿನಲ್ಲಿ ನಿರ್ಮಾಲ್ಯವನ್ನು ಹಾಕಬೇಕು.

6. **ಸಂಕಲ್ಪಃ :**

ಯಾವುದೇ ಕರ್ಮಾಚರಣೆಯಲ್ಲಿ ಸಂಕಲ್ಪವನ್ನು ಮಾಡಲೇಬೇಕು. ಸಂಕಲ್ಪವಿಲ್ಲದೆ ಕರ್ಮವನ್ನು ಮಾಡಿದರೆ ಅರ್ಧ ಮಾತ್ರ ಫಲಪ್ರಾಪ್ತಿ.

**ಸಂಕಲ್ಪೇನ ವಿನಾ ಕರ್ಮ ಯತ್ ಕಿಂಚಿತ್ ಕುರುತೇ ನರಃ।**
**ಫಲಂ ಚಾಪ್ಯಲ್ಪಕಂ ತಸ್ಯ ಧರ್ಮಸ್ಯಾರ್ಧಕ್ಷಯೋಭವೇತ್ ॥**
**ಸಂಕೀರ್ತ್ಯಮಾಸಪಕ್ಷಾದೀನ್ ನಿಮಿತ್ತಾನಿ ತಥೈವ ಚ।**
**ಕರ್ಮಕರಿಷ್ಯೇಽಹಮಿತಿ ಸಂಕಲ್ಪಮಾಚರೇತ್ ॥**

–ಸಂಸ್ಕಾರಭಾಸ್ಕರ ಪುಟ–3

## 7. ಆಸನಗಳ ಬಗ್ಗೆ ವಿವರಣೆ :

ಜಪ–ಪೂಜೆ–ಧ್ಯಾನಾದಿಗಳಲ್ಲಿ ಆಸನವು ಪ್ರಮುಖ ಪಾತ್ರವನ್ನು ವಹಿಸಿದೆ.

ಆಸನವು ಭಗವಂತನಲ್ಲೇ ಮನಸ್ಸನ್ನು ಕೇಂದ್ರೀಕರಿಸಲು ಅನುವು ಮಾಡಿಕೊಡುತ್ತದೆ.

**"ಆಸೀನಃ ಸಂಭವಾತ್"** (4–17) ಎಂಬ ಬ್ರಹ್ಮಸೂತ್ರದಲ್ಲಿ ಆಸೀನರಾಗಿ, ದೇಹಾದಿಗಳನ್ನು ವಕ್ರವಾಗಿರಿಸದೆ, ಋಜುಕಾಯ ಶಿರೋಗ್ರೀವನಾಗಿ ಜಪಾದಿಗಳನ್ನು ಮಾಡಿದರೇ ಧ್ಯಾನಾದಿಗಳ ಫಲವು ಲಭಿಸುವುದೆಂದು ತಿಳಿಸಲಾಗಿದೆ.

ಧ್ಯಾನದ ಸಮಯದಲ್ಲಿ ನಿಂತು ಧ್ಯಾನಿಸಿದರೆ ದೇಹಾಲಸ್ಯವು ಮಲಗಿದರೆ ನಿದ್ರೆಯು ಆವರಿಸಿ ಧ್ಯಾನವೇ ಲೋಪವಾದೀತು. ಆದ್ದರಿಂದ ಆಸನವು ಬೇಕು.

**ಸ್ಥಿತಂ ಶ್ರಮಃ, ತಲ್ಪಾದೌ ದಂಡಾದೌ ಪತಿತಂ ತು ನಿದ್ರಾ ಅಭಿಭವತಿ ಇತಿ ಉಪವಿಷ್ಟಸ್ಯೈವ ಜ್ಞಾನಾಭ್ಯಾಸಾಧಿಕಾರಃ ॥** – ಪದಾರ್ಥ ದರ್ಶ

ಶರೀರ ಚಲಿಸಿದರೆ ಮನಸ್ಸೂ ಕೂಡ ಚಲಿಸಿ ಚಂಚಲತೆಯುಂಟಾಗುತ್ತದೆ. ಆದ್ದರಿಂದ ಕುಳಿತೇ ಪೂಜಾದಿಗಳನ್ನು ಮಾಡಬೇಕು.

**ಅಚಲಃ ಚೇಚ್ಛರೀರಸ್ಯ ಸ್ಯಾನ್ ಮನಸಶ್ಚಾಪ್ಯ ಚಾಲನಂ।**
**ಚಲನೇ ತು ಶರೀರಸ್ಯ ಚಂಚಲಂ ತು ಮನೋ ಭವೇತ್ ॥**

- **ಆಸನಗಳ ವಿಧಗಳು :**

ಆಸನಗಳು ವೀರ–ಪದ್ಮ–ಸ್ವಸ್ತಿಕ ಎಂದು ಮೂರು ವಿಧ. – ಸನ್ಯಾಸ ಪದ್ಧತಿ

**ಪದ್ಮಸ್ವಸ್ತಿಕ ವೀರಾಹ್ವಾಃ ಆಸನೇಷು ಪ್ರಧಾನಕಾಃ।**
**ತೆಷಾಮೇಕತರಂ ಭಾವ್ಯಂ ಮನೋ ಯತ್ರ ಪ್ರಸೀದತಿ ॥**

ಎರಡೂ ಪಾದಗಳನ್ನು ಮೇಲ್ಮುಖವಾಗಿರಿಸಿದರೆ ಪದ್ಮಾಸನ. ಇದರಿಂದ ಸರ್ವವ್ಯಾಧಿ ಪರಿಹಾರವು.

**ಉತ್ತಾನೌ ಚರಣೌ ಕೃತ್ವಾ ಊರು ಸಂಸ್ಥೌ ಪ್ರಯತ್ನತಃ।**
**ಇದಂ ಪದ್ಮಾಸನಂ ಪ್ರೋಕ್ತಂ ಸರ್ವವ್ಯಾಧಿವಿನಾಶನಮ್ ॥**

ಎರಡೂ ಪಾದಗಳನ್ನು ತೊಡೆಯ ಕೆಳಗೆ ಇಟ್ಟಾಗ ಸ್ವಸ್ತಿಕ. – ಯೋಗಶಾಸ್ತ್ರ

**ಜಾನೂರ್ವೋಃ ಅಂತರೇ ಸಮ್ಯಕ್ ಕೃತ್ವಾ ಪಾದತಲೇ ಶುಭೇ।**
**ಋಜುಕಾಯಃ ಸಮಾಸೀನಃ ಸ್ವಸ್ತಿಕಾಸನಮುಚ್ಯತೇ ॥**

ಎಡಪಾದ ಬಲತೊಡೆಯ ಮೇಲೆ, ಬಲಪಾದ ಎಡತೊಡೆಯ ಮೇಲಿಟ್ಟರೆ ವೀರಾಸನ. – ಯೋಗಶಾಸ್ತ್ರ

**ದಕ್ಷಿಣೋರೋರಧಃ ಪಾದಂ ವಾಮಂ ವಿನ್ಯಸ್ಯ ದಕ್ಷಿಣಂ।**
**ಪಾದಂ ವಾಮೋರುಕಂ ಕೃತ್ವಾ ವೀರಾಸನಮಿಹೋಚ್ಯತೇ ॥**

ಆಸನಗಳನ್ನು ಮಂತ್ರಸ್ಮರಣ ಪೂರ್ವಕವಾಗಿ ರಚಿಸಬೇಕು. –ತಂತ್ರಸಾರ 4–144

**ಉರ್ವೋರಧಃ ಪದೋರೂಧ್ವ ವಿಭಾಗೇನೇತಿ ಚ ತ್ರಿಧಾ।**
**ಆಸನತ್ರಯಮುದ್ದಿಷ್ಟಂ ಮಂತ್ರಸ್ಮರಣ ಪೂರ್ವಕಮ್ ॥**

- **ಬಿದಿರಿನ ಆಸನ, ಕಲ್ಲು, ಭೂಮಿ, ಮಣೆಗಳಲ್ಲಿ ಕೂಡಬಾರದು :**

**ವಂಶಾಸನೇ ದರಿದ್ರಃ ಸ್ಯಾತ್ ಪಾಷಾಣೇ ವ್ಯಾಧಿಸಂಭವಃ।**
**ಧರಣ್ಯಾಂ ದುಃಖಮಾಪ್ನೋತಿ ದೌರ್ಭಾಗ್ಯಂ ದಾರುಕಾಸನೇ ॥**

ದಾರುಕಾಸನದಲ್ಲಿ (ಮಣೆ) ಬೆಳ್ಳಿಯ ಸಂಬಂಧವಿದ್ದರೆ ಸೌಭಾಗ್ಯ. – ಯೋಗಶಾಸ್ತ್ರ.

ಆದ್ದರಿಂದಲೇ ಶ್ರೀಗಳವರು ಕೂಡುವ ಮಣೆಯಲ್ಲಿ ನಾಲ್ಕು ದಿಕ್ಕಿಗೂ ಬೆಳ್ಳಿಯ ಪುಷ್ಪಗಳಿರುತ್ತವೆ.

**ರಜತೇನ ಸುವರ್ಣೇನ ಯುಕ್ತಂ ಚೇತ್ ದಾರುಕಾಸನಂ।**
**ಸೌಭಾಗ್ಯಂ ಪ್ರಾಪ್ಯತೇ ತೇನ ನಾತ್ರಕಾರ್ಯಾ ವಿಚಾರಣಾ ॥**

- **ಕೃಷ್ಣಾಜಿನ, ದುರ್ಭಾಸನ, ವಸ್ತ್ರಾಸನಗಳು ಶ್ರೇಷ್ಠ :**

**ಕುಶೇ ಕೃಷ್ಣಾಜಿನೇ ವಾಽಪಿ ಸುಖಾಸೀನಃ ಸುಖಾಸನೇ।**
**ಕೃಷ್ಣಾಜಿನೇ ಜ್ಞಾನಸಿದ್ಧಿಃ ಸ್ಯಾತ್ ಸರ್ವಸಿದ್ಧಿಃ ಕುಶಾಸನೇ ॥**

– ಪರಮಪುರುಷ ಸಂಹಿತೆ

ಆಸನವು ತುಂಬಾ ಎತ್ತರದ್ದಾಗಿಯೂ, ತುಂಬಾ ತಗ್ಗಾಗಿಯೂ ಇರಬಾರದು. – ಗೀತಾ 6/11

**ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಂ।**
**ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ ॥**

ಮೊದಲು ದರ್ಭೆ, ಅದರ ಮೇಲೆ ಕೃಷ್ಣಾಜಿನ, ಅದರ ಮೇಲೆ ವಸ್ತ್ರ ಹಾಸಿ ಕುಳಿತು ದೇಹವನ್ನು, ಕುತ್ತಿಗೆಯನ್ನು, ತಲೆಯನ್ನು ನೇರವಾಗಿರಿಸಿಕೊಂಡು ಪೂಜೆಯನ್ನು ಪ್ರಾರಂಭಿಸಬೇಕು.

### ೮. ತತ್ವನ್ಯಾಸ-ಮಾತೃಕಾನ್ಯಾಸಗಳ ವಿವರಣೆ :

ನ್ಯಾಸವೆಂದರೇ ಇಡುವುದು ಎಂದರ್ಥ ಪ್ರಕೃತದಲ್ಲಿ ಸಮಸ್ತ ವಸ್ತುಗಳೂ ಪೃಥಿವ್ಯಾದಿ ತತ್ವಗಳಿಗೆ ಅಭಿಮಾನಿ ದೇವತೆಗಳು ಜೀವನ ಶರೀರದಲ್ಲಿ ಅವರವರ ಸ್ಥಾನಗಳಲ್ಲಿದ್ದು ಸಮಸ್ತ ಕಾರ್ಯಗಳಲ್ಲೂ ಜೀವನಿಗೆ ಪ್ರೇರಕರಾಗಿರುತ್ತಾರೆ. ತತ್ವಾಭಿಮಾನಿಗಳು ಪರತಂತ್ರರಾಗಿದ್ದು ಭಗವಂತನೇ ಅಂತರ್ಯಾಮಿಯಾಗಿದ್ದುಕೊಂಡು ಮುಖ್ಯಪ್ರೇರಕನಾಗಿರುವನು ಎಂದು ತಿಳಿದು ಎಲ್ಲವೂ ಭಗವದಧೀನವೆಂದು ಚಿಂತಿಸುವುದೇ ತತ್ವನ್ಯಾಸ. – ಮಹಾ ತಾ.ನಿ. 11/19/1 ರಲ್ಲಿ

**ಇದಂ ಜ್ಞಾನಂ ಹರೇಃ ಪೂಜಾ ಹರೇರೇವೋದಿತಂ ಸದಾ।**
**ಹರ್ಯಧೀನಂ ಚ ಸರ್ವತ್ರೇತ್ಯೇವಂ ನ್ಯಾಸೋ ಹರೌ ಸ್ಮೃತಃ ॥**

ಮಾತೃಕಾನ್ಯಾಸವೆಂದರೆ ಅಕಾರಾದಿ ಕ್ಷಕಾರಪರ್ಯಂತವಾದ ಅಕ್ಷರಗಳಿಗೆ ಅಭಿಮಾನಿಗಳಾದ ಭಗವದ್ರೂಪಗಳು ಆಯಾಯ ಸ್ಥಾನಗಳಲ್ಲಿರುತ್ತವೆ

ಎಂದು ತಿಳಿದು, ಆಯಾಯ ಸ್ಥಳಗಳಲ್ಲಿರುವ ಭಗವಂತನ ಧ್ಯಾನ ಮಾಡುವುದೇ ಆಗಿದೆ. ಎಂದರೆ ಮಾತೃಕೆಗಳ ಅಭಿಮಾನಿ ಭಗವದ್ರೂಪಗಳು ಶರೀರದ ವಿವಿಧ ಅಂಗಗಳಲ್ಲಿ ನೆಲೆಸಿವೆ ಎಂದು ಚಿಂತಿಸುವುದು ಮಾತೃಕಾನ್ಯಾಸವು.

- **ತತ್ತ್ವನ್ಯಾಸ– ಮಾತೃಕಾನ್ಯಾಸಗಳು ಸರ್ವಮಂತ್ರೋಪಕಾರಕ :**

ಪ್ರತಿಮೆಗಳಲ್ಲಿ ಮಂತ್ರನ್ಯಾಸಗಳನ್ನು ಮಾಡಿದರೆ ನಮ್ಮಲ್ಲಿ ಸನ್ನಿಧಾನ–ವುಂಟಾಗುವಂತೆ ಪ್ರತಿಮೆಯಲ್ಲಿಯೂ ಸನ್ನಿಧಾನ ಹೆಚ್ಚುತ್ತದೆ.

**ಯಥಾತ್ಮನಿ ತಥಾ ದೇವೇ ನ್ಯಾಸಕರ್ಮ ಸಮಾಚರೇತ್ ।** – ವಾಸಿಷ್ಠಸ್ಮೃತಿ

ಹಸ್ತನ್ಯಾಸಗಳನ್ನು ಬಿಟ್ಟು ಪ್ರತಿಮೆಗಳಲ್ಲಿ ಮಂತ್ರವನ್ನು ಹೇಳುತ್ತಾ ತುಳಸೀದಳದಿಂದ ನ್ಯಾಸ ಮಾಡಬೇಕು.

**ಹಸ್ತಾನ್ಯಾಸಾದ್ ಋತೇ ದೇವೇ ಮಂತ್ರನ್ಯಾಸಂ ಸಮಾಚರೇತ್ ।**

– ಪರಮಪುರುಷ ಸಂಹಿತೆ

**'ಓಂ ನಮೋ ನಾರಾಯಣಾಯ'** ಎಂಬ ಮೂಲ ಮಂತ್ರದಿಂದಲಾದರೂ ನ್ಯಾಸ ಮಾಡಬೇಕು. ಮೂರ್ತಿಗಳಲ್ಲಿರುವ ಕಣ್ಣು–ಕಿವಿ, ಮೊದಲಾದ ಇಂದ್ರಿಯಗಳಲ್ಲಿ ತತ್ತ್ವಾಭಿಮಾನಿ ದೇವತೆಗಳನ್ನು ಚಿಂತಿಸುವುದಕ್ಕೆ 'ತತ್ತ್ವನ್ಯಾಸ'ವೆಂದು ಹೆಸರು. **'ಓಂ ನಮೋ ನಾರಾಯಣಾಯ'** ಎಂದು ಎಂಟು ಅಕ್ಷರಗಳಿಂದ ಎಂಟು ಸ್ಥಳಗಳಲ್ಲಿ ತುಳಸಿಯಿಂದ ವಿಶ್ವಾದಿ ಎಂಟು ಮೂರ್ತಿಗಳನ್ನು ನ್ಯಾಸ ಮಾಡಿದರೆ ಭಗವಂತನ ಪೂರ್ಣಸಾನ್ನಿಧ್ಯ–ವುಂಟಾಗುತ್ತದೆ.

ಇವುಗಳಲ್ಲಿ ತಲೆಯಿಂದಾರಂಭಿಸಿ ಕೆಳಕ್ಕೆ ನ್ಯಾಸ ಮಾಡಿದರೆ ಸೃಷ್ಟಿನ್ಯಾಸವು ಪಾದದಿಂದ ತಲೆ ಪರ್ಯಂತ ನ್ಯಾಸ ಮಾಡಿದರೆ ಲಯನ್ಯಾಸ, ಮೊದಲಿನ ನಾಲ್ಕು ಭಾಗ ಮೇಲಿಂದ ಕೆಳಗೆ, ಕಡೆಯ ನಾಲ್ಕು ಭಾಗ ಕೆಳಗಿನಿಂದ ಮೇಲಕ್ಕೆ ನ್ಯಾಸ ಮಾಡಿದರೆ ಸ್ಥಿತಿನ್ಯಾಸವಾಗುತ್ತದೆ.

ತನ್ನಲ್ಲಿ ನ್ಯಾಸ ಮಾಡಿಕೊಂಡಂತೆ ಪ್ರತಿಮೆಗಳಲ್ಲೂ ನ್ಯಾಸ ಮಾಡಬೇಕು. ಇದರಿಂದ ಭಗವಂತನ ಸನ್ನಿಧಾನ ಹೆಚ್ಚುತ್ತದೆ.

**ಪ್ರತಿಮಾಯಾಮಾತ್ಮನಿ ಚ ನ್ಯಾಸೋಽಯಂ ಸನ್ನಿಧಾನಕೃತ್ ।**

–ತಂತ್ರಸಾರ 4/123

**ಯಥಾತ್ಮನಿ ತಥಾ ದೇವೇ ನ್ಯಾಸಕರ್ಮ ಸಮಾಚರೇತ್ ॥**

- **ಪ್ರತಿಮೆಯಲ್ಲಿ ನ್ಯಾಸ :**

  ನಮ್ಮ ದೇಹದಲ್ಲಿ ಹೇಗೆ ತತ್ವಗಳಿಗೆ ಅಭಿಮಾನಿಗಳಿರುವರೋ ಹಾಗೆಯೇ ಪ್ರತಿಮೆಯಲ್ಲಿಯೂ ತತ್ವಾಭಿಮಾನಿಗಳನ್ನು ಗುರುತಿಸಿ ಭಗವಂತನ ಅಧೀನರೆಂದು ಚಿಂತಿಸುವುದೇ 'ತತ್ವನ್ಯಾಸ'. ಹಾಗೆಯೇ ನಮ್ಮ ದೇಹವು ಪ್ರಾಣನಿಂದ ಹೇಗೆ ನಿಂತಿದೆಯೋ ಹಾಗೆ ಪ್ರತಿಮೆಯಲ್ಲೂ ಪ್ರಾಣಾಧಾರ ಶಕ್ತಿಯನ್ನು ಚಿಂತಿಸುವುದೇ ಮಾತೃಕಾನ್ಯಾಸ.

- **ಅಷ್ಟಾಕ್ಷರ ನ್ಯಾಸ :**

  ನಾರಾಯಣಾಷ್ಟಾಕ್ಷರದ ಎಂಟು ಅಕ್ಷರಗಳನ್ನು ಪ್ರತಿಮೆಯ ಅಂಗಗಳಲ್ಲಿ ನಿರ್ದಿಷ್ಟ ಸ್ಥಾನಗಳಲ್ಲಿ ಚಿಂತಿಸಿದರೆ ಅಷ್ಟಾಕ್ಷರನ್ಯಾಸವಾಗುತ್ತದೆ.

  ನ್ಯಾಸವು ಸೃಷ್ಟಿ–ಸ್ಥಿತಿ–ಸಂಹಾರವೆಂದು ಮೂರು ವಿಧ. ಬ್ರಹ್ಮಚಾರಿಗೆ ಸೃಷ್ಟಿ ನ್ಯಾಸವು, ಗೃಹಸ್ಥನಿಗೆ ಸ್ಥಿತಿ ನ್ಯಾಸವು, ಯತಿಗಳಿಗೆ ಲಯ ನ್ಯಾಸವು ವಿಹಿತವಾಗಿದೆ.

  ವರ್ಣ ನ್ಯಾಸ ಮಾಡುವಾಗ ವಿಶ್ವಾದಿ ಎಂಟು ರೂಪಗಳನ್ನು ಪಠಿಸುತ್ತಾ ಹೇಳಬೇಕು.

- **ಪ್ರತಿಮೆಗಳಲ್ಲಿ ಮೊದಲು ಮಾತೃಕಾನ್ಯಾಸ ನಂತರ ತತ್ವನ್ಯಾಸ :**

  **ವೈಷ್ಣವೇಷು ಚ ಮಂತ್ರೇಷು ತತ್ವಾನಾಂ ನ್ಯಸನಂ ಪುರಾ ।**
  **ತತಸ್ತು ಮಾತೃಕಾನ್ಯಾಸಂ ಕುರ್ಯಾದ್ ಅನ್ಯತ್ರ ಚಾನ್ಯಥಾ ॥**

**ಅಂಗನ್ಯಾಸ :**

"ಅಂಗೇಷು ನ್ಯಾಸ" ಎಂಬಂತೆ ನಮ್ಮ ಅಂಗಗಳಲ್ಲಿ ಹಾಗೂ ಪ್ರತಿಮೆಯ ಅಂಗಗಳಲ್ಲಿ ಮಂತ್ರೋಚ್ಚಾರಣೆಯ ಮೂಲಕ ಹಸ್ತದಿಂದ ಸ್ಪರ್ಶಿಸುವುದು. ಯಾವುದೇ ಮಂತ್ರವನ್ನು ಜಪಿಸುವ ಆದಿ ಹಾಗೂ ಅಂತ್ಯದಲ್ಲಿ ಅಂಗನ್ಯಾಸವನ್ನು ಆಚರಿಸಬೇಕೆಂಬ ವಿಧಿಯಿದೆ. ಅಂಗನ್ಯಾಸವನ್ನು ಅರ್ಥ

ತಿಳಿದು ಆಚರಿಸಿದರೆ ಫಲಾಧಿಕ್ಯವಿರುತ್ತದೆ. ಉದಾ.: ಮೂಲಮಂತ್ರದ ಅಂಗನ್ಯಾಸದಲ್ಲಿ ಬರುವ ಕೃದ್ಧೋಲ್ಕ, ಮಹೋಲ್ಕ, ವೀರೋಲ್ಕ, ದ್ಯೂಲ್ಕ, ಸಹಸ್ರೋಲ್ಕ ಇವುಗಳ ಅರ್ಥವಾದರೂ ಹೀಗಿದೆ.

**ಕೃದ್ಧೋಲ್ಕ :**

ಕೃದ್ಧ + ಉಲ್ಕ ಎಂದು ಬಿಡಿಸಿದಾಗ ಶತ್ರುಗಳ ಮೇಲೆ ಕೋಪಗೊಂಡು ಉಲ್ಕೆಯಂತೆ ಅತ್ಯಂತ ಕೊರೈಸುವ ಪ್ರಕಾಶವುಳ್ಳ ನರಸಿಂಹನೇ ಕೃದ್ಧೋಲ್ಕ ಇವನಿಗೆ ಈ ನನ್ನ ಹೃದಯವು ಸಮರ್ಪಿತವಾಗಿದೆ.

**ಮಹೋಲ್ಕ :**

ನಮ್ಮ ಶಿರಸ್ಸಿನಲ್ಲಿದ್ದು ತುರೀಯ ನಾಮಕನಾದ ಹಾಗೂ ನಮಗೆ ಜ್ಞಾನಜ್ಯೋತಿಯನ್ನು ನೀಡುವ ಮಹಾ ಉಲ್ಕೆಯಂತೆ ಪ್ರಕಾಶಮಾನನಾದ ಭಗವಂತನಿಗೆ ಈ ನನ್ನ ಶಿರಸ್ಸು ಒಪ್ಪಿಸುವೆ.

**ವೀರೋಲ್ಕ :**

ವಿ = ಪಕ್ಷೀ, ಈರ = ವಾಯುದೇವ ಇವರಿಗೂ ಜ್ಞಾನಪ್ರದನಾದ ಭಗವಂತನು ನನ್ನ ಶಿಖೆಯಲ್ಲಿ ಇದ್ದು, ನನ್ನ ದೇಹ ಪಾಪಗಳನ್ನು ಸುಡುವ ಭಗವಂತನಿಗೆ ಈ ದೇಹವನ್ನು ಒಪ್ಪಿಸುವೆ.

**ದ್ಯೂಲ್ಕ :**

ಆಕಾಶದಲ್ಲಿ ಬೆಳಗುತ್ತಿರುವ ಸೂರ್ಯಾದಿಗಳಿಗೂ ಬೆಳಕನ್ನು ನೀಡುವ (ಯಸ್ಯ ಭಾಸಾ ಸರ್ವಮಿದಂ ವಿಭಾತ್ರಾ) ಹಾಗೂ ಹುಂಕಾರದಿಂದಲೇ ಶತ್ರುಗಳನ್ನು ಓಡಿಸುವ, ಭಗವಂತನು ತನ್ನ ಕವಚಮುದ್ರೆಯಲ್ಲಿ ಸನ್ನಿಹಿತನಾಗಿ ರಕ್ಷಿಸಲಿ.

**ಸಹಸ್ರೋಲ್ಕ :**

ಸರ್ವತ್ರ ಸಾವಿರಾರು ಸೂರ್ಯರಂತೆ ಕಾಂತಿಯುಳ್ಳ ಆಯುಧಗಳಿಂದ ಶೋಭಿಸುವ ಭಗವಂತನು ತನ್ನ ಅಸ್ತ್ರಮುದ್ರೆಯಲ್ಲಿ ಸನ್ನಿಹಿತನಾಗಿ ಶತ್ರುಗಳನ್ನು ಓಡಿಸಲಿ.

**ನಮಃ =** ಎಂದರೆ ನ ಮಮ ಎಂಬುದರ ಸಂಕ್ಷಿಪ್ತ ರೂಪವು. ಈ ದೇಹದ ಈ ಭಾಗವು ಅವನದು ನನ್ನದ್ದಲ್ಲ ಎಂದರ್ಥ.

**ಸ್ವಾಹಾ =** ಈ ದೇಹವೆಂಬ ಹವಿಸ್ಸನ್ನು ನೀಡುತ್ತಿರುವೆನು ಎಂದರ್ಥ.

**ಹುಮ್ =** ಇಷ್ಟಾರ್ಥವನ್ನು ನೀಡುವ ಹಾಗೂ ಅನಿಷ್ಟ ನಿವಾರಣೆ ಮಾಡಲಿ ಎಂದರ್ಥ.

- **ನ್ಯಾಸದಲ್ಲಿ ಅಂಗುಲಿಗಳು :**

ಶಿರಸ್ಸಿನ ನ್ಯಾಸವನ್ನು ಕೇವಲ ಮಧ್ಯ ಬೆರಳಿನಿಂದ ಮಾಡಬೇಕು. ಕಣ್ಣನ್ನು ಮುಟ್ಟುವಾಗ ತರ್ಜನಿ ಹಾಗೂ ಮಧ್ಯಮ ಬೆರಳಿನಿಂದಲೂ, ಮುಖನ್ಯಾಸದಲ್ಲಿ ಹೆಬ್ಬೆರಳು ಹಾಗೂ ಅನಾಮಿಕಾ ಬೆರಳಿನಿಂದಲೂ, ಹೃದಯ ಸ್ಪರ್ಶಿಸುವಾಗ ಜ್ಞಾನಮುದ್ರೆಯಿಂದಲೂ, ನಾಭಿಯನ್ನು ಮುಟ್ಟುವಾಗ ಅಂಗುಷ್ಠ ಹಾಗೂ ಕಿರು ಬೆರಳಿನಿಂದ ಸ್ಪರ್ಶಿಸುವುದು, ಗುಹ್ಯೇಂದ್ರಿಯ ಸ್ಪರ್ಶಿಸುವಾಗ ಅಂಗುಷ್ಠ ಹೊರತುಪಡಿಸಿ ಉಳಿದ ನಾಲ್ಕು ಬೆರಳುಗಳು. ಜಾನು ಹಾಗೂ ಪಾದಗಳನ್ನು ಸ್ಪರ್ಶಿಸುವಾಗ ಐದೂ ಬೆರಳುಗಳನ್ನು ಉಪಯೋಗಿಸಬೇಕು.

**ತತ್ರಾಂಗುಲೀಭಿರ್ನ್ಯಾಸಃ ಸ್ಯಾತ್ ಶಿರಸ್ಯೇಕೇವ ಮಧ್ಯಮಾ ।**
**ತರ್ಜನೀ ಮಧ್ಯಮಾಭ್ಯಾಂ ತು ಚಕ್ಷುಷೋರ್ನ್ಯಾಸ ಇಷ್ಯತೇ ॥**
**ಅಂಗುಷ್ಠಾನಾಮಿಕಾಭ್ಯಾಂ ತು ಮುಖೇ ನ್ಯಾಸಃ ಪ್ರಕೀರ್ತಿತಃ ।**
**ಹೃದಯೇ ಜ್ಞಾನಮುದ್ರಾ ಸ್ಯಾದಂಗುಷ್ಠಶ್ಚ ಕನಿಷ್ಠಿಕಾ ॥**
**ನಾಭೌ ಪ್ರಕೀರ್ತಿತಾ, ಗುಹ್ಯೇ ಅನಂಗುಷ್ಠಾಃ ಪ್ರಕೀರ್ತಿತಾಃ ।**
**ಸರ್ವಾ ಜಾನೌ ಚ ಪಾದೇ ಚ ಪಂಚಾಪಿ ಪರಿಕೀರ್ತಿತಾಃ ॥**

– ಮಂತ್ರ ತಂತ್ರಪ್ರಕಾಶ

## ೯. ಕಲಶಪೂಜೆಯ ಬಗ್ಗೆ ವಿವರಣೆ :

ಪೂಜೆಯಲ್ಲಿ ಕಲಶ ಪೂಜೆಯು ಅತಿ ಮಹತ್ವ ಪಾತ್ರವನ್ನು ವಹಿಸಿದೆ ಯಾವುದೇ ಪೂಜೆ, ವ್ರತ, ಸಂಸ್ಕಾರ ಇವುಗಳಿಗೆ ನೀರು ಬೇಕೇ ಬೇಕು. ಆದರೆ ನೀರು ಶುದ್ಧವಾಗಿದ್ದರೆ ಮಾತ್ರ ಪೂಜಾದಿಗಳು ಸಫಲವಾಗುತ್ತವೆ. ನೀರನ್ನು ಶುದ್ಧಿ ಮಾಡುವ ಕ್ರಮವನ್ನೇ "ಕಲಶಪೂಜೆ"ಯು ತಿಳಿಸುತ್ತದೆ.

**ಕಲಶ ಎಂದರೇನು?**

"ಕಂ" ಎಂದರೆ ನೀರು, "ಲಸ" ಎಂದರೆ ಪ್ರಕಾಶಿಸುವುದು. ನೀರಿನಲ್ಲಿರುವ ವರುಣ ಮೊದಲಾದ ದೇವತೆಗಳನ್ನು, ತದಂತರ್ಗತ ಭಗವಂತನಿಗೂ ಆವಾಹನಾದಿಗಳಿಂದ ಪೂಜಿಸಿದಾಗ ಜಲ ಶುದ್ಧಿಯುಂಟಾಗಿ ಪೂಜಾರ್ಹವಾಗುತ್ತದೆ. ನೀರಿನಲ್ಲಿರುವ ದೇವತೆಗಳನ್ನು ಪೂಜಾರ್ಹ-ವಾಗುವಂತೆ ಬೇಡುವುದೇ ಕಲಶಪೂಜೆ.

- **ಕಲಶದ ಹುಟ್ಟು :**

ದೇವತೆಗಳು ಹಾಗೂ ದೈತ್ಯರು ಸೇರಿ ಸಮುದ್ರ ಮಥನ ಮಾಡುತ್ತಿರುವಾಗ ಕಲಶವು ಜನಿಸಿತು. ಆ ಕಲಶವನ್ನು ವಿಷ್ಣುವೇ ಮೊದಲು ಧರಿಸಿದನು.

**ದೇವದಾನವ ಸಂವಾದೇ ಮಥ್ಯಮಾನಾತ್ ಮಹೋದಧೇಃ।**

**ಉತ್ಪನ್ನೋಽಪಿ ತದಾ ಕುಂಭ ವಿಷ್ಣುನಾ ವಿಧೃತಃ ಸ್ವಯಂ ॥**

- **ಕಲಶದಲ್ಲಿ ತಾಮ್ರ ಕಲಶ ಶ್ರೇಷ್ಠ :**

ಕಲಶಕ್ಕಾಗಿ ಉಪಯೋಗಿಸುವ ಲೋಹವು ತಾಮ್ರವಾಗಿದ್ದರೆ ಶ್ರೇಷ್ಠವಾಗಿದೆ. ರಜತಕಲಶಗಳನ್ನು ಮಠಗಳಲ್ಲಿ ಉಪಯೋಗಿಸುವರು. ಅನುಕೂಲ-ವಿಲ್ಲದ್ದವರು ಹಿತ್ತಾಳೆಯ ಕಲಶವನ್ನೂ ಉಪಯೋಗಿಸುವರು. ಕಲಶವು ಯಾವುದೇ ಆದರೂ ಕಲಶ ಸ್ವರೂಪ ಮಾತ್ರ ಬಾಯಿ ಹಾಗೂ ಬುಡವು ಚಿಕ್ಕದಾಗಿದ್ದು ಮಧ್ಯಭಾಗ ದಪ್ಪವಾಗಿರಬೇಕು. ಈ ಕಂಠದಲ್ಲಿ ರುದ್ರದೇವನಿರುವನು.

ಧಾನ್ಯರಾಶಿಯ ಮಧ್ಯೆ ಪಂಚ ಫಲಗಳನ್ನಿಟ್ಟು, ಕಲಶದ ಮುಖಕ್ಕೆ ಪಂಚಮಾವಿನ ಚಿಗುರು ಇಟ್ಟು, ನಾಣ್ಯ ಹಾಕಿ, ತೆಂಗಿನಕಾಯಿ-ಯನ್ನಿಡುವುದು ಪದ್ಧತಿ. ಆದರೆ ನಿತ್ಯ ಪೂಜೆಯಲ್ಲಿ ಇದರ ಸಂಪ್ರದಾಯವಿಲ್ಲ.

- **ಕಲಶದ ಸಂಖ್ಯೆ :**

ಪದ್ಯಮಾಲೆಯಲ್ಲಿ ಜಯತೀರ್ಥರು ಏಳು ಕಲಶಗನ್ನಿಡಬೇಕೆಂದು ತಿಳಿಸಿದ್ದಾರೆ. ಅಸಾಧ್ಯವಾದರೆ ಐದು, ಮೂರು, ಎರಡು ಅದೂ ಸಾಧ್ಯವಿಲ್ಲದಿರುವಾಗ ಒಂದು 'ಕಲಶ'ವಾದರೂ ಇಡಲೇಬೇಕು.

**ಸಂಭವೇ ಸಪ್ತಕಲಶಾಃ ಪಂಚ ವಾऽಥ ತ್ರಯೋ ದ್ವಯಂ।**
**ಅಸಂಭವೇ ಚ ಸರ್ವೇಷಾಂ ಭಿನ್ನಪಾತ್ರಾಣಿ ಕಾರಯೇತ್ ॥**

**ಏಳು ಕಲಶಗಳು :**

1) ಬೃಹತ್ ಕಲಶಂ,

2) ಪೂರ್ಣ ಕುಂಭಂ,

3) ನೈವೇದ್ಯ ಪ್ರೋಕ್ಷಣಾರ್ಥಂ ಕಲಶಂ,

4) ಪಂಚಪಾತ್ರ ಪೂರಕಂ,

5) ಪಾನೀಯಾರ್ಥಂ,

6) ಗಂಧೋದಕಾರ್ಥಂ,

7) ಹಸ್ತಪ್ರಕ್ಷಾಲನಾರ್ಥಂ.

ಅಥವಾ ಒಂದು ಕಲಶವಾದರೂ ಸರಿಯೇ ಅದಕ್ಕೆ ಕಲಶಪೂಜೆ ಮಾಡಿ ಅದರಿಂದ ಬೇರೆ ಬೇರೆ ಕಾರ್ಯಗಳಿಗಾಗಿ ಪ್ರತ್ಯೇಕ ತುಂಬಿಸಿಟ್ಟು ಪೂಜಿಸ-ಬಹುದು.

- **ಕುಂಭ ಹಾಗೂ ಬೃಹತ್ಕಲಶ :**

**ಕಂ ಉಂಭತೀತಿ ಕುಂಭಃ** ಎಂಬ ನಿಷ್ಪತ್ತಿಯಂತೆ ನೀರನ್ನು ಹೊಂದಿರುವುದು ಎಂಬರ್ಥವಾದರೆ, ನೀರಿನಿಂದ ಶೋಭಿಸುವುದು ಕಲಶ ಶಬ್ದದ ಅರ್ಥ (ಕೇನ ಜಲೇನ ಲಸತೀತಿ) ಕಲಶವೆಂದರೆ ಭಗವಂತನ ಅಜಾದಿ ರೂಪಗಳಿಂದ ಕೂಡಿರುವುದು ಎಂದು ವಿಶಿಷ್ಟಾರ್ಥ.

ಬೃಹತ್ಕಲಶಕ್ಕೆ ಸ್ನಾನೀಯ ಕಲಶವೆಂದು ನಾಮಾಂತರ. ಬೃಹತ್ಕಲಶವೆಂದರೆ ದೊಡ್ಡ ಕಲಶ ಎಂದರ್ಥ. ಈ ಕಲಶದಲ್ಲಿ ಸೂರ್ಯಾಂತರ್ಗತ ಲಕ್ಷ್ಮೀನಾರಾಯಣನನ್ನು ಹಾಗೆಯೇ ಅಜಾದಿ ನೂರು ಕಲಶ ದೇವತೆಗಳಿಂದ ಸಹಿತ ಒಟ್ಟು ನೂರೊಂದು ದೇವತೆಗಳನ್ನು ಆವಾಹಿಸಬೇಕು.

ಈ ಕಲಶದಲ್ಲಿ ಸಮುದ್ರಾಭಿಮಾನಿಗಳು, ನದ-ನದ್ಯಾಭಿಮಾನಿಗಳು,

ತೀರ್ಥಕ್ಷೇತ್ರಾದ್ಯಭಿಮಾನಿಗಳನ್ನು ಹಾಗೂ ಶ್ರೀ ಲಕ್ಷ್ಮೀನಾರಾಯಣನನ್ನು ಆವಾಹಿಸಬೇಕು.

ಈ ಬೃಹತ್ಕಲಶ ಅಥವಾ ಸ್ನಾನೀಯ ಕಲಶದಲ್ಲಿ ಅಜಾದಿ ನೂರು ರೂಪಗಳನ್ನು ಮಾತ್ರ ಆವಾಹಿಸಬೇಕು.

**ನೂರು ಮೂರ್ತಿಗಳು :**

| | |
|---|---|
| ಅಜಾದಿ ಐವತ್ತು ಮೂರ್ತಿಗಳು | 50 |
| ಕೇಶವಾದಿ ಇಪ್ಪತ್ತಾನಾಲ್ಕು | 24 |
| ಆತ್ಮಾದಿ ಚತುರ್ಮೂರ್ತಿಗಳು | 04 |
| ವಾಸುದೇವಾದಿ ನಾಲ್ಕು ಮೂರ್ತಿಗಳು | 04 |
| ವಿಶ್ವಾದಿ ಚತುರ್ಮೂರ್ತಿಗಳು | 04 |
| ಮತ್ಸ್ಯಾದಿ ಹತ್ತು ಮೂರ್ತಿಗಳು | 10 |
| ವೇದವ್ಯಾಸ–ದತ್ತಾತ್ರೇಯ–ಶಿಂಶುಮಾರ | 03 |
| | 100 |

ಈ ರೂಪಗಳನ್ನೇ **"ಅಜಾದಿ ಶಿಂಶುಮಾರಾಂತಮೂರ್ತಿ"**ಗಳೆಂದು ಕರೆಯುವರು.

**ಆಹೂಯ ಪೂಜಯೇದ್ ಏತಾಃ ಸ್ನಾನೀಯ ಕಲಶೇ ಬುಧಃ ।**

–ತಂತ್ರಸಾರ ಸಂಗ್ರಹ

- **ಪೂರ್ಣಕುಂಭ :**

ಪೂರ್ಣಕಲಶ–ಪೂರ್ಣಕುಂಭ, ಕುಂಭೋದಕ ಶಬ್ದಗಳು ಸಮಾನಾರ್ಥವುಳ್ಳವು.

ಪೂರ್ಣಕುಂಭದಲ್ಲಿ ಅಜಾದಿ ನೂರು ಮೂರ್ತಿಗಳನ್ನು ಹಾಗೂ ಮೂಲ–ಮೂರ್ತಿಯನ್ನು ಒಟ್ಟು ನೂರೊಂದು ಮೂರ್ತಿಗಳನ್ನು ಆವಾಹಿಸಬೇಕು. ಮೂಲಮೂರ್ತಿ ಎಂದರೆ ಪ್ರಾಜ್ಞರೂಪಿ ನಾರಾಯಣನು.

**ಏತಾಭಿಃ ಸಹಿತಾಂ ಮೂಲಮೂರ್ತಿಂ ಕುಂಭೋದಕೇ ಸುಧೀಃ ।** ಎಂಬ

ತಂತ್ರಸಾರವು ಇದನ್ನು ಸ್ಪಷ್ಟಪಡಿಸಿದೆ. ಕುಂಭೋದಕದಲ್ಲಿ ಆವಾಹನೆಯನ್ನು ಮಾಡುವಾಗ ಅಜಾದಿ ನೂರು ಮೂರ್ತಿಗಳನ್ನು ವ್ಯುತ್ಕ್ರಮವಾಗಿ ಆವಾಹಿಸಬೇಕು. **ಶಿಂಶುಮಾರಾಯ ನಮಃ, ಶ್ರೀಕೃಷ್ಣಾಯ ನಮಃ, ಅಂ ಅಜಾಯ ನಮಃ** ಹೀಗೆ ಆವಾಹಿಸುವುದು. ಇದನ್ನು ಯೋಗದೀಪಿಕಾದಲ್ಲಿ ಹೇಳಲಾಗಿದೆ.

**ಸತಾರಂ ವಾಽಪಿ ಸಾಜಾದ್ಯಂ ಪ್ರತಿಲೋಮಂ ಕಲಾಶತಂ।**

ಅದೇ ರೀತಿ ಅಭಿಷೇಕ ಮಾಡುವಾಗಲೂ ಅಜಾದಿ ಮೂರ್ತಿಗಳನ್ನು ಉಚ್ಚರಿಸುತ್ತಾ ಪೂರ್ಣಕುಂಭದಿಂದ ಅಭಿಷೇಕಿಸಬೇಕು.

**ಅಜಾದಿ ಮೂರ್ತಿಭಿಃ ಪ್ರಾಜ್ಞಃ ಅಭಿಷೇಕಂ ಸಮಾಚರೇತ್ ।**

ಈ ಪೂರ್ಣಕುಂಭದಲ್ಲಿಯೇ ಗಂಧೋದಕವನ್ನು ಹಾಕಿ ಅಭಿಷೇಕ ಮಾಡುವುದು ಅಥವಾ ಗಂಧೋದಕವನ್ನು ಪೂರ್ಣಕುಂಭಕ್ಕೆ ಸೇರಿಸದೆ ಬೇರೆ ಪಾತ್ರೆಯಲ್ಲಿ ಇಟ್ಟುಕೊಂಡು ಪೂರ್ಣಕುಂಭಾಭಿಷೇಕಾನಂತರ, ಶಂಖಕ್ಕೆ ಮುಟ್ಟಿಸಿ ಅಭಿಷೇಕ ಮಾಡುವುದು. ಈ ಎರಡು ಪದ್ಧತಿಯಲ್ಲಿಯೂ ದೋಷವಿರುವುದಿಲ್ಲ.

ಹೀಗೆ ಪೂರ್ಣ ಕಲಶ ಹಾಗೂ ಸ್ನಾನೀಯ ಕಲಶಗಳನ್ನು ಪೂಜಿಸಬೇಕು. ಈ ಉದ್ದೇಶದಿಂದಲೇ ತಂತ್ರಗಳಲ್ಲಿ ಒಂದೇ ಕಲಶವನ್ನು ನಿಷೇಧಿಸಿದ್ದು. – ನವರತ್ನೇಶ್ವರ ಕಲ್ಪ

**ಪಾತ್ರದ್ವಯಮಭಾವಾದ್ವಾ ಕುರ್ಯಾತ್ ನ್ಯೂನಂ ನ ಚಾಚರೇತ್ ।**
**ಏಕಪಾತ್ರಂ ನ ಕರ್ತವ್ಯಂ ಯದಿ ಸಾಕ್ಷಾತ್ ಮಹೇಶ್ವರಃ ॥**

ಪದ್ಯಮಾಲಾದಲ್ಲಿ ಜಯತೀರ್ಥರಾದರೂ ಒಂದು ಕಲಶವಾದರೂ ಸರಿ ಪೂಜಿಸಬಹುದೆಂದು ಹೇಳಿದ ಅಭಿಪ್ರಾಯವಾದರೂ ಕಲಶಪೂಜೆಯು ಅತ್ಯವಶ್ಯವಾಗಿದ್ದು ಅದನ್ನು ಮಾಡಲೇಬೇಕು ಎಂದು. ಒಂದೇ ಕಲಶವಾದರೂ ಯಥಾವತ್ತಾಗಿ ಪೂಜಿಸಿ ನಂತರ ಪ್ರತ್ಯೇಕ ಕಾರ್ಯಗಳಿಗೆ ಪ್ರತ್ಯೇಕವಾಗಿ ಆ ಪೂಜಿತ ಕಲಶದಿಂದ ನೀರನ್ನು ತುಂಬಿಸಿ ಪೂಜಿಸಿರಿ ಎಂಬಾಭಿಪ್ರಾಯವನ್ನು ಪದ್ಯಮಾಲಾ ಶ್ಲೋಕ 47ರಲ್ಲಿ ಹೇಳಿದ್ದಾರೆ.

**ಅಸಂಭವೇ ಚ ಸರ್ವೇಷಾಂ ಭಿನ್ನ ಪಾತ್ರಾಣಿ ಕಾರಯೇತ್ ।**

**ಏಕಸ್ಮಾದಪಿ ಪಶ್ಚಾತ್ ತಂ ಕಲಶಂ ಪೂಜಯೇತ್ ಬುಧಃ ॥**

ಆದ್ದರಿಂದ ಪೂರ್ಣಕಲಶ ಹಾಗೂ ಸ್ನಾನೀಯ ಕಲಶವೆರಡನ್ನೂ ಪೂಜಿಸಬೇಕು. ಇದನ್ನೇ ತಂತ್ರಾಂತರದಲ್ಲಿ –

**ಕಲಶೋಕ್ತ ವಿಧಾನೇನ ಸ್ಥಾಪಯೇತ್ ಪಾತ್ರ ಸಂತತಿಮ್** । ಎಂದಿದ್ದಾರೆ.

- **ಕಲಶದಲ್ಲಿ ಹಾಕಬೇಕಾದ ಸುಗಂಧದ್ರವ್ಯಗಳು :**

**ಏಲಾ, ಲವಂಗ, ಕಕ್ಕೋಲಂ ಕೋಷ್ಠಂ ಜಾಜಿಫಲಂ ತಥಾ ।**

**ಉಶೀರಂ ತುಲಸೀಪತ್ರಂ ಕೌಶೇಯಂ ಚಂದನಂ ತಥಾ ॥**

**ಪುಷ್ಪಾಣಿ ಚ ಸುಗಂಧೀನಿ ನಿಕ್ಷಿಪೇತ್ ಕಲಶೋದಕೇ ॥**

**ಏಲಾ** = ಏಲಕ್ಕಿ, ಲವಂಗ, **ಕಕ್ಕೋಲ** = ಚಂಗೋಲ್‌ಕೋಷ್ಠ, ಜಾಕಾಯಿ [ಚಾತುರ್ಮಾಸ್ಯದಲ್ಲಿ ಇಲ್ಲ], ಲವಂಚ, ತುಲಸೀಪತ್ರ, **ಕೌಶೇಯ** = ಕುಶಾಗ್ರಗಳು, **ಗಂಧ** = ಸುಗಂಧ ಪುಷ್ಪಗಳು. ಹೀಗೆ ದಶ ಸುಗಂಧ ವಸ್ತುಗಳನ್ನು ಜೊತೆಗೆ ಪಚ್ಚಕರ್ಪೂರವನ್ನು, ಕೇಸರಿಯನ್ನು ಹಾಕಬೇಕು. ಶಾಕವ್ರತದಲ್ಲಿ ಕೇಸರೀ, ಪಚ್ಚಕರ್ಪೂರಗಳು, ಲವಂಗಾದಿಗಳನ್ನು ಹಾಕಬಾರದು. ತುಲಸೀಕಾಷ್ಠ, ಗಂಧ, ತುಲಸೀ, ಪುಷ್ಪಾದಿಗಳನ್ನು ಹಾಕಬಹುದು.

ದ್ವಿದಲವ್ರತದಲ್ಲಿ ಪಚ್ಚಕರ್ಪೂರ, ಕೇಸರೀ, ಇವುಗಳನ್ನು ಹಾಕಬಹುದು. ಕೆಲವರು ದ್ವಿದಲವ್ರತದಲ್ಲಿ ಪಚ್ಚಕರ್ಪೂರ, ಕೇಸರಿಗಳನ್ನು ಹಾಕುವುದಿಲ್ಲ. ಹಾಕದಿದ್ದರೆ ದೋಷವಿರುವುದಿಲ್ಲ. ತುಲಸೀಕಾಷ್ಠ, ಗಂಧ ಇವುಗಳೇ ಸಾಕು. ಇದಾವುದೂ ಅಲಭ್ಯವಾದಾಗ ಗಂಧೋದಕ, ತುಲಸೀದಳ, ತುಲಸೀ–ಕಾಷ್ಠೋದಕವನ್ನಾದರೂ ಕಲಶದಲ್ಲಿ ಹಾಕಿ ಪೂಜಿಸುವುದು. ಏಕಾದಶಿಯಂದು ಕಲಶದಲ್ಲಿ ತುಲಸೀದಳವನ್ನೂ ಹಾಕಬಾರದು. ಶುದ್ಧೋದಕದಿಂದ ಮಾತ್ರ ಅಭಿಷೇಕವು.

- **ಅಭಿಷೇಕ ಕ್ರಮ :**

ಕುಂಭೋದಕವನ್ನು ಶಂಖದಲ್ಲಿ ಹಾಕಿ ಅಭಿಷೇಕಿಸಬೇಕು. **"ಕುಂಭೋದಕಂ ಶಂಖೇನೈವಾಭಿಷೇಚಯೇತ್"**. ಸ್ನಾನೀಯ ಕಲಶದ ನೀರನ್ನು ನೇರವಾಗಿ ಶಂಖಕ್ಕೆ ಸ್ಪರ್ಶಿಸಿ, ಸ್ನಾನೀಯ ಕಲಶದಿಂದಲೇ ಅಭಿಷೇಕಿಸಬೇಕು.

ಛಲಾರಿಯಲ್ಲಿ ಬೃಹತ್ಕಲಶೋದಕವನ್ನು ಶಂಖದಿಂದಲೇ ಅಭಿಷೇಕಿಸ-ಬೇಕು, ಕುಂಭೋದಕವನ್ನು ನೇರವಾಗಿ ಕುಂಭದಿಂದಲೇ ಅಭಿಷೇಕಿಸ-ಬೇಕೆಂದು ತಿಳಿಸಿದ್ದಾರೆ.

- **ಅಭಿಷೇಕದಲ್ಲಿ ಪಠಿಸಬೇಕಾದ ಮಂತ್ರಗಳು :**

ಅಭಿಷೇಕ ಮಾಡುವಾಗ ಸೂಕ್ತಗಳಲ್ಲಿಯೇ ಅತ್ಯಂತ ಶ್ರೇಷ್ಠವಾದ ಪುರುಷ-ಸೂಕ್ತವನ್ನೇ ಪಠಿಸಬೇಕು.

ಇದಾದ ನಂತರ ವಿಷ್ಣು ಸೂಕ್ತ, ಸಮುದ್ರ ಸೂಕ್ತ, ಮೊದಲಾದವುಗಳನ್ನು ಪಠಿಸಬೇಕು. ವಿಷ್ಣು ಸೂಕ್ತ ಹಾಗೂ ಪುರುಷಸೂಕ್ತಗಳಿಗೆ ಸದೃಶವಾದ ಸೂಕ್ತಗಳು ಮತ್ತೊಂದಿಲ್ಲವೆಂದು ಶಾಸ್ತ್ರಗಳ ಅಭಿಪ್ರಾಯ.

**ತದ್ವಿಷ್ಣೋರಿತಿ ಮಂತ್ರೇಣ ಸೂಕ್ತೇನ ಪುರುಷೇಣ ಚ।**
**ನೈತಾಭ್ಯಾಂ ಸದೃಶೋ ಮಂತ್ರೋ ವೇದೋಷೋಕ್ತೂ ಚತುರ್ಷ್ವಪಿ॥**

ಪುರುಷಸೂಕ್ತ ಪಠಣವಿಲ್ಲದೆ ಪೂಜೆಯೇ ಇಲ್ಲ.

**ಪುರುಷಸೂಕ್ತಮಪಠಿತ್ವಾ ಚ ದೇವ ಪೂಜಾ ಸಮಾಪನಂ।**

- **ನಾಡೀಗತ ಭಗವಂತನ ಚಿಂತನೆ :**

ಮಾನವರ ದೇಹದಲ್ಲಿರುವ 72 ಸಾವಿರ ನಾಡಿಗಳಲ್ಲಿ ಪ್ರಧಾನವಾದ 101 ನಾಡಿಗಳಿವೆ. ಈ ನಾಡೀಗತ 101 ಮೂರ್ತಿಗಳನ್ನೇ ಕಲಶದಲ್ಲಿ ಆವಾಹಿಸುವುದು ಇವು ಕಲಶನಾಮಕ ಭಗವಂತನಿಗೆ ಸ್ವಾಂಶಕಲೆಗಳೆಂದು ಚಿಂತಿಸಬೇಕು. ಈ ನಾಡಿಗಳೇ ನದಿಗಳು ನಾಡೀಗತ ನದಿಗಳೇ ಬಹಿರಂಗ ಪೂಜೆಯಲ್ಲಿ ನೂರೊಂದು ಮೂರ್ತಿಗಳನ್ನು ಚಿಂತಿಸಲು ಆಚಾರ್ಯರು ತಿಳಿಸಿದ್ದಾರೆ.

ಹೃದಯದಲ್ಲಿದ್ದ ನೂರೊಂದು ನಾಡಿಗಳ ಸ್ತಂಭಗಳಿಂದ ಯುಕ್ತವಾದ ಮಂಟಪವು ಶ್ರೀಹರಿಗೆ ಕಲಶವೆಂದು, ಸುಷುಮ್ನಾ ನಾಡ್ಯಂತರ್ಗತ ಬಿಂಬನಿಗೆ ಪ್ರತಿಮೆಗಳಲ್ಲಿ ಆವಾಹಿಸಿದ ಶ್ರೀಹರಿಯ ರೂಪಗಳಿಗೆ ಅಭೇದ ಚಿಂತನೆಯನ್ನು ಮಾಡುವುದೇ ಅಭಿಷೇಕವು.

- **ಕಲಶ ಪೂಜಾಕ್ರಮ :**

ಬೃಹತ್ಕಲಶ ಹಾಗೂ ಪೂರ್ಣಕುಂಭಗಳೆಂಬ ಎರಡು ಕಲಶಗಳನ್ನು ಮೂರು ಬಾರಿ ಶೋಧಿಸಿ ನೃಸಿಂಹಬೀಜಾಕ್ಷರವನ್ನು ಬರೆದು ಶುದ್ಧವಾದ ನೀರನ್ನು ಕಲಶಗಳಲ್ಲಿ ತುಂಬಿಸಿ, ಗಂಧೋದಕದ ಜೊತೆಗೆ ಬೃಹತ್ಕಲಶವನ್ನು ಇಟ್ಟುಕೊಂಡು ತುಲಸಿಗಳನ್ನು ಅದರಲ್ಲಿ ಹಾಕಿ, ನಾಲ್ಕು ದಿಕ್ಕಿಗೂ ಗಂಧ, ಅಕ್ಷತೆಗಳಿಂದ ಅಲಂಕರಿಸಿ, ಕಲಶಗಳ ಮೇಲೆ ಹಸ್ತವನ್ನಿಟ್ಟುಕೊಂಡು **"ಕಲಶಸ್ಯಮುಖೇ"** ಎಂಬ ಮಂತ್ರವನ್ನು ಜಪಿಸಬೇಕು.

ಕೆಲವರು ಕುಂಭವನ್ನು ಗಂಧಾಕ್ಷತೆಗಳಿಂದ ಅಲಂಕರಿಸಿ ಈ ಮಂತ್ರ ಜಪಿಸಬೇಕೆಂದು ಅಭಿಪ್ರಾಯಪಡುವರು. **"ಕುಂಭಂ ಚತುರ್ದಿಕ್ಷು ಗಂಧಾಕ್ಷತಾದಿಭಿರಲಂಕೃತ್ಯ"**. ಆದರೆ ಪೂಜಕನ ಅನುಕೂಲದಂತೆ ಆಚರಿಸಬಹುದು.

ಅಥವಾ ಸ್ನಾನೀಯ ಕಲಶಕ್ಕೂ ಸ್ನಾನ ಕುಂಭವೆಂಬ ಹೆಸರಿಸುವುದರಿಂದ ಸ್ನಾನೀಯ ಕಲಶವನ್ನೇ **"ಕುಂಭ"** ಎಂಬ ಶಬ್ದದಿಂದ ಹೇಳಲಾಗಿದೆ ಎಂದೂ ತಿಳಿಯಬಹುದು.

ಅನಂತರ **"ಇಮಂ ಮೇ ಗಂಗೇ"** ಇತ್ಯಾದಿ ಮಂತ್ರಗಳನ್ನು ಪಠಿಸಿ ಎರಡೂ ಕಲಶಗಳಲ್ಲಿ ತುಲಸೀದಲವನ್ನು ಹಾಕಬೇಕು. ಏಕಾದಶಿಯಂದು ಮಾತ್ರ ತುಲಸೀದಳ ಹಾಕದೇ ಪೂಜಿಸಬೇಕು.

ಕಲಶದಲ್ಲಿ ಗಂಧ, ತುಲಸೀಕಾಷ್ಠ, ಕೇಸರೀ, ಪಚ್ಚಕರ್ಪೂರ, ಏಲಕ್ಕಿ, ಲಾವಂಚ, ಚಂಗಲ್‌ಕೋಷ್ಠ, ಜಾಕಾಯಿ, ದರ್ಭೆ ಇವುಗಳನ್ನು ಹಾಕಿರಬೇಕು.

**ಕಲಶದೇವತಾಭ್ಯೋ ನಮಃ ಗಂಧಪುಷ್ಪಾಕ್ಷತಾನಿ ಸಮರ್ಪಯಾಮಿ** – ಎಂದು ಹೇಳಿ ಶಂಖ, ಚಕ್ರ, ಗದಾ, ಪದ್ಮ, ಧೇನು, ತಾರ್ಕ್ಷ್ಯಮುದ್ರೆಗಳನ್ನು ತೋರಿಸಬೇಕು.

ನಂತರ **"ಏಕಪಂಚಾಶದ್ ವರ್ಣಾನಾಂ"** ಎಂಬ ಮಂತ್ರಗಳನ್ನು ಪಠಿಸುತ್ತಾ ಅಜಾದಿ ಶಿಂಶುಮಾರಾಂತ ದೇವತೆಗಳನ್ನು ಆವಾಹಿಸಬೇಕು. ಇನ್ನೊಂದು ಕಲಶದಲ್ಲಿ ಶಿಂಶುಮಾರ, ಕಲ್ಕಿ–ಬುದ್ಧ, ದತ್ತಾತ್ರೇಯ, ಕೃಷ್ಣ ಮೊದಲಾದ ರೂಪಗಳನ್ನು ವ್ಯುತ್ಕ್ರಮವಾಗಿ ಆವಾಹಿಸಬೇಕು.

ನಂತರ ತತ್ವನ್ಯಾಸ–ಮಾತೃಕಾನ್ಯಾಸಗಳನ್ನು ಆವಾಹಿತ ದೇವತೆಗಳಲ್ಲಿ ಮಾಡಿ, ನಾರಾಯಣಾಷ್ಟಾಕ್ಷರ ಮಂತ್ರದ ವರ್ಣನ್ಯಾಸವನ್ನು, ಕೃದ್ಧೋಲ್ಕಾದಿ ಪಂಚಾಂಗನ್ಯಾಸವನ್ನು, **ಉದ್ಯದ್ ಭಾಸ್ವತ್ ಸಮಾಭಾಸಃ** ಎಂಬುದರಿಂದ ಧ್ಯಾನವನ್ನು ಮಾಡಿ, ಪುರುಷಸೂಕ್ತದ ಹದಿನಾರು ಋಕ್ಕುಗಳಿಂದ ಅಥವಾ ಮೂಲ ಮಂತ್ರದಿಂದಾಗಲೀ ಆವಾಹನಾದಿ ಆಸನ ಪರ್ಯಂತ ಮಾಡಿ, ಗಂಧ–ಪುಷ್ಪ–ತುಲಸೀ ಸಮರ್ಪಿಸಿ, ಕಲಶಗಳಲ್ಲಿ ಆವರಣ ಪೂಜೆ ಮಾಡಬೇಕು. ಆವರಣ ದೇವತೆಗಳಿಗೆ ಅರ್ಘ್ಯ ಪಾದ್ಯಾದಿ ಉಪಚಾರಗಳನ್ನು ಸಮರ್ಪಿಸುತ್ತೇನೆ ಎಂದು ಅರ್ಘ್ಯಾದಿಗಳನ್ನು ಪಾತ್ರೆಯಲ್ಲಿ ಬಿಡುವುದು.

ಅನಂತರ ಕಲಶಗಳಲ್ಲಿ ಧೂಪ–ದೀಪ–ನೈವೇದ್ಯಗಳನ್ನು ಪುನರ್ಧೂಪ ನೀರಾಜನವನ್ನು ಮೂಲಮಂತ್ರದಿಂದಲೇ ಮಾಡುವುದು. ನಂತರ ಪುಷ್ಪಾಂಜಲಿಯನ್ನು ನೀಡಿ **ಕಲಶಃ ಕೀರ್ತಿಮಾಯುಷ್ಯಂ** ಇತ್ಯಾದಿ ಮಂತ್ರವನ್ನು ಪಠಿಸುವುದು.

## 10. ಶಂಖಪೂಜೆಯ ಬಗ್ಗೆ ವಿವರಣೆ :

ಅಮೃತ ಮಥನ ಕಾಲದಲ್ಲಿ ಹುಟ್ಟಿದ ವಸ್ತುಗಳಲ್ಲಿ ಶಂಖವೂ ಒಂದಾಗಿದೆ. ಭಗವಂತನ ಪ್ರಮುಖ ಆಯುಧವಿದು.

**"ಧತ್ತೇ ಶಕ್ತಿಃ ಸ್ವಮಾಯಯಾ"** ಎಂಬಂತೆ ಭಗವಂತನೇ ಸ್ವೇಚ್ಛೆಯಿಂದ ಅದರ ಶಕ್ತಿಯನ್ನು ಧರಿಸಿ, ಪ್ರೇರಿಸುವನು. ಇದಕ್ಕೆ ಇನ್ನೊಂದು ಹೆಸರು 'ದರ' 'ದೃವಿಧಾರಣೆ' ಧಾತುವಿನಿಂದ ನಿಷ್ಪನ್ನವಾದ ಇದು ಸಮಸ್ತ ಪಾಪಗಳನ್ನು ನಾಶ ಮಾಡುತ್ತದೆ ಎಂದರ್ಥ ನೀಡುತ್ತದೆ.

**ಶಂ** = ಎಂದರೆ ಸುಖವನ್ನು, **ಖನತೀತಿ** = ನೀಡುವುದರಿಂದಲೂ ಶಂಖವು, ಗುರುಪುತ್ರನ ಶೋಧಕ್ಕಾಗಿ ಹೊರಟ ಶ್ರೀಕೃಷ್ಣನು ಸಮುದ್ರದಲ್ಲಿದ್ದ ಪಂಚಜನ ರಾಕ್ಷಸನನ್ನು ಸಂಹರಿಸಿ ಅವನ ಹತ್ತಿರವಿದ್ದ ಶಂಖವನ್ನು ತಾನು ಪಡೆದದ್ದರಿಂದ **"ಪಾಂಚಜನ್ಯ"** ಎಂಬ ಹೆಸರೂ ಇದಕ್ಕಿದೆ.

ಪಂಚಜನ ಎಂದರೆ ನಾಲ್ಕು ವೇದ ಹಾಗೂ ಮಹಾಭಾರತ ಇದರ ಜ್ಞಾನಜನಕನಾದ ಭಗವಂತನೆ ಪಂಚಜನ.

ಸಮಸ್ತ ವೈದಿಕ ಸಾಹಿತ್ಯವನ್ನು ಸಂಕೇತಿಸುವ ಶಂಖವೂ ಪಾಂಚಜನ್ಯವಾಯಿತು. ಶಂಖವನ್ನು ಧ್ರುವನಿಗೆ ಮುಟ್ಟಿಸಿದಾಗ ಜ್ಞಾನವು ಪ್ರಾಪ್ತವಾಯಿತು.

ಶಂಖವಿದ್ದ ಕಡೆ ಲಕ್ಷ್ಮಿಯು ಸುಸ್ಥಿರ.

**ಶಂಖಶಬ್ದೊ ಭವೇದ್ ಯತ್ರ ತತ್ರ ಲಕ್ಷ್ಮೀಶ್ಚ ಸುಸ್ತಿರಾ ।**

ಶಂಖದ ನೀರಿನಿಂದ ಪ್ರೋಕ್ಷಿಸಿಕೊಂಡವನಿಗೆ ಸರ್ವತೀರ್ಥ ಸ್ನಾನಫಲ.

**ಸ ಸ್ನಾತಃ ಸರ್ವತೀರ್ಥೇಷು ಯಃ ಸ್ನಾತಃ ಶಂಕವಾರಿಣಾ ।**

ಶಂಖವು ಹರಿಯ ಅಧಿಷ್ಠಾನವಾಗಿದ್ದು ಶಂಖವಿದ್ದಲ್ಲಿ ಹರಿಯಿರುವನು. ಅಲ್ಲಿಯೇ ಲಕ್ಷ್ಮಿಯು ಇದ್ದು ಅಮಂಗಳ ಪರಿಹರಿಸುವಳು.

**ಶಂಖೋ ಹರೇರಧಿಷ್ಠಾನಂ ಯತೋ ಶಂಖೋ ತತೋ ಹರಿಃ ।**
**ತತ್ರೈವ ವಸತೇ ಲಕ್ಷ್ಮೀಃ ದೂರಿಭೂತಮಮಂಗಲಮ್ ॥**

– ಸ್ಮೃತಿ ಸಂಗ್ರಹ

ಶಂಖವನ್ನು ಬರಿ ನೆಲದ ಮೇಲಿಟ್ಟರೆ ಮುಂದೆ ಕುಷ್ಠರೋಗ ಬರುವುದು.

**ಭೂಮ್ಯಾಂ ಶಂಖಂ ಚ ಸಂಸ್ಥಾಪ್ಯ ಕುಷ್ಠಂ ಜನ್ಮಾಂತರೇ ಲಭೇತ್ ।**

–ಸ್ಮೃತಿ

ಶಂಖವನ್ನು ನೀರಿನಲ್ಲಿ ಮುಳುಗಿಸಿ ಅಭಿಷೇಕಿಸಬಾರದು. ಆ ನೀರು ನಾಯಿಯ ಮೂತ್ರವೆನಿಸುತ್ತದೆ. ಉದ್ಧರಣೆಯಿಂದ ತುಂಬಬೇಕು.

**ಸಾಕ್ಷಾತ್ ಶಂಖೇನ ಚೋದ್ದೃತ್ಯ ಜಲಂ ಯಸ್ತ್ವಭಿಷೇಚಯೇತ್ ।**
**ಶ್ವಾನಮೂತ್ರ ಸಮಂ ಪ್ರೋಕ್ತಂ ಸತ್ಯಂ ಸತ್ಯಂ ವದಾಮ್ಯಹಮ್ ॥**

–ಸ್ಮೃತಿ ಸಂಗ್ರಹ

ಶಂಖದ ಹಿಂಭಾಗವು ಹಾಗೂ ಮುಂಭಾಗವು ಪಾಪಕರವೆನಿಸಿದ್ದು ಬೆಳ್ಳಿ ಅಥವಾ ಬಂಗಾರದ ಕಟ್ಟುಹಾಕದೆ ಶಂಖದ ತುದಿಯಿಂದ ಅಭಿಷೇಕಿಸಬಾರದು. ಇದು ರಕ್ತಕ್ಕೆ ಸಮಾನವೆನಿಸಿದೆ.

**ಶಂಖಾಧಃ ಸ್ಪೃಷ್ಟತೋಯಂ ತು ಶಾಲಿಗ್ರಾಮೇ ಪತೇದ್ ಯದಿ ।**
**ತತ್ತೋಯಂ ರುಧಿರಂ ಪ್ರೋಕ್ತಂ ತಥಾ ಶಂಖಾಗ್ರ ನಿಃಸೃತಮ್ ॥**

– ಪಂಚರಾತ್ರ

ಬೆಳ್ಳಿಯಿಂದ ಕಟ್ಟು ಹಾಕಿದ ಅಗ್ರ ಹಾಗೂ ಹಿಂಬದಿಯುಳ್ಳ ಶಂಖದಿಂದ ಅಭಿಷೇಕವು ಅಮೃತಾಭಿಷೇಕಕ್ಕೆ ಸಮಾನವು. ಶಂಖದಲ್ಲಿ ಕುಂಭೋದಕವನ್ನು ಉದ್ಧರಣೆಯಿಂದಲೇ ತುಂಬಬೇಕು. ಹೊರತು ಶಂಖವನ್ನೇ ಕುಂಭದಲ್ಲಿ ಮುಳುಗಿಸಿ ತುಂಬಿಸಬಾರದು. ಶಂಖದ ಪೃಷ್ಠಭಾಗದ ಸಂಪರ್ಕವುಳ್ಳ ಜಲವುಳ್ಳ ಅಭಿಷೇಕ ಮಾಡಿದರೆ ಪಾಪವುಂಟಾಗುತ್ತದೆ.

**ಉದ್ಧರಿಣ್ಯಾ ಜಲಂ ಗ್ರಾಹ್ಯಂ ನಾಪ್ಸು ಶಂಖಂ ನಿಮಜ್ಜಯೇತ್ ।**
**ಶಂಖಸ್ಯ ಪೃಷ್ಠ ಸಂಸ್ಪೃಷ್ಟಂ ಪಯಃ ಪಾಪಕರಂ ಧ್ರುವಮ್ ॥**

– ಸ್ಮೃತಿಸಂಗ್ರಹ

ಶಂಖೋದಕವನ್ನು ತಲೆಯ ಮೇಲೆ ಪ್ರೋಕ್ಷಿಸಿಕೊಳ್ಳಬೇಕೇ ವಿನಹ ಅದನ್ನು ತೀರ್ಥದಂತೆ ಕುಡಿಯಬಾರದು. ಆಚಮನಾದಿಗಳನ್ನು ಮಾಡಬಾರದು.[2]

---

2. ಪಾನಕ ನರಸಿಂಹನ ದೇವಸ್ಥಾನದಲ್ಲಿ ದೇವರಿಗೆ ಪಾನಕವನ್ನು ಶಂಖದಿಂದ ಬಾಯಿಗೆ ತುಂಬಿಸಿ, ನಂತರ ಉಳಿದ ಶಂಖದಲ್ಲಿ ಪಾನಕವನ್ನೆ ಭಕ್ತರಿಗೆ ಕುಡಿಯಲು ನೀಡುತ್ತಾರೆ. ಇದು ತಪ್ಪು. ಬಹುಶಃ "ಶಂಖದಿಂದ ಬಂದರೆ ತೀರ್ಥ" ಎಂಬ ಅಭಿಪ್ರಾಯವುಳ್ಳವರೆಂದು ತೋರುತ್ತದೆ.

**ಶಂಖಸ್ಥಮುದಕಂ ನೈವ ಪಾತುಂ ಯೋಗ್ಯಂ ಕಥಂಚನ ।**
**ನ ತೇನಾರ್ಘ್ಯಂ ನ ಪಾದ್ಯಂ ಸ್ಯಾದಾಚಾಂತಂ ಮಧುಪರ್ಕಕಂ ॥**

–ಸ್ಮತಿಸಂಗ್ರಹ

ಶಂಖವನ್ನು ನೆಲದ ಮೇಲೆ ಇಡಬಾರದು. ಪೀಠದಲ್ಲೇ ಇಡಬೇಕು. ಭೂಮಿಯು ಅದರ ಭಾರವನ್ನು ಸಹಿಸಲಾರದು.

**ವಿಪ್ರಸ್ಯ ಗುದಂ ಶಂಖ ತರುಣೀಸ್ತನ ಮಂಡಲಂ ।**
**ರೇತೋಗ್ರಂಥಿಂ ಚ ವಿಪ್ರೇಂದ್ರ ನ ಭೂಃ ಧಾರಯಿತುಂ ಕ್ಷಮಾ ॥**

– ಸಂಸ್ಕಾರ ಭಾಸ್ಕರ

**ತಸ್ಮಾತ್ ಶಂಖಾಗ್ರ ಮಾಚ್ಛಾದ್ಯ ರಜತಸ್ವರ್ಣತಾಮ್ರತಃ ।**
**ಅಭಿಷೇಕಂ ಕೃತಂ ವಿಷ್ಣೋಃ ಅಮೃತಸಮಾಭಿಷೇಚನಮ್ ॥**

ಶಂಖವಿಲ್ಲದೆ ಮಾಡಿದ ದೇವಪೂಜೆ ನಿಷ್ಫಲ –ಮೇರುತಂತ್ರ

**ವಿನೈವ ಶಂಖ ಪೂಜಾಂ ಯೋ ವೈಷ್ಣವಃ ಪೂಜಯೇದ್ ಹರಿಂ ।**
**ಪೂಜಾಫಲಂ ನ ಚಾಪ್ನೋತಿ ಸಮ್ಯಕ್ ಪೂಜಕೋಽಪಿ ಸನ್ ॥**

ಶಂಖವು ಭಿನ್ನವಾಗಿದ್ದರೆ ಸುಳಿಯು ಹೋಗಿದ್ದರೆ ಸುವರ್ಣ ಕಟ್ಟು ಆ ದೋಷವನ್ನು ಪರಿಹರಿಸುತ್ತದೆ.

**ಆವರ್ತ ಭಂಗದೋಷೋ ಹಿ ಹೇಮಯೋಗಾದ್ ವಿನಶ್ಯತಿ ।**

ಶಂಖದಿಂದ ಅಭಿಷೇಕವಾದರೆ ಮಾತ್ರ ತೀರ್ಥ.

**ಶಂಖೇನೈವಾಭಿಷೇಕೇ ತೀರ್ಥಂ ಸ್ಯಾತ್ ನೈವ ಚಾನ್ಯಥಾ ॥**

ಪಂಚಾಮೃತ ಕಾಲದಲ್ಲೂ ಹಾಲು, ಮೊಸರು ಇವುಗಳನ್ನು ಶಂಖದಲ್ಲಿಟ್ಟು ಅಭಿಷೇಕಿಸಬೇಕು. ಶಂಖಕ್ಕೆ ಮುಟ್ಟಿಸಿ ಮಾಡುವ ಪದ್ಧತಿಯೂ ಇದೆ.

**ಕ್ಷೀರಾದಿಗಂಗಾತೀರ್ಥಂ ವಾ ತ್ರೈಲೋಕ್ಯಂ ತೀರ್ಥವಾರ್ಯಪಿ ।**
**ಶಂಖೇ ಕೃತ್ವಾ ಸ್ಥಾಪನಂ ಸ್ಯಾತ್ ಅನ್ಯಥಾ ನಿಷ್ಫಲಂ ಭವೇತ್ ॥**

ಶಾಲಿಗ್ರಾಮವನ್ನು ಶಂಖದಿಂದಲೇ ಅಭಿಷೇಕಿಸಬೇಕು. ಶಂಖದಲ್ಲಿ ಲಕ್ಷ್ಮೀದೇವಿಯ ಸನ್ನಿಧಾನ ವಿಶೇಷವಿರುವುದರಿಂದ ಅಭಿಷೇಕಾದಿಗಳನ್ನು

ಮಾಡುವಾಗ ಶಂಖಕ್ಕೆ ಸ್ಪರ್ಶಿಸುವುದು ಲಕ್ಷ್ಮೀದೇವಿಯೇ ಅಭಿಷೇಕ ಮಾಡುತ್ತಿರುವಳು ಎಂಬ ಅನುಸಂಧಾನಕ್ಕೆ ಕಾರಣವಾಗುತ್ತದೆ.

ಶಂಖದಿಂದ ವಾಯು–ರುದ್ರಾದಿಗಳಿಗೆ ಅಭಿಷೇಕವನ್ನು ಮಾಡಬಾರದು. ಶಿವ–ಸೂರ್ಯರಿಗಂತು ಮಾಡಲೇಬಾರದು.

**ಶಿವಂ ವಾऽಪ್ಯನ್ಯದೇವಂ ವಾ ಯಃ ಪುಮಾನ್ ಶಂಖವಾರಿಣಾ ।**
**ಪೂಜಯೇತ್ತು ಪ್ರಮಾದೇನ ಸೋऽಪರಾಧೀ ಭವೇದ್ ಧ್ರುವಂ ॥**

**ಸರ್ವತ್ರೈವ ಪ್ರಶಸ್ತೋऽಬ್ಜಃ ಶಿವಸೂರ್ಯಾರ್ಚನಂ ವಿನಾ ॥**

- **ಶಂಖದ ವಿಧಗಳು :**

ಶಂಖವು ಎಡಮುರಿ ಹಾಗೂ ಬಲಮುರಿ ಎಂದು ಎರಡು ವಿಧಗಳಿವೆ. ಎಡಮುರಿ ಶಂಖ ಲಕ್ಷ್ಮೀ ಸನ್ನಿಧಾನವುಳ್ಳದ್ದಾದರೆ, ಬಲಮುರಿಯು ಭಗವಂತನ ಸನ್ನಿಧಾನ ವಿಶೇಷವಿದ್ದು, ಶಾಲಿಗ್ರಾಮದಂತೆ ಅವುಗಳ ಜೊತೆಗೆ ಪೂಜಿಸಲು ಯೋಗ್ಯವಾಗಿದೆ.

ಬಲಮುರಿಯನ್ನು ಬೆಳ್ಳಿ, ಬಂಗಾರಗಳಿಂದ ಕಟ್ಟು ಹಾಕಿಸಿ ಪೂಜಿಸಿದರೆ ಐಹಿಕೇಷ್ಟಾರ್ಥಗಳು ಸಿದ್ಧಿಸುವುವು.

- **ಶಂಖದ ಲಕ್ಷಣ – ವಾಮಾವರ್ತ– ದಕ್ಷಿಣಾವರ್ತ :**

ಹಾಲಿನಂತೆ ಬಿಳಿಯಾದ, ಸುಂದರವಾದ, ಉದ್ಧವಾದ ನಾಲವುಳ್ಳ, ಓಂಕಾರನಾದವನ್ನು ಹೊರಹೊಮ್ಮಿಸುವ ಶಂಖವು ಉತ್ತಮವಾದದ್ದು.

**ಗೋಕ್ಷೀರ ಧವಲಃ ಸ್ನಿಗ್ಧೋ ದೀರ್ಘನಾಲೋ ಬೃಹತ್ತಮಃ ।**
**ಓಂಕಾರನಾದ ಸಂಯುಕ್ತಃ ಸವ್ಯಾವರ್ತಃ ಪ್ರಶಸ್ಯತೇ ॥**

ಪೂಜಾರ್ಹವಾದ ಚಕ್ರಾಂಕಿತೆ, ತುಲಸೀ, ಘಂಟೆ, ಪುರುಷಸೂಕ್ತ, ತಾಮ್ರಪಾತ್ರೆ, ಗಂಧ, ಶಂಖ ಈ ಎಂಟು ವಸ್ತುವಿದ್ದರೇ "ತೀರ್ಥ". ಶಂಖವಿಲ್ಲದ ಪೂಜೆ ವ್ಯರ್ಥವು.

ಮೃದಂಗ, ವೀಣೇ, ವೇಣುವಿನ ಧ್ವನಿಯಂತೆ ಶಂಖ ಧ್ವನಿಯು ಮಾಂಗಲಿಕವಾದದ್ದು.

- **ಶಂಖಪೂಜೆಗೆ ಅಷ್ಟೋಪಚಾರ ಪೂಜೆ ಮಾತ್ರ :**

**ಧ್ಯಾನಮಾವಾಹನಂ ಸಾರ್ಘ್ಯಂ ಪಾದ್ಯಂ ಚ ಮಧುಪರ್ಕಯುಕ್ ।**
**ಪುನರಾಚಮನಂ ಗಂಧಂ ಪುಷ್ಪಂ ಚೇತ್ಯಷ್ಟ ಪೂಜನಮ್ ॥**

ಶಂಖ ನೀರಿನ ಪ್ರೋಕ್ಷಣೆಯಿಂದ ಕಾಯಶುದ್ಧಿ, ಆತ್ಮಶುದ್ಧಿ, ಪುಷ್ಪಶುದ್ಧಿ, ಸ್ಥಾನಶುದ್ಧಿ, ಮಂತ್ರಶುದ್ಧಿ, ಪೀಠಶುದ್ಧಿ, ಆಸನ ಶುದ್ಧಿಯುಂಟಾಗುತ್ತದೆ. ಶಂಖವು ಅಕಸ್ಮಾತ್ ಜಾರಿ ಕೈಯಿಂದ ಬಿದ್ದು ಭಿನ್ನವಾದರೆ 108 ಬಾರಿ ನಾರಾಯಣ ಸ್ಮರಣೆ ಮಾಡಿ, ಬೇರೆ ಶಂಖದಿಂದ ಪೂಜಿಸಬೇಕು, ಗಾಬರಿಯಾಗಬೇಕಿಲ್ಲ.

**11. ಉಪಚಾರ ಪೂಜೆಯ ಬಗ್ಗೆ ವಿವರಣೆ :**

ಪೂಜೆಯಲ್ಲಿ ಆರು ವಿಧಗಳಿವೆ : ಪಂಚೋಪಚಾರ ಪೂಜೆ, ದಶೋಪಚಾರ, ಷೋಡಶೋಪಚಾರ –16, ಅಷ್ಟಾದಶೋಪಚರ–18, ಷಡ್‌ತ್ರಿಂಶತ್–36, ಷಷ್ಟ್ಯೋಪಚಾರ ಪೂಜೆ–60 ಇತ್ಯಾದಿ.

- **ಪಂಚೋಪಚಾರ ಪೂಜೆ :**

ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ ಇವು ಪಂಚೋಪಚಾರಗಳು.
**ಗಂಧಾದಿಕ ನಿವೇದ್ಯಂತಾ ಪೂಜಾ ಪಂಚೋಪಚಾರಿಕಾ ॥**

- **ದಶೋಪಚಾರ ಪೂಜೆ :**

ಅರ್ಘ್ಯ, ಪಾದ್ಯ, ಆಚಮನ, ಮಧುಪರ್ಕ, ಪುನರಾಚಮನ, ಗಂಧಾದಿ ಪಂಚ, ಹೀಗೆ ಹತ್ತು ಪೂಜೆ.

- **ಹದಿನಾರು ಪೂಜೆ :**

ಆವಾಹನ, ಆಸನ, ಅರ್ಘ್ಯ, ಪಾದ್ಯ, ಆಚಮನ, ಸ್ನಾನ, ಮಧುಪರ್ಕ, ವಸ್ತ್ರಭೂಷಣ, ಗಂಧ, ಧೂಪ, ದೀಪ, ನೈವೇದ್ಯ, ಪ್ರದಕ್ಷಿಣೇ, ನಮಸ್ಕಾರ–ಸ್ತುತಿಗಳು.

- **ಮತ್ತೊಂದು ರೀತಿ :**

**ಅರ್ಘ್ಯಂ ಪಾದ್ಯಂ ಚಾಚಮನಂ ಮಧುಪರ್ಕಂ ತಥೈವ ಚ ।**
**ಪುನರಾಚಮನಂ ಸ್ನಾನ ವಸನಂ ಭೂಷಣಂ ತಥಾ ॥**

**ಉಪವೀತಾಸನೇ ಗಂಧ ಪುಷ್ಪೇ ನೈ ಧೂಪ ದೀಪಕೇ।**
**ಪ್ರದಕ್ಷಿಣ ಸ್ತುತೀ ಚೇತಿ ಪೂಜಾಃ ಷೋಡಶ ಸ್ಮೃತಾಃ॥**

– ಭಾವಪ್ರಕಾಶಿಕಾ

- **ಪಂಚೋಪಚಾರ ಪೂಜೆಯ ಮುದ್ರೆ :**

ಕಲಶಪೂಜೆ, ಶಂಖಪೂಜೆ ಮುಂತಾದ ಪೂಜೆಗಳಲ್ಲಿ ಗಂಧಗಳನ್ನು ಸಮರ್ಪಿಸಿದ ನಂತರ ಅವುಗಳಿಗೆ ಸಂಬಂಧಪಟ್ಟ ಗಂಧಾದಿ ಮುದ್ರೆಗಳನ್ನು ತೋರಿಸಬೇಕೆಂದಿದೆ.

**ಗಂಧಮುದ್ರೆ** – ಅಂಗುಷ್ಠದಿಂದ ಕಿರುಬೆರಳಿನ ಕೆಳಗಿನ ಪರ್ವವನ್ನು ಮುಟ್ಟುವುದು. ಗಂಧ ಮುದ್ರೆಯಾಗುವುದು.

**ಪುಷ್ಪಮುದ್ರೆ** – ತರ್ಜನೀ ಬೆರಳಿನಿಂದ ಅಂಗುಷ್ಠದ ಕೆಳ ಪರ್ವವನ್ನು ಮುಟ್ಟಿದರೆ ಪುಷ್ಪ ಮುದ್ರೆಯಾಗುವುದು.

**ಧೂಪ ಮುದ್ರೆ** – ಅಂಗುಷ್ಠದಿಂದ ಮಧ್ಯಮ ಬೆರಳ ಬುಡವನ್ನು ಸ್ಪರ್ಶಿಸುವುದು.

**ನೈವೇದ್ಯ ಮುದ್ರೆ** – ಅಂಗುಷ್ಠದಿಂದ ಅನಾಮಿಕ ಬೆರಳಿನ ಬುಡವನ್ನು ಸ್ಪರ್ಶಿಸಿದರೆ ನೈವೇದ್ಯ ಮುದ್ರೆಯಾಗುತ್ತದೆ.

ಗಂಧಾದಿಗಳ ಅನುಕೂಲತೆ ಇಲ್ಲದಿರುವಾಗ ಈ ಮುದ್ರೆಗಳು ಗಂಧಾದಿ ಉಪಚಾರ ಪೂಜೆಯನ್ನು ಅರ್ಪಿಸಲು ಅತ್ಯುಪಯುಕ್ತವಾಗಿವೆ.

- **ಸುಲಭ ಉಪಚಾರ ಪೂಜೆ :**

ಪುರುಷಸೂಕ್ತದಿಂದಲೇ ಹದಿನಾರು ಪೂಜೋಪಚಾರಗಳನ್ನು ಮಾಡಲು ಸಂಹಿತೆಗಳು ಅನುಮತಿ ಇತ್ತಿವೆ.

ಪ್ರತಿದಿನ ದೇವರಿಗೆ ಅರವತ್ತನಾಲ್ಕು ಉಪಚಾರ ಪೂಜೆಯನ್ನು ಮಾಡಬೇಕೆಂದು ತಂತ್ರಸಾರ ತಿಳಿಸಿದೆ. ಇವುಗಳಲ್ಲಿ ಸುಗಂಧ, ತೈಲಾಭ್ಯಂಗ, ಉಷ್ಣೋದಕ ಸ್ನಾನ ಇವೇ ಮೊದಲಾದವುಗಳು ಸೇರಿವೆ.

ಇವುಗಳು ಇಲ್ಲದಿರುವಾಗ ಆಯಾಯ ಮಂತ್ರವನ್ನಾದರೂ ಜಪಿಸಿದರೆ ಅವುಗಳನ್ನು ಭಗವಂತನಿಗೆ ನೀಡಿದ ಫಲವು ದೊರೆಯುವುದು.

ಚತುಃಷಷ್ಟ್ಯುಪಚಾರಾಣಾಮಭಾವೇ ತನ್ಮನುಂ ಜಪೇತ್ ।
ತತ್ತ್ವದೇವ ಫಲಂ ವಿಂದೇತ್ ಸಾಧಕಃ ಸ್ಥಿರಮಾನಸಃ ॥ – ಪಂಚರಾತ್ರ

ಆಚಮನೀಯಮ್ :

ಅಚಮನವನ್ನು ಮೂರು ಬಾರಿ ಕೊಡಬೇಕು. ಸ್ನಾನಾನಂತರ, ವಸ್ತ್ರ, ನೈವೇದ್ಯ ಕಾಲಗಳಲ್ಲಿ ಆಚಮನವನ್ನು ಭಗವಂತನಿಗೆ ಕೊಡಬೇಕು. ನೊರೆ ಇಲ್ಲದ ತಿಳಿಯಾದ ನೀರನ್ನೆ ಆಚಮನಕ್ಕೆ ಕೊಡಬೇಕು.

ಆಚಮನೀಯಂ ಪ್ರದಾತವ್ಯಮುಪಚಾರಾಂತರಾಂತರೇ ।
ಸ್ನಾನೇ ವಸ್ತ್ರೇ ಚ ನೈವೇದ್ಯೇ ದದ್ಯಾತ್ ಆಚಮನೀಯಕಮ್ ।
ಉದಕಂ ದೀಯತೇ ಯತ್ತು ಪ್ರಸನ್ನಂ ಫೇನವರ್ಜಿತಮ್ ।
ಆಚಮನಾಯ ದೇವೇಭ್ಯಃ ತದಾಚಮನಮಿಷ್ಯತೇ ॥

- ಹದಿನೆಂಟು ಉಪಚಾರಗಳು :[3]

ಆಸನಂ–ಸ್ವಾಗತಂ–ಪಾದ್ಯಂ–ಅರ್ಘ್ಯಮಾಚಮನೀಯಕಂ ।
ಸ್ನಾನಂ–ವಸ್ತ್ರೋಪವೀತಂ ಚ ಭೂಷಣಾನಿ ಚ ಸರ್ವಶಃ ॥
ಗಂಧಂ ಪುಷ್ಪಂ ತಥಾ ಧೂಪಂ ದೀಪಮನ್ನಂ ಚ ತರ್ಪಣಂ ।
ಮಾಲ್ಯಾನುಲೇಪನೇ ಚೈವ ನಮಸ್ಕಾರ ಪ್ರದಕ್ಷಿಣೇ ॥

- ಹದಿನಾರು ಉಪಚಾರಗಳು :[4]

ಆಸನಂ ಸ್ವಾಗತಂ ಪಾದ್ಯಮರ್ಘ್ಯಮಾಚಮನೀಯಕಮ್ ।
ಮಧುಪರ್ಕಾಚಮನ ಸ್ನಾನಂ ವಸನಾಭರಣಾನಿ ಚ ।
ಗಂಧಪುಷ್ಪೇ ಧೂಪದೀಪೌ ನೈವೇದ್ಯಂ ವಂದನಂ ತಥಾ ॥

---

3. ಆಸನ, ಸ್ವಾಗತ, ಪಾದ್ಯ, ಅರ್ಘ್ಯ, ಆಚಮನ, ಸ್ನಾನ, ವಸ್ತ್ರ, ಯಜ್ಞೋಪವೀತ, ಭೂಷಣಗಳು, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ತರ್ಪಣ, ಪುಷ್ಪಮಾಲೆ ಅನುಲೇಪನ, ನಮಸ್ಕಾರ, ಪ್ರದಕ್ಷಿಣೆಗಳು. ಹೀಗೆ ಹದಿನೆಂಟು ಉಪಚಾರಗಳು.
4. ಆಸನ, ಸ್ವಾಗತ, ಪಾದ್ಯ, ಅರ್ಘ್ಯ, ಆಚಮನ, ಮಧುಪರ್ಕ, ಪುನರಾಚಮನ, ಸ್ನಾನ, ವಸ್ತ್ರ, ಆಭರಣ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ನಮಸ್ಕಾರ. ಹೀಗೆ ಹದಿನಾರು ಉಪಚಾರಗಳಿವೆ.

- **ದಶೋಪಚಾರ ಪೂಜೆ :**

ಗಂಧದಿಂದ ಆರಂಭಿಸಿ ನಮಸ್ಕಾರದವರೆಗೆ ಇರುವ ಹತ್ತು ಪೂಜೆಗಳು ದಶೋಪಚಾರವೆನಿಸಿವೆ.

**ಗಂಧಪುಷ್ಪಂ ತಥಾ ಧೂಪಂ ದೀಪಂ ನೈವೇದ್ಯಮೇವ ಚ ।**
**ಗಂಧಾದಿಕಾ ನಿವೇದ್ಯಾಂತಾ ಪೂಜಾ ಪಂಚೋಪಚಾರಿಕಾ ॥**

- **ಉಪಚಾರಗಳನ್ನು ಕೊಡುವ ಕ್ರಮ :**

ಆಸನವನ್ನು ಮೊದಲು ನೀಡಬೇಕು. ಪುಷ್ಪದಿಂದಾಗಲೀ ಮರದ ಆಸನವಾಗಲೀ ರಜತಾಸನವಾಗಲೀ ಕೊಡಬಹುದು.

**ಆಸನಂ ಪ್ರಥಮಂ ದದ್ಯಾತ್ ಪೌಷ್ಪಂ ದಾರವಮೇವ ವಾ ।**

ಪಾದವನ್ನು ತೊಳೆಯಲು ಬೇಕಾದ ನೀರನ್ನು ಪಾದ್ಯವೆನ್ನುವರು. ಪಾದ್ಯವನ್ನು ಬಂಗಾರದ ಪಾತ್ರೆಯಿಂದ ಕೊಡಬೇಕು ಅಥವಾ ಶಂಖದಿಂದಲಾದರೂ ಕೊಡಬಹುದು.

**ಮಧುಪರ್ಕಂ :**

ಹದಿನಾರು ಪೂಜೆಗಳಲ್ಲಿ ನಾಲ್ಕನೇ ಪೂಜೆಯೇ ಮಧುಪರ್ಕ ಪೂಜೆಯು.

**ಅರ್ಘ್ಯಂ ಪಾದ್ಯಂ ಚಾಚಮನಂ ಮಧುಪರ್ಕಂ ತಥೈವ ಚ ।**

ಮಧುಪರ್ಕದಲ್ಲಿ ಮೊಸರು, ಘೃತ, ನೀರು, ಜೇನು ಹಾಗೂ ಸಕ್ಕರೆ ಇವುಗಳು ಸೇರಿರುತ್ತವೆ. ಇದು ಎಲ್ಲಾ ದೇವತೆಗಳಿಗೂ ಪ್ರಿಯವಾದದ್ದು.

**ದಧಿ–ಸರ್ಪಿರ್ಜಲಂ ಕ್ಷೌದ್ರಂ ಸಿತಾಃ ಚೈತೈಶ್ಚ ಪಂಚಭಿಃ ।**
**ಪ್ರೋಚ್ಯತೇ ಮಧುಪರ್ಕಸ್ತು ಸರ್ವದೇವೌಘತುಷ್ಟಯೇ ॥**

– ಕಾಮಿಕಾಗಮ

ಮಧುಪರ್ಕವನ್ನು ಅರ್ಘ್ಯಾದಿ ಉಪಚಾರದಂತೆ ಪ್ರತಿಮೆಯ ಬಲ ಕೈಯಲ್ಲಿ ನೀಡಬೇಕು. ಮಧುಪರ್ಕವನ್ನು ಚತುರ್ಮುಖ ಬ್ರಹ್ಮದೇವನು ಭಗವಂತನಿಗೆ ಅರ್ಪಿಸುವನೆಂದು ಹೇಳಲಾಗಿದೆ. ಮಧುಪರ್ಕ ಅರ್ಪಿಸುವಾಗ ಮಂತ್ರ

**ವಿರಾಜೋ ದೋಹೋಽಸಿ । ವಿರಾಜೋ ದೋಹಮಶೀಯ ।**

**ಮಯಿ ಪದ್ಯಾಯೈ ವಿರಾಜಃ ।**

ಕೆಲವು ಕಡೆ ಮೊಸರು ಹಾಗೂ ಜೇನುತುಪ್ಪವೆರಡರ ಮಿಶ್ರಣವೆ ಮಧುಪರ್ಕವೆನ್ನಲಾಗಿದೆ. ಇದು ಇಲ್ಲದಿರುವಾಗ ಮಾತ್ರ ನೀರನ್ನೇ ಮಧುಪರ್ಕವನ್ನಾಗಿ ಬಳಸುವರು.

**ಅತ್ರ ಸರ್ವತ್ರ ದಧಿ–ಮಧೂನಿ ಮಧುಪರ್ಕಶಬ್ದಾರ್ಥ ।**
**ತದಲಾಭೇ ಏವ ಉದಕ ದಾನಮಿತಿ ಜ್ಞೇಯಂ ॥** – ಪೂ.ಕ.

ನಿತ್ಯ ಪೂಜೆಯಲ್ಲಿ ಮಧುಪರ್ಕಂ ಸಮರ್ಪಯಾಮಿ ಎಂದು ಮೂಲ ಮಂತ್ರ ಹೇಳಿದರೆ ಸಾಕು. ಮಧುಪರ್ಕ ಬೇಕಿಲ್ಲವೆಂದು ಪುಷ್ಕರ ಸಂಹಿತೆ ಹೇಳಿದ.

**ನ ನಿತ್ಯ ಯಜನೇಷ್ವಿಷ್ಟಂ ಮಧುಪರ್ಕ ನಿವೇದನಂ ।**
**ನೈಮಿತ್ತಿಕೇಷು ತಚ್ಚಸ್ತಂ ಪ್ರತಿಷ್ಠಾ ಸ್ನಪನಾದಿಷು ॥** –ಪುಷ್ಕರಸಂಹಿತೆ

ಷೋಡಷ ಉಪಚಾರದಲ್ಲಿ ಗಂಧ ಶಬ್ದದಿಂದ ಅಕ್ಷತೆಯನ್ನು, ಪುಷ್ಪ ಶಬ್ದದಿಂದ ಮಂತ್ರ ಪುಷ್ಪ ಹಾಗೂ ತುಲಸ್ಯಾದಿಗಳನ್ನು ಸ್ವೀಕರಿಸಬೇಕು. ಧೂಪ ಶಬ್ದದಿಂದ ನೈವೇದ್ಯಾನಂತರ ಮಾಡುವ ಪುನರ್ಧೂಪವನ್ನು, ದೀಪ ಶಬ್ದದಿಂದ ಮಹಾನೀರಾಜನವನ್ನು, ನಮಸ್ಕಾರ ಶಬ್ದದಿಂದ ಪ್ರದಕ್ಷಿಣೆಯನ್ನು ಬೇರೆ ಪ್ರಮಾಣದಲ್ಲಿ ಹೇಳಿದ ಲಕ್ಷಣವನ್ನು ಸ್ವೀಕರಿಸಬೇಕು. – ಪೂ.ಕ.

ನಾರಾಯಣ ಪಂಡಿತಾಚಾರ್ಯರು ಆರು ಅನೂಪಚಾರಗಳನ್ನೂ ಹೇಳಿದ್ದಾರೆ.

**ಮುಖವಾಸಶ್ಚ ತಾಂಬೂಲಂ ದರ್ಪಣಂ ಛತ್ರ–ಚಾಮರೇ ।**

**ಪಾದುಕೇ ಚೇತಿ ವಿಜ್ಞೇಯಂ ಉಪಚಾರಃ ಪರೇ ಬುಧೈಃ ॥**

**12. ಪೀಠಪೂಜೆಯ ವಿವರ :**

ಮಂಟಪದಲ್ಲಿರುವ ಚಿಕ್ಕದಾದ, ನಾಲ್ಕು ದಿಕ್ಕಿಗೂ ಸೋಪಾನಗಳಿರುವ,

ದೇವರನ್ನು ಕೂಡಿಸಲು ಇರುವ ದೇವರ ಮಂದಾಸನದಲ್ಲಿ (ಪೀಠ) ಸನ್ನಿಹಿತರಾಗಿರುವ ದೇವತೆಗಳನ್ನು ಪುಷ್ಪಾದಿಗಳನ್ನು ಪೂಜಿಸಿ ಸನ್ನಿಧಾನವನ್ನು ಚಿಂತಿಸುವುದೇ "ಪೀಠಪೂಜೆ".

- **ಪೀಠದೇವತೆಗಳ ಸ್ವರೂಪ :**

ಎಂಟು ದಿಕ್ಕಿನಲ್ಲಿರುವ ಸಕಲ ದೇವತೆಗಳೂ ಪುರುಷಾಕಾರ ಹೊಂದಿರುವರು. ಮುಖಗಳೂ ಮಾತ್ರ ಸಿಂಹಾಕಾರ ಹಾಗೂ ಚತುರ್ಭುಜಗಳಾಗಿರುವರು ಪೂರ್ವದ ದೇವತೆಯ ಬಣ್ಣ ಬಿಳಿಯಾಗಿದ್ದರೆ, ಉಳಿದವರು ಕೆಂಪು ಬಣ್ಣ.

ಇವರು ಪೀಠದಲ್ಲಿರುವ ಭಗವಂತನನ್ನು ನಮಸ್ಕರಿಸುತ್ತಿರುವರು. **"ಚತುರ್ಭುಜಾಃ ಸಿಂಹವಕ್ತ್ರಾಃ ಸಿತಾಃ ಪೂರ್ವೇಽರುಣಾಃ ಪರೇ."**

ಪೀಠಪೂಜೆಯ ಮೊದಲು ಪೀಠ ಸ್ಥಾಪಿಸುವ ಪ್ರದೇಶದಲ್ಲಿ ಮಧ್ಯದಲ್ಲಿ ಪರದೇವತೆ ಎನಿಸಿರುವ ನಾರಾಯಣನನ್ನು ಮೂಲಮಂತ್ರದಿಂದ ಆವಾಹಿಸಬೇಕು ಹಾಗೂ ತುಲಸೀದಳವನ್ನು ಸಮರ್ಪಿಸುವುದು.

ಈ ಪೀಠದ ಎಡಭಾಗದಲ್ಲಿ ಆದ್ಯ ಗುರುವೆನಿಸಿದ ಮುಖ್ಯ ಪ್ರಾಣದೇವರನ್ನು ಆವಾಹಿಸುವುದು. ಬಲಭಾಗದಲ್ಲಿ ಬ್ರಹ್ಮ-ರುದ್ರಾದಿ ಸಕಲ ದೇವತೆಗಳನ್ನೂ ಆವಾಹಿಸುವುದು ಪುನಃ ಎಡಭಾಗದಲ್ಲಿ ಸನಕಾದಿ ಸರ್ವಗುರುಗಳನ್ನೂ ಆವಾಹಿಸಬೇಕು.

- **ಗುರುಗಳ ಸ್ವರೂಪ :**

ಗುರುಗಳು ಹಳದಿ ಬಣ್ಣದಿಂದ ಕೂಡಿದ್ದು, ಬಿಳಿ ಬಟ್ಟೆಯುಟ್ಟು ಕೈಯಲ್ಲಿ ಪುಸ್ತಕವನ್ನೂ ಮತ್ತೊಂದು ಕೈಯಲ್ಲಿ "ಜ್ಞಾನ ಮುದ್ರೆ"ಯನ್ನು ಹೊಂದಿರುವರು.

**ಶ್ವೇತಾಂಬರ ಧರಾ ಗೌರಾಃ ಗುರವಃ ಪುಸ್ತಕಾನ್ವಿತಾಃ ।**
**ವ್ಯಾಖ್ಯಾನಮುದ್ರಯಾ ಯುಕ್ತಾಃ ಧ್ಯಾತವ್ಯಾಃ ಪೂಜನಾದಿಷು ॥**

- **ಪೀಠ ಪೂಜೆಯಲ್ಲಿ ಪೂರ್ವದಿಕ್ಕು :**

ದೇವರಿಗೂ ಹಾಗೂ ಪೂಜೆ ಮಾಡುವವನ ಮಧ್ಯೆ ಇರುವ ಜಾಗವೇ

ಪೂಜೆಯಲ್ಲಿ ಪೂರ್ವದಿಕ್ಕೆಂದು ವ್ಯವಹಾರವು. ದೇವರ ಮುಖವನ್ನೇ ಪೂರ್ವವೆಂದು ಪರಿಕಲ್ಪಿಸಿಕೊಂಡು ದೇವರ ಎಡಭಾಗವೇ ದಕ್ಷಿಣವೆಂದು ಬಲಭಾಗವೇ ಉತ್ತರವೆಂದು, ಹಿಂಭಾಗವೇ ಪಶ್ಚಿಮವೆಂದು, ತಿಳಿಯಬೇಕು. ಆಗ್ನೇಯಾದಿ ವಿದಿಕ್ಕುಗಳನ್ನು ಹೀಗೆಯೇ ತಿಳಿಯುವುದು.

**ದೇವ ಪೂಜಕಯೋರಂತಃ ಪೂರ್ವಾ ಸಾ ದಿಗಿಹೋಚ್ಯತೇ ।**
**ದೇವಸ್ಯ ಮುಖಮಾರಭ್ಯ ದಿಶಂ ಪ್ರಾಚೀಂ ಪ್ರಕಲ್ಪಯೇತ್ ॥**

- **ಪೀಠದ ನಾಲ್ಕು ಪಾದಗಳ ಕೆಳಗಿರುವ ದೇವತೆಗಳು :**

  ಪೀಠದ ನಾಲ್ಕು ಕಾಲುಗಳಲ್ಲಿ ಆಗ್ನೇಯದಲ್ಲಿ ಗರುಡ, ನೈರ್ಋತ್ಯದಲ್ಲಿ ವ್ಯಾಸರನ್ನೂ, ವಾಯುವ್ಯದಲ್ಲಿ ದುರ್ಗೆಯನ್ನೂ ಈಶಾನ್ಯದಲ್ಲಿ ಸರಸ್ವತಿಯನ್ನು ಸನ್ನಿಹಿತರಾಗಿರೆಂದು ಪುಷ್ಪವೇರಿಸಿ ಧ್ಯಾನಿಸುವುದು.

- **ಪೀಠದ ಪಾದಗಳ ಮೇಲಿರುವ ಹಲಗೆಯಲ್ಲಿರುವ ದೇವತೆಗಳು :**

  ಆಗ್ನೇಯ ಮೂಲೆಯಲ್ಲಿ ಯಮಧರ್ಮ, ನೈರುತ್ಯ–ವಾಯುದೇವ, ವಾಯುವ್ಯ ಮೂಲೆ ಶಿವನನ್ನೂ, ಈಶಾನ್ಯದಲ್ಲಿ ಇಂದ್ರದೇವರನ್ನೂ ಪೂಜಿಸುವುದು.

  ಇವುಗಳು ಕ್ರಮವಾಗಿ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯಗಳಿಗೆ ಅಧಿಪತಿಗಳಾಗಿರುವರು.

  **ಧರ್ಮಂ ಜ್ಞಾನಂ ಚ ವೈರಾಗ್ಯಮೈಶ್ವರ್ಯಂ ಚೈವ ಕೋಣಗಾನ್ ।**

- **ಪಾದಗಳ ಮೇಲ್ಭಾಗದಲ್ಲಿರುವ ದೇವತೆಗಳು :**

  ವಿದಿಕ್ಕುಗಳ ಒಳಭಾಗದಲ್ಲಿ ಎಂದರೆ ಈಶಾನ್ಯ ಹಾಗೂ ಆಗ್ನೇಯದ ಮಧ್ಯಭಾಗವಾದ ಪೂರ್ವಾದಿ ದಿಕ್ಕುಗಳಲ್ಲಿ ಪೂರ್ವದಲ್ಲಿ ಕ್ರಮವಾಗಿ ಅಧರ್ಮ ಮೊದಲಾದ ಗುಣಗಳಿಗೆ ಅಭಿಮಾನಿಗಳಾದ, ಪೂರ್ವದಲ್ಲಿ ಅಧರ್ಮಾಧಿಪತಿಯನ್ನು, ದಕ್ಷಿಣದಲ್ಲಿ ಅಜ್ಞಾನಾಧಿಪತಿಯಾದ ದುರ್ಗೆಯನ್ನು, ಪಶ್ಚಿಮದಲ್ಲಿ ಅವೈರಾಗ್ಯಾಧಿಪತಿ ಕಾಮನನ್ನು, ಉತ್ತರದಲ್ಲಿ ಅನೈಶ್ವರ್ಯಾಧಿಪತಿಯಾದ ರುದ್ರದೇವನನ್ನು ಆವಾಹಿಸುವುದು.

ಇವರನ್ನೂ ಪೂಜಿಸದಿದ್ದರೆ ನಮಗೆ ಅಧರ್ಮ, ಅಜ್ಞಾನಾದಿಗಳನ್ನೇ ನೀಡುವರಾದ್ದರಿಂದ ಈ ದೋಷಗಳು ಬರದಿರಲು ಇವರನ್ನು ಪೂಜಿಸಬೇಕು.

**ಅಪೂಜಿತಾಃ ಅಧರ್ಮಾದಿದಾತಾರಃ ತೇ ತಥಾಭಿಧಾಃ।**

- **ಪೀಠಕ್ಕೆ ಆಧಾರ ದೇವತೆಗಳು :**

ಪೂಜಕನು ಪೂಜಿಸುತ್ತಿರುವ ಪೀಠದ ಕೆಳಗಡೆ ಒಂದು ಹಗ್ಗಕ್ಕೆ ಕಲ್ಲನ್ನು ಕಟ್ಟಿ ತೂಗಿಸಿದಾಗ ಎಲ್ಲದಕ್ಕೂ ಕೆಳಗಡೆ ಬ್ರಹ್ಮಾಂಡದ ಅಡಿಯಲ್ಲಿ ವಿರಾಡ್ರೂಪಿಯಾದ ಪರಮಪುರುಷನಿರುವನೆಂದು ಚಿಂತಿಸುವುದು. ಪರಮಪುರುಷನೇ ಬ್ರಹ್ಮಾಂಡವನ್ನು ತಲೆಯ ಮೇಲೆ ಹೊತ್ತು ಪೂರ್ವಾಭಿಮುಖನಾಗಿ ನಿಂತಿರುವನು. ಅವನ ಮೇಲೆ ಒಂಭತ್ತು ಆವರಣಗಳಿಂದ ಕೂಡಿದ ಬ್ರಹ್ಮಾಂಡ ಆಧಾರವಾಗಿರುವ ಶಕ್ತಿನಾಮಕಳಾದ ರಮಾದೇವಿಯನ್ನು ಚಿಂತಿಸುವುದು.

ಶಕ್ತಿನಾಮಕಳಾದ ಲಕ್ಷ್ಮೀದೇವಿಯನ್ನಾಶ್ರಯಿಸಿಕೊಂಡು ಬ್ರಹ್ಮಾಂಡವನ್ನು ಧರಿಸಿರುವ ವಿಷ್ಣುಕೂರ್ಮನು ಕುಳಿತಿರುವನು. ಈ ಬ್ರಹ್ಮಾಂಡದ ಒಳಗೆ ಅಗಾಧ ಘನೋದಕವಿರುತ್ತದೆ. ಈ ಜಲಕ್ಕೆ ಆಧಾರನಾಗಿರುವ ಇನ್ನೊಂದು ಚಿಕ್ಕ ವಿಷ್ಣುಕೂರ್ಮನು ಬ್ರಹ್ಮಾಂಡಾಧಾರನಾದ ವಿಷ್ಣುಕೂರ್ಮವನ್ನು ಆಶ್ರಯಿಸಿರುವನು. ಅವನನ್ನು ಆಶ್ರಯಿಸಿ ವಾಯುಕೂರ್ಮನು ಇರುವನು. ಇವನ ಪುಚ್ಛ (ಬೆನ್ನು) ಆಶ್ರಯಿಸಿ ಶೇಷನಿರುವನು. ಅವನ ಮೇಲೆ ಭೂಮಿಯು ಹಾಗೂ ಭೂಮಿಗೆ ಅಭಿಮಾನಿ ದೇವತೆಯೂ ಇರುವಳು. ಈ ಭೂಮಿಯ ಮಧ್ಯದಲ್ಲಿ ಕ್ಷೀರ ಸಮುದ್ರ ಇರುತ್ತದೆ. ಕ್ಷೀರ ಸಮುದ್ರದ ಮಧ್ಯದಲ್ಲಿ ಶ್ವೇತದ್ವೀಪವು, ಶ್ವೇತದ್ವೀಪದ ಮಧ್ಯದಲ್ಲಿಯೇ ರತ್ನಖಚಿತ ಸುವರ್ಣ ಮಂಟಪವಿದೆ. ಇದೆ ಪೂಜಕನ ಪೂಜಾ ಮಂಟಪವು.

ಹೀಗೆ ಪರಮ ಪುರುಷನನ್ನಾರಂಭಿಸಿ ಶ್ವೇತದ್ವೀಪ ಹಾಗೂ ಅದರಲ್ಲಿರುವ ಮಂಟಪಗಳವರೆಗೆ, ಪೀಠದ ಕೆಳಗೆ ಇರುವ ಆಧಾರಗಳನ್ನು ತಿಳಿದು ಪೂಜಿಸುವುದು.

**ಪರಮಃ ಪುರುಷೋ ಮಧ್ಯೇ ಶಕ್ತಿರಾಧಾರರೂಪಿಣೀ ।**
**ಕೂರ್ಮೋಽನಂತಶ್ಚ ಪೃಥವೀ ಕ್ಷೀರಸಾಗರ ಏವ ಚ ॥**
**ಶ್ವೇತದ್ವೀಪೋ ಮಂಟಪಶ್ಚ ದಿವ್ಯರತ್ನಮಯೋ ಮಹಾನ್ ॥**

**ಪೀಠದ ಮೇಲ್ಭಾಗದಲ್ಲಿರುವ ದೇವತೆಗಳು :**

ದೇವರನ್ನು ಪೂಜಿಸುವ ಪೀಠವು ನಾಲ್ಕು ಮೂಲೆಗಳಿಂದ ಕೂಡಿರಬೇಕು. ಆ ಪೀಠದಲ್ಲಿ ಆರು ದಳಗಳಲ್ಲಿರುವ ಪದ್ಮವಿದೆಯಂದು ಧ್ಯಾನಿಸುವುದು. ಆ ಪದ್ಮದ ಮಧ್ಯದಲ್ಲಿ ಎಂಟು ದಳಗಳುಳ್ಳ ಇನ್ನೊಂದು ಪದ್ಮವನ್ನು ಚಿಂತಿಸಬೇಕು.

**ಚತುಷ್ಕೋಣಂ ತು ಪೀಠಂ ಸ್ಯಾತ್ ಷಟ್ಕೋಣಂ ತಸ್ಯ ಮಧ್ಯತಃ ।**
**ತನ್ಮಧ್ಯೇಽಷ್ಟ ಪದ್ಮಂ ತತ್ರ ಪದ್ಮೇಶಮರ್ಚಯೇತ್ ॥**

ಹಿಂದೆ ಹೇಳಿದ ಶ್ವೇತದ್ವೀಪ ಹಾಗೂ ಸುವರ್ಣ ಮಂಟಪಗಳೂ, ಈಗ ಹೇಳಿದ ಆರು ದಳ ಪದ್ಮ ಹಾಗೂ ಎಂಟು ಪದ್ಮಗಳೂ ಸಾಕ್ಷಾತ್ ಲಕ್ಷ್ಮೀದೇವಿಯೇ ಬಹುರೂಪಗಳನ್ನು ಧರಿಸಿರುವಳು.

**ಪದ್ಮಮೇತತ್ ತ್ರಯಂ ದೇವೀಂ ರಮೈವ ಬಹುರೂಪಿಣೀ ।**

– ತಂತ್ರಸಾರ

- **ಆರು ದಳ ಪದ್ಮದಲ್ಲಿ ಪೂಜಿಸಬೇಕಾದ ದೇವತೆಗಳು :**

ಪೀಠದ ಮೇಲಿರುವ ಆರು ದಳ ಪದ್ಮದಲ್ಲಿ ಪೂರ್ವ ದಿಕ್ಕಿನ ಮೂರು ದಳಗಳಲ್ಲಿ ಪ್ರದಕ್ಷಿಣಾಕಾರವಾಗಿ ಕ್ರಮವಾಗಿ ಸೂರ್ಯ, ಚಂದ್ರ, ಅಗ್ನಿಗಳನ್ನೂ ವೃತ್ತಾಕಾರವಾಗಿ ಭಗವಂತನಿಗೆ ದೀಪದಂತಿರುವರು.

ಪಶ್ಚಿಮದ (ಹಿಂದಿನ) ಮೂರು ದಳಗಳಲ್ಲಿ ಪ್ರದಕ್ಷಿಣಾಕಾರವಾಗಿ ಸತ್ವಾಭಿಮಾನಿ ಶ್ರೀದೇವಿಯನ್ನೂ, ರಜೋಭಿಮಾನೀ ಭೂದೇವಿಯನ್ನೂ, ತಮೋಭಿಮಾನಿ ದುರ್ಗೆಯನ್ನೂ ಪೂಜಿಸಬೇಕು.

**ಸೂರ್ಯ–ಸೋಮ–ಹುತಶಾಶ್ಚ ಪದ್ಮೇ ಶ್ರೀ ಸ್ತ್ರೀಗುಣಾತ್ಮಿಕಾ ।**

–ತಂತ್ರಸಾರ

ಪೀಠಕ್ಕಿರುವ ನಾಲ್ಕು ದಿಕ್ಕಿನ ನಾಲ್ಕು ಸೋಪಾನ (ಮೆಟ್ಟಿಲು)ಗಳಲ್ಲಿ ಪೂರ್ವದಲ್ಲಿ **"ಆತ್ಮ"** ಎಂಬ ಭಗವದ್‌ಮೂರ್ತಿಯನ್ನು, ದಕ್ಷಿಣದ ಸೋಪಾನದಲ್ಲಿ **"ಅಂತರಾತ್ಮ"**ನನ್ನು ಪಶ್ಚಿಮದ ಮೆಟ್ಟಿಲಿನಲ್ಲಿ **"ಪರಮಾತ್ಮ"**ನನ್ನು ಉತ್ತರದಲ್ಲಿ **"ಜ್ಞಾನಾತ್ಮ"**ನನ್ನು ಪೂಜಿಸಬೇಕು. ಇವು ಸೋಪಾನ ದೇವತೆಗಳು.

**ಆತ್ಮಾಂತರಾತ್ಮ ಪರಮಜ್ಞಾನಾತ್ಮನಾಶ್ಚ ಮೂರ್ತಯಃ ।** –ತಂತ್ರಸಾರ

ಅಷ್ಟದಳ ಕಮಲದ ಮಧ್ಯದಲ್ಲಿ ಎಂಟು ದಳದ ಕಮಲವನ್ನು ಚಿಂತಿಸಿ, ಅದರಲ್ಲೂ ಭಗವಂತನ ಎಂಟು ಮೂರ್ತಿಗಳನ್ನು ಕೊನೆಗೆ ಮಧ್ಯದಲ್ಲಿ ಒಂದು ಮೂರ್ತಿಯನ್ನು ಚಿಂತಿಸಬೇಕು. ಇವು ಭಗವಂತನ ಒಂಭತ್ತು ಸ್ತ್ರೀರೂಪಗಳು ಇವುಗಳಲ್ಲಿ ವಿಮಲಾ ಛತ್ರಧಾರಿಣೀ, ಉತ್ಕರ್ಷಿಣೀ ಚಾಮರಧಾರಿಣೀ, ಜ್ಞಾನಾ–ಬೀಸಣಿಗೆ, ಕ್ರಿಯಾ–ದರ್ಪಣ ಧಾರಿಣೀ, **ಯೋಗಾ** = ಗಾನಕರ್ತ್ರೀ, **ಪ್ರಹ್ವೀ** = ನರ್ತನಕರ್ತ್ರೀ, **ಸತ್ಯಾ** = ವಾದ್ಯವಾದಿನೀ, **ಈಶಾನಾ** = ಸ್ತೋತ್ರಕರ್ತ್ರೀ, ಮಧ್ಯದಲ್ಲಿ ಅನುಗ್ರಹಾ ಎಂಬ ಶಕ್ತಿಯು ಪೂಜಕರಿಗೆ ಅನುಗ್ರಹ ಮಾಡಲು ಇರುವುದು. ಇವುಗಳ ಭಗವಂತನದೆ ಶಕ್ತಿ ರೂಪಗಳು, ಇವುಗಳಲ್ಲಿ ಭೇದವಿಲ್ಲ. ಇವೇ ಹೆಸರುಗಳು ಭಗವಂತನ ಅನುಗ್ರಹದಿಂದ ಭಗವಂತನ ಸಮೀಪ ಪೂಜಿಸಲ್ಪಡುವ ಲಕ್ಷ್ಮೀ, ಬ್ರಹ್ಮಾ, ರುದ್ರಾದಿಗಳಿಗೂ ಇವೆ.

**ವಿಮಲೋತ್ಕರ್ಷಿಣೀ ಜ್ಞಾನಾ ಕ್ರಿಯಾಯೋಗಾ ತಥೈವ ಚ ।**
**ಪ್ರಹ್ವೀ ಸತ್ಯಾ ತಥೇಶಾನಾಽನುಗ್ರಹಾ ಚೇತಿ ಶಕ್ತಯಃ ॥**
**ಅಷ್ಟದಿಕ್ಷು ಚ ಮಧ್ಯೇ ಚ ಸ್ವರೂಪಾಣ್ಯೈವ ತಾ ಹರೇಃ ॥**
**ವಿಷ್ಣೋಃ ಶ್ರಿಯೋ ಬ್ರಹ್ಮಣಶ್ಚ ವಾಯೋಃ ಸಂಕರ್ಷಣಸ್ಯ ಚ ।**
**ಗರುಡಸ್ಯ ಚ ಸಂಪ್ರೋಕ್ತಾ ಪ್ರತ್ಯೇಕಂ ನವಮೂರ್ತಯಃ ॥**
**ಗೃಹೀತ ಚಾಮರಾ ದಿವ್ಯಾ ವಿಮಲಾದ್ಯಾಶ್ಚ ಶಕ್ತಯಃ ॥** –ವಾಸಿಷ್ಠಸ್ಮೃತಿ

"ಅನುಗ್ರಹ"ವೆಂಬ ಭಗವಂತನ ಶಕ್ತಿಯ ಮೇಲೆ ಯೋಗಾಸನ ರೂಪನಾದ ಹಾಸಿಗೆಯಾಗಿರುವ ಆದಿಶೇಷನನ್ನು ಸ್ಮರಿಸಿ ಪೂಜಿಸುವುದು.

ಭಗವಂತನಿಗೆ ಭೋಗ ಸ್ವರೂಪನಾದ್ದರಿಂದ ಭೋಗಕ್ಕಾಗಿ ನಿದ್ರೆ ಇಲ್ಲವಾದ್ದರಿಂದ ಇದೊಂದು "ಯೋಗ ನಿದ್ರೆ"ಯಾಗಿದೆ. ಅನುಗ್ರಹಾಖ್ಯ ವಿಷ್ಣು ಶಕ್ತಿಯು ವಿಷ್ಣುವಿನ ಹಾಸಿಗೆ ಸೇವೆಯನ್ನು ಮಾಡುತ್ತಿರುವ ಆದಿಶೇಷನನ್ನೂ ಧರಿಸಿರುವಳು. ಆದಿಶೇಷನ ಮೇಲೆ ಲಕ್ಷ್ಮ್ಯಾತ್ಮಕವಾದಿ "ಚಿತ್ರಾಸನ" ಎಂದರೆ ಹಾಸಿಗೆ ಮೇಲೆ ಹಾಸುವ ವಸ್ತ್ರವಾಗಿ ಲಕ್ಷ್ಮೀದೇವಿಯಿರುವಳು ಲಕ್ಷ್ಮೀದೇವಿಯ ಸಂಪರ್ಕವಿರದ ವಸ್ತುವನ್ನು ಭಗವಂತನು ಉಪಯೋಗಿಸುವುದಿಲ್ಲವಷ್ಟೇ. ಇಂತಹ ಪೀಠದ ಮೇಲೆ ಭಗವಂತನನ್ನು ಪೂಜಿಸುವುದು.

- **ತ್ರಿಕಾಲದಲ್ಲೂ ಪೂಜೆ ವಿಹಿತ – ಪೂಜೆಯ ಅವಶ್ಯಕತೆ ಹಾಗೂ ಫಲ :**

ಭಗವಂತನನ್ನು ಪೂಜಿಸದೆ ಭೋಜನವನ್ನು ಮಾಡುವ ಅಧಿಕಾರ ಬರುವುದಿಲ್ಲ. ಆದ್ದರಿಂದ ನಿತ್ಯವೂ ಎರಡು ಹೊತ್ತು ಭಗವಂತನನ್ನು ಪೂಜಿಸಬೇಕು. ಭಗವಂತನನ್ನು ಪೂಜಿಸಿದರೆ ಸರ್ವದೇವತೆಗಳೂ ಸಂತುಷ್ಟರಾಗುವರು. ಭಗವಂತನನ್ನು ಭಕ್ತಿಯಿಂದ ನಿತ್ಯವೂ ಅರ್ಚಿಸುವುದೇ ಜನ್ಮ ಸಾಫಲ್ಯ. ಕಾರಣ, ನಿತ್ಯ ಪೂಜೆ ಮಾಡುವವರಿಗೆ ನರಕದ ಭಯವಿರುವುದಿಲ್ಲ. ಭಕ್ತಿಯಿಂದ ದಿವಸಕ್ಕೆ ಒಂದು ಬಾರಿ ಪೂಜಿಸಿದರೂ ಸಾಕು ಭಗವಂತನು ಒಲಿಯುವನು. ಭಗವಂತನನ್ನು ಪೂಜಿಸದೆ ಚತುರ್ವಿಧ ಪುರುಷಾರ್ಥ ಹೊಂದುವುದು ದುಸ್ಸಾಧ್ಯ. ಆದ್ದರಿಂದ ದೈಹಿಕ ಶಕ್ತಿ ಇರುವಾಗಲೇ, ಇಂದ್ರಿಯ ಪಾಟವವಿರುವಾಗಲೇ ನಾರಾಯಣನನ್ನು ಪೂಜಿಸಿ ಕೃತಾರ್ಥರಾಗಬೇಕು. – ಕೃಷ್ಣಾಮೃತ–ಮಹಾರ್ಣವ.

ಭಗವಂತನಿಗೆ ಅರ್ಪಿಸದೆ ಏನನ್ನು ತಿನ್ನಲು ಬರುವುದಿಲ್ಲ. ಅಂತಹವನು ಸಾವಿರಾರು ವರ್ಷ ರೇತಸ್ಸು ಕೀವು, ಮೂತ್ರಾದಿ ಕುಂಡಗಳಲ್ಲಿ ವಾಸಿಸಬೇಕಾಗುತ್ತದೆ. ಆದ್ದರಿಂದ ಪೂಜೆಯು ಅತ್ಯವಶ್ಯಕವಾಗಿದೆ.

**ನೈವಾಶ್ನೀತ ನ ದದ್ಯಾದ್‌ವಾ ಕಿಂಚಿದಪ್ಯ ನಿವೇದಿತಮ್ ।**
**ಸ್ರಕ್ ಚಂದನಾದಿ ತಾಂಬೂಲಂ ಯೋ ಭುಂಕ್ತೇ ಹರ್ಯನರ್ಪಿತಂ ।**
**ನಿಮಜ್ಯ ನರಕೇ ಘೋರೇ ರೇತೋ ವಿಣ್ಮೂತ್ರಭಾಗ್ ಭವೇತ್ ॥**

–ಯೋಗ ದೀಪಿಕಾ



ಪ್ರಾತಃ, ಮಧ್ಯಾಹ್ನ, ಸಾಯಂಕಾಲ ಹೀಗೆ ದಿನಕ್ಕೆ ಮೂರು ಬಾರಿ ದೇವಪೂಜೆಯನ್ನು ಮಾಡಬೇಕು. ಅಶಕ್ಯವಾದಾಗ ಪ್ರಾತಃಕಾಲದಲ್ಲೇ ವಿಸ್ತಾರವಾಗಿ ಪೂಜೆಯನ್ನು ಮಾಡಬೇಕು. ಮಧ್ಯಾಹ್ನ ಹಾಗೂ ಸಂಜೆ ಹೂವನ್ನು ಏರಿಸಿ ಮಂಗಳಾರತಿ ಮಾಡಿದರೆ ಸಾಕು.

**ಪ್ರಾತರ್ಮಧ್ಯಂದಿನೇ ಸಾಯಂ ವಿಷ್ಣುಪೂಜಾಂ ಸಮಾಚರೇತ್ ।**

**ಅಶಕ್ತೌ ವಿಸ್ತರೇಣೈವ ಪ್ರಾತಃ ಸಂಪೂಜ್ಯ ಕೇಶವಮ್ ॥**

**ಮಧ್ಯಾಹ್ನೇ ಚೈವ ಸಾಯಂ ಚ ಪುಷ್ಪಾಂಜಲಿಮಪಿ ಕ್ಷಿಪೇತ್ ॥**

- **ಪೂಜೆ ಇಲ್ಲದೆ ಭೋಜನ ನಿಷಿದ್ಧ :**

**ಯೋ ಮೋಹಾದಥ ವಾऽऽಲಸ್ಯಾದ್ ಅಕೃತ್ವಾ ದೇವತಾರ್ಚನಂ ।**

**ಭುಂಕ್ತೇ ಸ ಯಾತಿ ನರಕಂ ಸೂಕರೇಷ್ವಪಿ ಜಾಯತೇ ॥**

ಯಾರು ಮೋಹದಿಂದ, ಆಲಸ್ಯದಿಂದ ಪೂಜಿಸದೆ ಊಟ ಮಾಡುವನೋ ಅವನು ನರಕವನ್ನುಭವಿಸಿ ನಂತರ ಸೂಕರ ಜಾತಿಯಲ್ಲಿ ಹುಟ್ಟುವನು.

## 13. ಪ್ರತಿಮಾವಾಹನ ಕ್ರಮ :

ಪೀಠಪೂಜೆಯನ್ನು ಮಾಡಿದ ನಂತರ ಆ ಪೂಜಿಸಿದ ಪೀಠವೇ ಅನಂತಾಸನವೆಂದು ತಿಳಿದು ಅಲ್ಲಿ ಶ್ರೀಹರಿಯ ಪ್ರತಿಮೆಯನ್ನು ಇಟ್ಟು ತನ್ನ ಹೃದಯದಲ್ಲಿರುವ ಬಿಂಬರೂಪಿಯನ್ನು ಆವಾಹಿಸುವುದು.

**ಪ್ರತಿಮೆ :**

ಪ್ರತಿಮೆಯಲ್ಲಿ ಭಗವಂತನ 513 ರೂಪಗಳಿವೆ. ಕಟ್ಟಿಗೆಯನ್ನು ಮಥಿಸಿದರೆ ಅಲ್ಲಿರುವ ಅಗ್ನಿ ಅಭಿವ್ಯಕ್ತವಾಗುವಂತೆ ಭಗವಂತನು ಆಯಾಯ ಪ್ರತಿಮೆಗಳಲ್ಲಿ ವ್ಯಕ್ತನಾಗುವನು.

**ತ್ರಯೋದಶಾಧಿಕಂ ರೂಪ ಶತಪಂಚಕಮಾಹಿತೇ ।**

**"ಪ್ರತಿಮಾಸು ಅಪ್ರಬುದ್ಧಾನಾಂ"** ಎಂಬಂತೆ ಸಾಧನ ಸಂಪನ್ನರಾದ ಪ್ರತಿಮಾರ್ಚಕರಿಗೆ ಅರಣಿಮಥನದ ಅಗ್ನಿಯಂತೆ ಬಹಿಃಪ್ರಕಾಶನಾಗಿ ತೋರುವನು.

- **ಎಂಟು ವಿಧ ಪ್ರತಿಮೆಗಳು :**

**ದಾರುಮಯೀ ಲೌಹೀ ಲೇಪ್ಯಾ ಲೇಖ್ಯಾ ಚ ಸೈಕತೀ ।**
**ಮನೋಮಯೀ ಮಣಿಮಯೀ ಪ್ರತಿಮಾಟಷ್ಟವಿಧಾ ಸ್ಮೃತಾ ॥**

ಇವುಗಳಲ್ಲಿ ಲೋಹ, ಶಿಲಾ, ದಾರು, ಮೃತ್ ಪ್ರತಿಮೆಗಳನ್ನು ಪೂಜಿಸಬಹುದು. ಸಾಮಾನ್ಯವಾಗಿ ಲೋಹ ಅಥವಾ ಶಿಲೆಯ ಪ್ರತಿಮೆಯನ್ನು ಪೂಜಿಸುವ ಪದ್ಧತಿಯಿದೆ. ಸಾಲಿಗ್ರಾಮದಲ್ಲಿ ಆವಾಹನೆಯಾಗಲೀ, ವಿಸರ್ಜನೆಯಾಗಲೀ ಇರುವುದಿಲ್ಲ. ಪ್ರತಿಮೆ-ಯಲ್ಲಾದರೂ ಆವಾಹನೆ ಮಾಡಲೇಬೇಕು.

**ಸಾಲಿಗ್ರಾಮೇ ಸ್ವಯಂವ್ಯಕ್ತೇ ನಾವಾಹನವಿಸರ್ಜನೇ ।**

ಆದರೂ ಶಾಲಿಗ್ರಾಮದಿಂದ ಶ್ರೀನಿವಾಸ ವರಾಹ ಪ್ರತಿಮೆಗಳನ್ನು ಕೆತ್ತಿದಾಗ ಪ್ರತಿಮೆಗಳಲ್ಲಿ ಆವಾಹನೆಯಿದೆ.

**ಹಸ್ತಾದಿಯುಕ್ತ ಪ್ರತಿಮಾ ಶಾಲಿಗ್ರಾಮಕೃತಾ ಯದಿ ।**
**ತಸ್ಯಾಮಗ್ನಾವಪಿ ಸ್ಯಾತಾಮಾವಾಹನ ವಿಸರ್ಜನೇ ॥** – ಪೂ.ಕ.

ಪ್ರತಿಮೆಗಳಲ್ಲಿ ಸುವರ್ಣ ಪ್ರತಿಮೆ ಶ್ರೇಷ್ಠ, ಬೆಳ್ಳಿ ಮಧ್ಯಮ, ತಾಮ್ರಾದಿಗಳು ಕನಿಷ್ಠ, ಕಲ್ಲು ಪ್ರತಿಮೇ ಅಧಮವೆನಿಸಿದೆ.

**ಹಿರಣ್ಮಯೀ ಪ್ರತಿಕೃತಿಃ ಸರ್ವಸಂಪತ್ಕರೀ ಭವೇತ್ ।**
**ವಿತ್ತಂ ಪಶೂಂಶ್ಚ ವಿಜಯಂ ವಿಜ್ಞಾನಂ ರಾಜತೀ ಫಲಮ್ ॥**
**ತಾಮ್ರಾ ಧರ್ಮಂ ಚ ವೃದ್ಧಿಂ ಚ ಕರೋತಿ, ಬಹುಸೌಖ್ಯದಾ ॥**
**ಖೇದಪ್ರದಾ ಶಿಲಾಜಾತಾ :**

**ಶ್ರೀಕೃಷ್ಣಪ್ರತಿಮೆ** : ಕಲಿಯುಗದಲ್ಲಿರುವ ನಮಗೆ ಕಲಿಯುಗದಲ್ಲಿಯೂ ಪಾಂಡವರ ಜೊತೆಗಿದ್ದ ಶ್ರೀಕೃಷ್ಣಮೂರ್ತಿಯ ಪ್ರತಿಮೆ ಅತ್ಯಾವಶ್ಯಕವಾಗಿದೆ.

ಮೇಲುದೃಷ್ಟಿ, ಅಧೋದೃಷ್ಟಿ, ಅಡ್ಡದೃಷ್ಟಿ ಇರುವ ಪ್ರತಿಮಾ ಪೂಜೆಯು ನಿಷಿದ್ಧವು.

**ಊರ್ಧ್ವದೃಷ್ಟಿಂ ಅಧೋದೃಷ್ಟಿಂ ತಿರ್ಯಗ್‌ದೃಷ್ಟಿಂ ವಿವರ್ಜಯೇತ್ ।**



- **ಹೊಸ ಪ್ರತಿಮೆಯಲ್ಲಿ ಆವಾಹನ :**

ಹೊಸದಾಗಿ ಅಂಗಡಿಯಿಂದ ತಂದ ಪ್ರತಿಮೆಗೆ ಸಂಸ್ಕಾರವಾಗದೆ ಪೂಜಿಸಬಾರದು. ಅದನ್ನು ತೊಳೆದು ಪಂಚಗವ್ಯದಿಂದ ಮೊದಲು ಅಭಿಷೇಕ ಮಾಡಿ ನಂತರ ಪಂಚಾಮೃತಾಭಿಷೇಕವನ್ನು ಮಾಡಿ, **"ಅಗ್ನಿಃಸಪ್ತಿಂ"** ಇತ್ಯಾದಿ ಮಂತ್ರವನ್ನು ಹೇಳಬೇಕು. ಇದಕ್ಕೆ **"ಅಗ್ನ್ಯುತ್ತಾರಣ"** ಎನ್ನುವರು. ಆಮೇಲೆ ತತ್ವನ್ಯಾಸ, ಮಾತೃಕಾನ್ಯಾಸ, 108 ಮೂಲಮಂತ್ರ ಜಪ ಮಾಡಿದ ಮೇಲೆ ಪೂಜಾರ್ಹವಾಗುತ್ತದೆ.

**ಅಪ್ರತಿಷ್ಠಿತ ಬಿಂಬಸ್ಯ ಪೂಜನಂ ಸಿದ್ಧಿಹಾನಿಕೃತ್** – ಎಂಬಂತೆ ಸಂಸ್ಕಾರವಾಗದ ಪ್ರತಿಮೆ ಪೂಜೆಯಿಂದ ಸಿದ್ಧಿಯಾಗುವುದಿಲ್ಲ.

ಆವಾಹನೆಯಿಂದ ಸರ್ವತ್ರ ವ್ಯಾಪ್ತನಾದ ಭಗವಂತನು ಪ್ರತಿಮೆಯಲ್ಲಿ ವ್ಯಕ್ತನಾಗುವನು. ಗಾಳಿಯು ಸರ್ವತ್ರ ವ್ಯಾಪ್ತವಾಗಿದ್ದರೂ ಬೀಸಣಿಕೆ, ಫ್ಯಾನ್‌ಗಳಿಂದ ವ್ಯಕ್ತನಾಗುವಂತೆ.

**ಯಥ್ ಸರ್ವಗತೋ ವಾಯುಃ ವ್ಯಜನೇನ ಮಹಾಮತೇ ।**

**ವ್ಯಕ್ತಿಮಭ್ಯೇತಿ ಭಗವಾನ್ ಆಹೂತಸ್ತದ್ವದೇವ ಹಿ ॥**

ಹಸುವಿನ ಅಂಗಾಂಗಗಳಲ್ಲಿ ಹಾಲು ಇರುವುದಾರೂ ಕೆಚ್ಚಲಿನಲ್ಲಿ ಮಾತ್ರ ಹಾಲು ವ್ಯಕ್ತವಾಗುವಂತೆಯೂ ಪ್ರತಿಮೆಯಲ್ಲಿ ಮಂತ್ರದ ಮೂಲಕ ವ್ಯಕ್ತನಾಗುವನು.

**ಗೋರಂಗೇಷು ಸಮಸ್ತೇಷು ಕ್ಷೀರಂ ಯದ್ವದ್ ವ್ಯವಸ್ಥಿತಂ ।**

**ದುಗ್ಧಂ ಸ್ತನಮುಖೇ ದೃಷ್ಟಂ ತದ್ವದಾವಾಹನಂ ಭವೇತ್ ॥**

– ಪಾದ್ಮಸಂಹಿತಾ

- **ಪ್ರತಿಮೆಗಳಲ್ಲಿ ತತ್ವನ್ಯಾಸ–ಮಾತೃಕಾನ್ಯಾಸ :**

ಪೂಜಕನು ತಾನು ಪೂಜಿಸುವ ಪ್ರತಿಮೆಯಲ್ಲಿ ಚಕ್ಷುರಾದ್ಯಭಿಮಾನಿಗಳನ್ನು ಎಂದರೆ ತತ್ವಾಭಿಮಾನಿ ದೇವತೆಗಳ ಸನ್ನಿಧಾನವನ್ನು ಚಿಂತಿಸುವುದಕ್ಕೆ ತತ್ವನ್ಯಾಸವೆಂದು ಪ್ರಾಣಶಕ್ತಿಯು ಬರುವಂತೆ ಮಾಡುವ ಕ್ರಮವೆ ಮಾತೃಕಾನ್ಯಾಸವೆಂದು ತಿಳಿಯುವುದು. ಈ ತತ್ವಾಭಿಮಾನಿ ದೇವತೆಗಳಲ್ಲಿರುವ ಭಗವಂತ ರೂಪಗಳನ್ನೇ ಚಿಂತಿಸುವುದು.

ಐವತ್ತೊಂದು ಅಕ್ಷರಗತ ಭಗವಂತನ ಮೂರ್ತಿಯನ್ನು ಪ್ರತಿಮೆಯಲ್ಲಿ ಆಯಾಯ ನಿರ್ದಿಷ್ಟ ಸ್ಥಳಗಳಲ್ಲಿ (ಅಂಗಗಳಲ್ಲಿ) ಸನ್ನಿಧಾನವನ್ನು ಚಿಂತಿಸುವುದೇ "ನ್ಯಾಸ" ಭಗವಂತನ ರೂಪವನ್ನು ಚಿಂತಿಸುತ್ತಾ ಪ್ರತಿಮೆಯನ್ನು ತುಲಸೀದಳದಿಂದ ಮುಟ್ಟಿದರೆ ಭಗವಂತನು ತನ್ನ ರೂಪವನ್ನು ಆ ಸ್ಥಳದಲ್ಲಿಡುವನು. ಭಗವಂತನ ಮೂರ್ತಿಯನ್ನು ಚಿಂತಿಸದೆ ಕೇವಲ ಪ್ರತಿಮೆಯನ್ನು ಅರ್ಚಿಸಿದರೆ ಭಸ್ಮದಲ್ಲಿ ಹೋಮಿಸಿದಂತೆ ನಿಷ್ಫಲ.

**ಯೋ ಮಾಂ ಸರ್ವೇಷು ಭೂತೇಷು ಸಂತಮಾತ್ಮಾನಮೀಶ್ವರಮ್ ।**
**ಹಿತ್ವಾರ್ಚಾಂ ಭಜತೇ ಮೌಢ್ಯಾತ್ ಭಸ್ಮನ್ಯೇವ ಜುಹೋತಿ ಸಃ ॥**

ಹೃದಯದಲ್ಲಿರುವ ಭಗವಂತನ ರೂಪ ಹಾಗೂ ಪ್ರತಿಮೆಯಲ್ಲಿರುವ ಭಗವಂತನ ರೂಪಕ್ಕೂ ಐಕ್ಯ ಚಿಂತನೆಯೇ ಬಿಂಬಾವಾಹನೇ. ಹೀಗೆ ತತ್ವನ್ಯಾಸಾದಿಗಳಿಂದ ಸನ್ನಿಧಾನ ವಿಶೇಷವುಂಟಾಗುತ್ತದೆ.

**ಪ್ರತಿಮಾಯಾಂ ಆತ್ಮನಿ ಚ ನ್ಯಾಸೋಽಯಂ ಸನ್ನಿಧಾನಕೃತ್ ।**

- **ಬಿಂಬವಾಹನ ಕ್ರಮಃ :**

ಆವಾಹನೆಯ ಪ್ರಥಮ ಹಂತದಲ್ಲಿ ನಮ್ಮ ಹೃದಯದಲ್ಲಿರುವ ಭಗವಂತನನ್ನು ಧ್ಯಾನಿಸುವುದು. ಸಾಧಕರ ಹೃದಯಕಮಲವು ಕೆಳಮುಖವಾಗಿರುವುದು ಅದನ್ನು ಮೇಲ್ಮುಖವನ್ನಾಗಿ ಮಾಡಬೇಕು. ಅದರ ಮೊಗ್ಗನ್ನು ಜ್ಞಾನಸೂರ್ಯನಿಂದ ಅರಳಿಸಬೇಕು. ಕೆಳಮುಖವಾಗಿರುವ ಮೊಗ್ಗನ್ನು **"ಓಂ ಯಂ ಓಂ"** ಎಂಬ ವಾಯುಮಂತ್ರದಿಂದ ತನ್ನ ಅಭಿಮುಖವನ್ನಾಗಿ ಮಾಡಿ ನಂತರ ಓಂ ಓಂ ಓಂ ಎಂದು ಪ್ರಣವದಿಂದ ಮೇಲ್ಮುಖವಾಗುವಂತೆ ಮಾಡಿ, ಭಗವಂತನ ಗುಣಪೂರ್ಣತ್ವ ಜ್ಞಾನವೆಂಬ ಸೂರ್ಯನಿಂದ ಅರಳುವಂತೆ ಮಾಡುವುದು.

**ಅಧೋಮುಖಂ ಹೃತ್ಕಮಲಂ ವಾಯುಬೀಜೇನ ಸಮ್ಮುಖಂ ।**
**ಪ್ರಣವೇನೋನ್ಮುಖೀಕೃತ್ಯ ಜ್ಞಾನರ್ಕೇಣ ವಿಕಾಸಯೇತ್ ॥**

– ಪರಮಪುರುಷಸಂಹಿತೆ

ಹೀಗೆ ಅರಳಿದ ಕಮಲದ ಮಧ್ಯದಲ್ಲಿರುವ ಪೀಠಕಾರದಲ್ಲಿ ಕರ್ಣಿಕೆಯಲ್ಲಿರುವ ಬಿಂಬರೂಪಿ ಇವನನ್ನೆ ಪ್ರಾದೇಶವೆಂದು ಕರೆಯುವರು. ಪ್ರಾದೇಶ ಮಾತ್ರ ಪರಿಮಾಣವಿದ್ದರೂ ಹೃದಯದಲ್ಲಿ ಸರ್ವತಃ ವ್ಯಾಪಿಸಿರುತ್ತಾನೆ.

**ಹೃದಯೇ ಸರ್ವತೋ ವ್ಯಾಪಿ ಪ್ರಾದೇಶಃ ಪುರುಷೋತ್ತಮಃ ।**

## 14. ಪೂಜೆಯಲ್ಲಿ ಮುದ್ರೆಗಳು :

ಪೂಜೆಯಲ್ಲಿ ಮುದ್ರೆಗಳು ಅತ್ಯಂತ ಪ್ರಧಾನ ಪಾತ್ರವನ್ನು ವಹಿಸುತ್ತವೆ. ಯಾವುದೇ ವಸ್ತುವು ಪೂಜೆಯಲ್ಲಿ ಒದಗಿಸಲು ಅಸಾಧ್ಯವೆನಿಸಿದಾಗ ಮುದ್ರೆಗಳು ಆ ನ್ಯೂನತೆಯನ್ನು ಪರಿಹರಿಸಿ ಪೂಜಾಫಲವನ್ನು ಪೂರ್ತಿಗೊಳಿಸುತ್ತವೆ.

ಉದಾ.: ಪೂಜೆಯಲ್ಲಿ ಚಕ್ರಾದಿ ಆಯುಧಗಳನ್ನು ಪೂಜಿಸುವುದು ಒಂದು ಅಂಗ. ಆದರೆ ಚಕ್ರಾದಿ ಆಯುಧಗಳನ್ನು ತರುವುದು ಹೇಗೆ? ಕೆಲವು ಪ್ರತಿಮೆಗಳಲ್ಲಿ ಆಯುಧಗಳೇ ಇರುವುದಿಲ್ಲ. ಆಗ ಆಯಾಯ ಆಯುಧಮುದ್ರೆಗಳನ್ನು ತೋರಿಸುವುದು ಸಂಪ್ರದಾಯವಿದೆ. ಆಯುಧ–ಮುದ್ರೆಗಳನ್ನು ತೋರಿಸಿದಾಗ ಆ ದೇವತೆಗಳು ಸನ್ನಿಹಿತರಾಗುವರು.

**ಅರ್ಚನೆ ಜಪಕಾಲೇ ತು ಧ್ಯಾನೇ ಕಾಮ್ಯೇ ಚ ಕರ್ಮಣಿ ।**
**ತತ್ತನ್ಮುದ್ರಾಃ ಪ್ರಯೋಕ್ತವ್ಯಾಃ ದೇವತಾ ಸನ್ನಿಧಾಪಿಕಾಃ ॥**

ಆದ್ದರಿಂದ ವಿಷ್ಣುವಿನ ಪೂಜೆಯಲ್ಲಿ ಶಂಖ, ಚಕ್ರ, ಗದಾ, ಪದ್ಮ, ಕೊಳಲು, ಜ್ಞಾನಮುದ್ರಾದಿಗಳನ್ನು ತೋರಿಸಬೇಕು.

- **ಮುದ್ರೆ ಎಂದರೇನು?**

ದೇವತೆಗಳನ್ನು ಸಂತೋಷಪಡಿಸಲು ರಚಿಸುವ ಬೆರಳುಗಳ ವಿನ್ಯಾಸವೇ ಮುದ್ರೆ, ಸರ್ವದೇವತೆಗಳಿಗೆ ಸಂತೋಷ, ಪಾಪಗಳ ಪರಿಹಾರ ಯಾವುದರಿಂದಲೋ ಅದೇ ಮುದ್ರೆಯೆಂಬುದರ ಅರ್ಥ.

**ಮೋದನಾತ್ ಸರ್ವದೇವಾನಾಂ ದ್ರಾವಣಾತ್ ಪಾಪಸಂತತೇಃ ।**
**ತಸ್ಮಾನ್ ಮುದ್ರೇತಿ ಸಾ ಖ್ಯಾತಾ ಸರ್ವಕಮಾರ್ಥಸಾಧನೀ ॥**

ರಾಕ್ಷಸರನ್ನೂ ಓಡಿಸಲು ಮುದ್ರೆಯ ಅವಶ್ಯಕತೆ ಇದೆ.

**ಮುದಂ ಕುರ್ವಂತಿ ದೇವಾನಾಂ ರಾಕ್ಷಸಾನ್ ದ್ರಾವಯಂತಿ ಚ ।**

ಕೆಲವು ಮುದ್ರೆಗಳು ಜರಾಮರಣಗಳನ್ನು ಪರಿಹರಿಸುವ ಶಕ್ತಿಯನ್ನು ಹೊಂದಿದೆ. "ಇದಂ ಹಿ ಮುದ್ರಾದಶಕಂ ಜರಾಮರಣನಾಶನಂ" ಮುದ್ರೆಗಳು ಸರ್ವರಿಗೂ ಸರ್ವ ರೀತಿಯಾದ ಶಾಂತಿಯನ್ನೂ ಉಂಟು ಮಾಡುತ್ತವೆ ಎನ್ನಲಾಗಿದೆ. ಮುದ್ರಾಭಿಮಾನಿಗಳು ಸಂತುಷ್ಟರಾದರೆ ಅಸಾಧ್ಯವೇನೂ ಇಲ್ಲ.

**ಸರ್ವಶಾಂತಿಕರಾಃ ನಿತ್ಯಾಃ ಮುದ್ರಾಣಾಮಧಿದೇವತಾಃ ।**

ಮುದ್ರೆಯೆಂದರೆ ಮುದ್ರಣ ಮಾಡುವುದು.

ಈ ಮುದ್ರೆಗಳು ಆಯಾಯ ದೇವತೆಯ ಅನುಮತಿಯನ್ನೂ ಸೂಚಿಸುತ್ತದೆ.

- **ಮುದ್ರೆಗಳ ವಿಧಗಳು :**

ಮುದ್ರೆಗಳಲ್ಲಿ ನೂರಾರು ಮುದ್ರೆಗಳು ತಂತ್ರಗಳಲ್ಲಿ ಪ್ರತಿಪಾದಿತವಾಗಿವೆ. ಅಂಜಲೀಮುದ್ರೆ, ನಮಸ್ಕಾರಮುದ್ರೆ, ಧ್ಯಾನಮುದ್ರೆ, ಸಮಾಧಿಮುದ್ರೆ, ಧನುರ್ಮುದ್ರೆ, ವೇಣುಮುದ್ರೆ, ವಲ್ಲಕೀ ಮುದ್ರೆ, ಚಕ್ರ, ಶಂಖ, ತಾರ್ಕ್ಷ್ಯ, ಆವಾಹನಾದಿ ಮುದ್ರೆ ಹೀಗೆ ನೂರಾರಿವೆ.

ಮುದ್ರೆಯಿದ್ದರೆ ಪೂಜೆ, ಧ್ಯಾನ, ಯೋಗ್ಯ, ಇವೆಲ್ಲವೂ ಸಾರ್ಥಕವಾಗುತ್ತದೆ. ಇಲ್ಲದಿದ್ದರೆ ಪೂಜೆ, ಧ್ಯಾನಾದಿಗಳು ವ್ಯರ್ಥ, **"ಮೋದತೇ ಅನಯಾ"** ಇತಿ ಮುದ್ರಾ ಎಂಬಂತೆ ಸಂತೋಷಗೊಳಿಸುವುದು ಎಂದರ್ಥ.

**ಮುದ್ರಾಸು ಸಂಸ್ಥಿತಾ ಪೂಜಾ ಮುದ್ರಾಸು ಪರಿಚಿಂತನಮ್ ।**
**ಮುದ್ರಾಸು ಸಂಸ್ಥಿತಾ ಯೋಗಾ ಮುದ್ರಾ ಮೋದಕರಾಸ್ತತಃ ॥**

ತಂತ್ರಗಳಲ್ಲಿ ಹೇಳಿದಂತೆ, "ಪೂಜಾದಿ ಮಂತ್ರದೇವತೆಗಳು ಯಾವ ಕೈಗಳು ಹಾಗೂ ಬೆರಳುಗಳ ರಚನೆಯಿಂದ ಪ್ರೀತರಾಗುವರೋ ಅದೇ ಮುದ್ರೆ.

**ದೇವತಾ ವಿಶೇಷಪ್ರೀತಿ ಜನಿಕಾಂಗುಲಿರಚನಾ ।** –ಶಬ್ದಕಲ್ಪದ್ರುಮ

ಯಜ್ಞಾದಿಗಳಲ್ಲಿ ಹಸ್ತಕೃತ್ಯವನ್ನು ಮಾಡಲು ವಸ್ತುಗಳು ದುರ್ಲಭವಾದಾಗ ಮುದ್ರೆಯನ್ನು ತೋರಿಸಬೇಕು.

**ಯದಾ ಯದಾ ಪೂಜನೇಷು ಚಿಂತನೇ ಧ್ಯಾನ ಕರ್ಮಣಿ ।**

**ಯಜ್ಞಾದೌ ಸ್ತವನೇ ವಾಽಪಿ ಹಸ್ತಕೃತ್ಯಂ ನ ವಿದ್ಯತೇ ॥**

**ತದಾ ಮುದ್ರಾಯುತಂ ಕುರ್ಯಾತ್ ಇಷ್ಟಾಪೂರ್ತೇ ಕರದ್ವಯಂ ॥**

–ಮುದ್ರಾದರ್ಪಣ ಪು–115

- **ಮುದ್ರೆಯನ್ನು ಯಾವಾಗ ತೋರಿಸಬೇಕು :**

ಅರ್ಚನೆ, ಜಪ, ಧ್ಯಾನ, ಕಾಮ್ಯಕರ್ಮ, ದೇವರಿಗೆ ಸ್ನಾನಕಾಲ, ಆವಾಹನೆ, ಶಂಖಪೂಜೆ, ಪ್ರತಿಷ್ಠಾಪನೆ, ನೈವೇದ್ಯ, ಇವೇ ಮೊದಲಾದ ಕಾಲಗಳಲ್ಲಿ ಮುದ್ರೆ ತೋರಿಸಬೇಕು.

**ಅರ್ಚನೇ ಜಪಕಾಲೇ ಚ ಧ್ಯಾನೇ ಕಾಮ್ಯೇ ಚ ಕರ್ಮಣೀ ।**

**ಸ್ನಾನೇ ಚಾವಾಹನೇ ಶಂಖೇ ಪ್ರತಿಷ್ಠಯಾಂ ಚ ರಕ್ಷಣೇ ॥**

**ನೈವೇದ್ಯ ಚ ತಥಾನ್ಯತ್ರ ತತ್ತತ್ ಕಲ್ಪ ಪ್ರಕಾಶಿತೇ ॥**

– ಮೃಗೇಂದ್ರಾಗಮ ಕ್ರಿಯಾಪಾದ–5 ಪಾತಾಲ

ಪೂಜಾದಿಗಳಲ್ಲಿ ಬರಬಹುದಾದ ವಿಘ್ನಗಳನ್ನು ಮುದ್ರೆಗಳು ಪರಿಹರಿಸುವುದು.

**ವಿಘ್ನೌಘಮುದ್ರಣಾನ್ ಮುದ್ರಾಃ ದೇವತಾ ಸನ್ನಿಧಾಪಕಾಃ ।**

- **ಮುದ್ರೆ ಇಲ್ಲದ ಪೂಜೆ ವ್ಯರ್ಥ :**

**ಮುದ್ರಾವಿಯುಕ್ತ ಹಸ್ತಸ್ತು ಕ್ರಿಯತೇ ಕರ್ಮ ದೈವಿಕಂ ।**

**ಕೃತ್ವಾ ತನಿಷ್ಫಲಂ ಯಸ್ಮಾತ್ ತಸ್ಮಾನ್ ಮುದ್ರಾನ್ವಿತೊ ಭವೇತ್ ॥**

ಮುದ್ರೆಗಳನ್ನು ಇತರರಿಗೆ ತೋರಿಸದಂತೆ ರಹಸ್ಯದಲ್ಲಿ ತೋರಿಸಬೇಕು.

**ನ ಜಾತು ದರ್ಶಯೇನ್ ಮುದ್ರಾಂ ಮಹಾಜನಸಮಾಗಮೇ ।**

**ಗುಹ್ಯಮೇತತ್ ಮುನಿಶ್ರೇಷ್ಠ ತಸ್ಮಾತ್ ರಹಸಿ ಯೋಜನಯೇತ್ ॥**

ದೀಕ್ಷೆ ಇಲ್ಲದಿರುವ ನಾಸ್ತಿಕನಿಗೆ ತೋರಿಸಬಾರದು. ತೋರಿಸಿದರೇ ದೇವತೆಗಳು ಕ್ಷೋಭೆಗೊಳ್ಳುತ್ತಾರೆ.

**ನಾದೀಕ್ಷಿತಸ್ಯ ಮುದ್ರಾಣಾಂ ಲಕ್ಷಣಾನಿ ಪ್ರಕಾಶಯೇತ್ ।**
**ಕ್ಷುಭ್ಯಂತಿ ದೇವತಾಸ್ತಸ್ಯ ಮಂತ್ರಂ ಚ ವಿಫಲಂ ಭವೇತ್ ॥**

ಕೆಲವು ಮುದ್ರೆಗಳು ಆಯಾಯ ದೇವತೆಗಳಿಗೆ ಪ್ರತ್ಯೇಕವಾಗಿದ್ದು ಪ್ರೀತಿದಾಯಕವಾಗಿವೆ. ಉದಾ : ಹಯಗ್ರೀವ ಮುದ್ರೆ, ನರಸಿಂಹಮುದ್ರೆ, ವರಾಹ, ಮತ್ಸ್ಯಮುದ್ರೆ, ಲಕ್ಷ್ಮೀಮುದ್ರೆ, ಸರಸ್ವತೀಮುದ್ರೆ, ಶಕ್ತಿಮುದ್ರೆ, ವಿಘ್ನೇಶಮುದ್ರೆ, ನವಗ್ರಹಮುದ್ರೆ ಇತ್ಯಾದಿ. ಇವಲ್ಲದೆ ನೈವೇದ್ಯಮುದ್ರೆ-ಧೂಪಮುದ್ರೆ-ದೀಪಮುದ್ರೆ, ಗಂಧ ಪ್ರಾಣಾಪಾನಾದಿ ಪಂಚಮುದ್ರೆಗಳೂ ಪ್ರಸಿದ್ಧವಾಗಿವೆ.

ಅರ್ಘ್ಯದಲ್ಲಿ "ದಾನಮುದ್ರೆ"ಯನ್ನು ತೋರಿಸುವುದು. ಐದೂ ಬೆರಳುಗಳನ್ನು ಒಟ್ಟಿಗೆ ಸೇರಿಸಿ ದಾನಮುದ್ರೆ, ಅಂಜಲಿ ಮುದ್ರೆಯನ್ನು ತೋರಿಸುವುದು.

ಎರಡು ಕೈಗಳನ್ನು ಬೊಗಸೆಯಂತೆ ಮಾಡಿ ತೋರಿಸುವುದು ಅಂಜಲೀ ಮುದ್ರೆಯು. ಆಚಮನೀಯದಲ್ಲಿ "ಗೋಕರ್ಣಾತಕೃತಿಮುದ್ರೆ"ಯನ್ನು ಮಧುಪರ್ಕದಲ್ಲಿ ಸೂಕರೀಮುದ್ರೆಯನ್ನು ತೋರಿಸುವುದು.

ಪುನರಾಚಮನೀಯದಲ್ಲಿ 'ಹಂಸಮುದ್ರೆ'ಯನ್ನು ತೋರಿಸಬೇಕು. ಸ್ನಾನದಲ್ಲಿ 'ಶಂಖಮುದ್ರೆ'ಯನ್ನು ತೋರಿಸುವುದು.

- **ದಾನಮುದ್ರಾ :**

**ಕ್ಷಿಪ್ತ್ವಾ ಕರತಲೇ ಅಂಗುಷ್ಠಂ ಕಿಂಚಿದಾಕುಂಚ್ಯ ಚಾಂಗುಲೀಃ ।**
**ದಾನಮುದ್ರಾ ಬುಧೈಃ ಪ್ರೋಕ್ತಾ ಅರ್ಘ್ಯೇ ದದ್ಯಾತ್ ವಿಚಕ್ಷಣಃ ॥**
– ಅಹ್ನಿಕ ಪದ್ಧತಿ 181

- **ಅಂಜಲೀಮುದ್ರಾ :**

**ಮುಲೇऽಂಗುಷ್ಠಂ ತು ನಿಕ್ಷಿಪ್ಯ ಸಂಬಧ್ಯಾಚ್ಛಿದ್ರಮಂಗುಲೀಃ ।**
**ಆಕುಂಚ್ಯ ಸಂಪುಟಾಕಾರಂ ಅಂಜಲೀಮುದ್ರಿಕಾ ಮತಾ ॥** –ಅ.ಸಾಂ

- **ಗೋಕರ್ಣಾಕೃತಿಮುದ್ರಾ :**

**ತರ್ಜನೀ ಪೃಷ್ಠತೋऽಂಗುಷ್ಠಂ ವೇಷ್ಟಯಿತ್ವಾ ತತೋऽಂಗುಲೀಃ ।**
**ಊರ್ಧ್ವಮಾಕುಂಚ್ಯ ಸಚ್ಛಿದ್ರಂ ಮುದ್ರಾ ಗೋಕರ್ಣಿಕಾ ಸ್ಮೃತಾಃ ॥**

- **ಸೂಕರೀಮುದ್ರಾ :**

  **ಮುಷ್ಟಿಕಾ ದೀರ್ಘಮಧ್ಯಾ ತು ಉತ್ತಾನೀ ಸೂಕರೀ ಮತಾ ।**

- **ಹಂಸಮುದ್ರಾ :**

  **ಹಸ್ತೌ ಅಧೋಮುಖೌ ಕೃತ್ವಾ ಸಂಯೋಗೋಽಂಗುಷ್ಠಯೋಸ್ತಥಾ ।**
  **ತರ್ಜನೀಭ್ಯಾಂ ಪ್ರಸಾರ್ಯೋನ್ಯಾ ಅಂಗುಲೀಃ ಹಂಸಮುದ್ರಿಕಾ ॥**

- **ಶಂಖಮುದ್ರಾ :**

  **ವಾಮಾಂಗುಷ್ಠಂ ತು ಸಂಗೃಹ್ಯ ದಕ್ಷಿಣೇನ ತು ಮುಷ್ಟಿನಾ ।**
  **ಕೃತ್ವೋತ್ಥಾನಂ ತಥಾ ಮುಷ್ಟಿಮುಂಗುಷ್ಠಂ ತು ಪ್ರಸಾರಯೇತ್ ॥**



- **ಪ್ರಾರ್ಥನಾ ಮುದ್ರೆ :**

  ನೀನು ಹಿರಿಯನಾಗಿದ್ದು ನೀನು ನನ್ನನ್ನು ಅನುಗ್ರಹಿಸು ಎಂದು ಪ್ರಾರ್ಥಿಸುವುದೇ ಪ್ರಾರ್ಥನಾ ಮುದ್ರೆ. ಇದನ್ನೇ ಪ್ರಣಾಮ ಮುದ್ರೆ–ಅಂಜಲಿಮುದ್ರೆ ಎನ್ನಲಾಗಿದೆ.

  ಕೈಗಳನ್ನು ಸಂಪುಟಾಕಾರವಾಗಿ ಜೋಡಿಸಿ, ತಲೆಯಲ್ಲಿ ಅಥವಾ ಹೃದಯದಲ್ಲಿ ಜೋಡಿಸಿಟ್ಟರೆ ಪ್ರಾರ್ಥನಾ ಮುದ್ರೆಯಾಗುವುದು.

  **ಪ್ರಸೃತಾಂಗುಲಿಕೌ ಹಸ್ತೌ ಮಿಥಃ ಶ್ಲಿಷ್ಟೌ ಚ ಸಂಮುಖೌ ।**
  **ಕುರ್ಯಾತ್ ಸ್ವಹೃದಯೇ ಸೇಯಂ ಮುದ್ರಾ ಪ್ರಾರ್ಥನ ಸಂಜ್ಞಿಕಾ ॥**

- **ನಮಸ್ಕಾರ ಮುದ್ರೆ :**

  ಹಸ್ತಗಳ ಎರಡೂ ತಳಗಳನ್ನು ಹೃದಯದಲ್ಲಿ ಒತ್ತಿ ಇಟ್ಟರೆ ನಮಸ್ಕಾರ ಮುದ್ರೆ.

  **ಹೃದ್ದೇಶೇ ತು ನಿಪೀಡ್ಯೇತ ಹಸ್ತಯೋರುಭಯೋಸ್ತಲಂ ।**

  – ನಮಸ್ಕಾರಾ ತು ವಿಜ್ಞೇಯಾ



- **ಘೋಟಿಕಾ ಮುದ್ರೆ :**

  ಬಲಗೈಯ ಮಧ್ಯಮ ಬೆರಳಿನ ಮೇಲೆ, ಬಲಗೈಯ ಅಂಗುಷ್ಠದಿಂದ ಉಜ್ಜಿ ಶಬ್ದ ಮಾಡುವುದು, ಇದನ್ನೆ "ನಾರಾಚ" ಮುದ್ರೆ ಎನ್ನುವರು.

  **ಅಂಗುಷ್ಠ ತರ್ಜನ್ಯಗ್ರಾಭ್ಯಾಂ ಸ್ಫೋಟೋ ನಾರಾಚಮುದ್ರಿಕಾ ॥**

  ಘೋಟಿಕಾ ಮುದ್ರಿಕಾ ನಾಮ ದಕ್ಷಿಣ ಮಧ್ಯಮಾಂಗಲೇ ದಕ್ಷಿಣಾಂಗುಷ್ಠ-ಯೋಗೇನ ಶಬ್ದಕರಣಮ್.

- **ಆವಾಹನೀ ಮುದ್ರೆ :**

  ಎರಡೂ ಕೈಗಳನ್ನು ಮೇಲ್ಮುಖವಾಗಿ ಬೊಗಸೆ ಮಾಡಿ, ಎರಡೂ ಕೈಗಳ ಉಂಗುರ (ಅನಾಮಿಕ) ಬೆರಳಿನ ಮೂಲ ಪರ್ವದಲ್ಲಿ ಅಂಗುಷ್ಠವನ್ನು ಇಟ್ಟರೇ ಆವಾಹಿನೀ ಮುದ್ರೆಯಾಗುವುದು. ಇದು ದೇವತೆಯನ್ನು ಪ್ರತೀಕದಲ್ಲಿ ಆವಾಹಿಸಲು ಉಪಯೋಗಿಸುವರು.



**ಹಸ್ತಾಭ್ಯಾಂ ಅಂಜಲಿಂ ಕೃತ್ವಾ ಅನಾಮಿಕಾ ಮೂಲಪರ್ವಣೋಃ ।**
**ಅಂಗುಷ್ಠೌ ನಿಕ್ಷಿಪೇತ್ ಸೇಯಂ ಮುದ್ರಾ ತ್ವಾವಾಹಿನೀ ಮತಾ ॥**

- **ಸಂಸ್ಥಾಪನೀಮುದ್ರಾಃ :**

  ಆವಾಹನೀಮುದ್ರೆಯನ್ನೇ ಅಧೋಮುಖ ಮಾಡಿದಾಗ ಸಂಸ್ಥಾಪನೀ ಮುದ್ರೆಯಾಗುವುದು.



**ಅಧೋಮುಖೀತ್ವಿಯಂ ಚೇತ್ ಸ್ಯಾತ್ ಸ್ಥಾಪನಾಮುದ್ರಿಕಾ ಮತಾ ।**

- **ಸನ್ನಿಧಾಯಿನೀಮುದ್ರಾ :**

ಎರಡೂ ಕೈಗಳನ್ನು ಮುಷ್ಟಿ ಮಾಡಿ ಎರಡು ಕೈಗಳ ಅಂಗುಷ್ಠಗಳನ್ನು ಒಂದಕ್ಕೊಂದು ತಗಲದಂತೆ ಮೇಲ್ಮುಖನಾಗಿಡುವುದೇ ಸನ್ನಿಧಾಯಿನೀ ಮುದ್ರೆ.



**ಉಚ್ಛ್ರಿತಾಂಗುಷ್ಠಯೋಸ್ತು ಸಂಯೋಗಃ ಸನ್ನಿಧಾಯಿನೀ ।**

- **ಸನ್ನಿರೋಧನೀ ಮುದ್ರೆ :**

ಎರಡೂ ಕೈಗಳನ್ನು ಮುಷ್ಟಿ ಮಾಡಿ ಅಂಗುಷ್ಠವನ್ನೂ ಮುಷ್ಟಿಯಲ್ಲಿ ಅಂರ್ಗತಗೊಳಿಸಿದರೆ ಸನ್ನಿರೋಧಿನೀ ಮುದ್ರೆ.



ಈ ಮುದ್ರೆಯಿಂದ ದೇವತೆಯ ಮನಸ್ಸು ಬೇರೆ ಕಡೆ ಹೋಗದಂತೆ ಪೂಜಕನ ಮೇಲೆ ಇರುವಂತೆ ಪ್ರಾರ್ಥಿಸುವುದು.

**ಅಂತಃ ಪ್ರವೇಶಿತಾಂಗುಷ್ಠಾ ಸೈವ ಸಂರೋಧಿನೀ ಮತಾ ।**
**ಸನ್ನಿರೋಧನಂ ನಾಮ ದೇವತಾಯಾ ಅನನ್ಯಚಿತ್ತತ್ವ ಪಾರ್ಥನಂ ॥**

- **ಸಮ್ಮುಖಮುದ್ರಾ :**

ಎರಡೂ ಕೈಗಳನ್ನು ಮುಷ್ಠಿಯನ್ನಾಗಿಸಿ ಎರಡೂ ಕೈಗಳ ಹೆಬ್ಬೆರಳುಗಳನ್ನು ಮುಖಾಮುಖಿಯಾಗಿರುವಂತೆ ಮಾಡಿದರೆ ಸಮ್ಮುಖ ಮುದ್ರೆಯಾಗುತ್ತದೆ.



**ಮುಷ್ಟಿದ್ವಯಾಂಗುಷ್ಠೌ ಸಮ್ಮುಖೌ ತು ಪರಸ್ಪರಂ।**

- **ಅವಗುಂಠನ ಮುದ್ರೆ :**

ಎರಡೂ ಕೈಗಳ ಮುಷ್ಠಿಯ ಮೇಲೆ ಅಂಗುಷ್ಠಗಳನ್ನಿಟ್ಟರೇ ಅವ ಕುಂಠನ ಮುದ್ರೆಯಾಗುವುದು. ಅಯೋಗ್ಯ ದೃಷ್ಟಿ ಬೀಳದಂತೆ ರಕ್ಷಿಸುವ ಮುದ್ರೆ ಇದಾಗಿದೆ.

ನೈವೇದ್ಯ ಮುದ್ರೆಯೆನಿಸುತ್ತದೆ.



**ಅಂಗುಷ್ಠೇನಾಮಿಕಾಮೂಲಯೋಗೇ ನೈವೇದ್ಯ ಮುದ್ರಿಕಾ।**

ಈ ಮುದ್ರೆಗಳು ಬಿಂಬಮೂರ್ತಿಗೆ ಉಪಚಾರ ಪೂಜೆ ಮಾಡಲು ಉಪಯುಕ್ತವಾಗುತ್ತದೆ.

- **ಪ್ರಾಣಾಪಾನಾದಿ ಮುದ್ರೆಗಳು :**

ಪ್ರಾಣಮುದ್ರೆ : ಬಲದ ಹಸ್ತದ ಕಿರುಬೆರಳು, ಉಂಗುರ ಬೆರಳು, ಹೆಬ್ಬೆರಳು ಇವುಗಳನ್ನು ಒಂದುಗೂಡಿಸಿದಾಗ ಪ್ರಾಣ ಮುದ್ರೆಯಾಗುವುದು.



**ಕನಿಷ್ಠಾನಾಮಿಕಾಂಗುಷ್ಠೈಃ ದಕ್ಷ ಹಸ್ತಸ್ಯ ಸಂಯುತೈಃ ।**
**ಕಥಿತಾ ಮುನಿಭಿಃ ಪ್ರಾಣಮುದ್ರಾ ಪರಮದುರ್ಲಭಾ ॥**

- **ಅಪಾನಮುದ್ರೆ :**

ತರ್ಜನೀ–ಮಧ್ಯಮ ಹಾಗೂ ಅಂಗುಷ್ಠ ಬೆರಳುಗಳ ಸಂಯೋಗವು ಅಪಾನಮುದ್ರೆಯಾಗುತ್ತದೆ.



**ತರ್ಜನೀ–ಮಧ್ಯಮಾಂಗುಷ್ಠೈರಪಾನಸ್ಯ ತು ಸಾ ಸ್ಮೃತಾ ।**

- **ವ್ಯಾನಮುದ್ರೆ :**

ಅನಾಮಿಕ–ಮಧ್ಯಮ–ಅಂಗುಷ್ಠಗಳ ಸಂಯೋಗದಿಂದ ವ್ಯಾನಮುದ್ರೆ–ಯಾಗುತ್ತದೆ.



**ಅನಾಮಾಮಧ್ಯಮಾಂಗುಷ್ಠೈಃ ಸ್ಪೃಶೇದ್ ವ್ಯಾನಸ್ಯ ಮುದ್ರಿಕಾಃ ।**

- **ಉದಾನ ಮುದ್ರೆ :**

ತರ್ಜನೀ–ಅನಾಮಿಕ–ಮಧ್ಯ ಬೆರಳುಗಳು ಅಂಗುಷ್ಠದಿಂದ ಸಂಯೋಗವಾದಾಗ ಉದಾನಮುದ್ರೆಯಾಗುತ್ತದೆ.



**ತರ್ಜನ್ಯನಾಮಮಧ್ಯಭಿಃ ಸಾಂಗುಷ್ಠಾಭಿಃ ಚತುರ್ಥಿಕಾ ।**
**ಉದಾನಮುದ್ರಾ ಸಂಪ್ರೋಕ್ತಾ ಮುದ್ರಾವಿದ್ಭಿಃ ಮಹರ್ಷಿಭಿಃ ॥**

- **ಸಮಾನಮುದ್ರೆ :**

ಎಲ್ಲಾ ಬೆರಳುಗಳನ್ನು ಒಂದುಗೂಡಿಸಿದಾಗ ಆಗುವ ಮುದ್ರೆಯೇ ಸಮಾನ ಮುದ್ರೆ.



**ಮುದ್ರಾ ಅಂಗುಲೀಭಿಃ ಸಮಾನಸ್ಯ ಪ್ರಕೀರ್ತಿತಾ ।**

- **ತಾಲಮುದ್ರೆ :**

ದೇವರ ಕೋಣೆಯನ್ನು ಪ್ರವೇಶಿಸುವಾಗ ತೋರಿಸುವ ಮುದ್ರೆ ತಾಲಮುದ್ರೆ ಬಲಗೈಯಿಂದ ಎಡಗೈಯನ್ನು ಶಬ್ಧ ಮಾಡುವುದು. ಎಡಗೈಯಿಂದ ಬಲಗೈಯನ್ನು ಚಪ್ಪಾಳೆ ತಟ್ಟುವುದು. ಪುನಃ ಬಲಗೈಯಿಂದ ಎಡಗೈಯನ್ನು ತಟ್ಟುವುದೇ. ಇದರಿಂದ ವಿಘ್ನ ಪರಿಹಾರವಾಗುತ್ತದೆ.



**ಹಸ್ತಾಭ್ಯಾಂ ತಾಡಯೇತ್ ತತ್ರ ತಾಲಮುದ್ರಾ ಪ್ರಕೀರ್ತಿತಾ ।**

**ತಾಲಃ ತ್ರಿರಾಹತಿಃ ಪಾಣ್ಯೋಃ ಸಾಟ್ಟಹಾಸೋಽಂತರಾಯನುತ್ ॥**

- **ಆಯುಧ ಮುದ್ರೆಗಳು :**

ಖಡ್ಗಮುದ್ರೆ : ಕಿರುಬೆರಳು ಹಾಗೂ ಉಂಗುರ ಬೆರಳನ್ನು ಹೆಬ್ಬೆರಳಿನಿಂದ ಕೆಳಕ್ಕೆ ಒತ್ತಿ, ತೋರು ಬೆರಳು ಹಾಗೂ ಮಧ್ಯಮ ಬೆರಳನ್ನು ಮೇಲ್ಮುಖ–ನಾಗಿರಿಸಿದರೆ ಖಡ್ಗಮುದ್ರೆಯೆನಿಸುತ್ತದೆ.



**ಕನಿಷ್ಠಾನಾಮಿಕೇ ಬದ್ವಾ ಸಾಂಗುಷ್ಠೇನೈವ ದಕ್ಷತಃ ।**
**ಶ್ಲಿಷ್ಟಾಂಗುಲೀ ತು ಪ್ರಸೃತೇ ಸಂಶ್ಲಿಷ್ಟೇ ಖಡ್ಗಮುದ್ರಿಕಾಃ ॥**

- **ಚರ್ಮ ಮುದ್ರೆ** : ಎಡಗೈಯನ್ನು ಅಡ್ಡವಾಗಿರಿಸಿ, ಚಾಚಿ, ಎಲ್ಲ ಬೆರಳುಗಳನ್ನು ಮಡಿಸಿದರೆ ಚರ್ಮಮುದ್ರೆ ಎನಿಸುತ್ತದೆ.



**ವಾಮಹಸ್ತಂ ತಥಾ ತಿರ್ಯಕ್ ಕೃತ್ವಾ ಚೈವ ಪ್ರಸಾರ್ಯ ಚ ।**
**ಆಕುಂಚಿತಾಂಗುಲೀಃ ಕುರ್ಯಾತ್ ಚರ್ಮಮುದ್ರೇಯಮೀರಿತಾ ॥**

- **ಮುಸಲಮುದ್ರೆ** : ಬೆರಳುಗಳನ್ನು ಮುಷ್ಠಿ ಮಾಡಿ, ಎಡಮುಷ್ಠಿಯ ಮೇಲೆ ಬಲಮುಷ್ಠಿಯನ್ನಿಟ್ಟರೆ ಸರ್ವವಿಘ್ನ ಪರಿಹಾರಕ ಮುದ್ರೆಯು ಮುಸಲಮುದ್ರೆ.



- **ಬಾಣ ಮುದ್ರೆ** : ತರ್ಜನಿ ಬೆರಳನ್ನು ಬಿಟ್ಟು ಉಳಿದ ಬೆರಳುಗಳನ್ನು ಮುಷ್ಠಿ ಮಾಡಿ, ತರ್ಜನಿಯನ್ನು ಮಾತ್ರ ಎತ್ತಿ ನಿಲ್ಲಿಸಿದರೆ ಬಾಣಮುದ್ರೆ.



**ದತ್ತ ಮುಷ್ಟೇಸ್ತು ತರ್ಜನ್ಯಾ ದೀರ್ಘೈಷಾ ಬಾಣಮುದ್ರಿಕಾ ।**

- **ಗದಾಮುದ್ರೆ** : ಎರಡೂ ಕೈಗಳನ್ನು ಪರಸ್ಪರಾಭಿಮುಖವಾಗಿರಿಸಿ, ಎರಡೂ ಕೈಗಳ ಮಧ್ಯಮ ಬೆರಳುಗಳನ್ನು ನೇರವಾಗಿರಿಸಿ, ಉಳಿದವುಗಳನ್ನು ಒಂದರಲ್ಲಿ ಒಂದನ್ನು ಸೇರಿಸಿದಾಗ ಗದಾಮುದ್ರೆಯಾಗುತ್ತದೆ.



**ಅನ್ಯೋನ್ಯಾಭಿಮುಖೌ ಹಸ್ತೌ ಕೃತ್ವಾ ತು ಗ್ರಥಿತಾಂಗುಲೀಃ ।**
**ಅಂಗುಲ್ಯೌ ಮಧ್ಯಮೇ ಭೂಯಃ ಸುಲಗ್ನೇ ಸುಪ್ರಸಾರಿತೇ ॥**
**ಗದಾ ಮುದ್ರೇಯಮುದಿತಾ ವಿಷ್ಣೋಃ ಸಂತೋಷವರ್ಧಿನೀ ॥**

- **ಚಕ್ರಮುದ್ರೆ :** ಎರಡೂ ಹಸ್ತಗಳನ್ನು ಚಾಚಿ ಅಭಿಮುಖವಾಗಿರಿಸಿ, ಕಿರುಬೆರಳನ್ನು, ಅಂಗುಷ್ಠವು ಹಾಗೂ ಅಂಗುಷ್ಠವು ಕಿರಿಬೆರಳನ್ನು ಮುಟ್ಟುವಂತೆ ಇರಿಸಿದರೆ ಚಕ್ರಮುದ್ರೆ.



**ಹಸ್ತೌತು ಸಂಮುಖೌ ಕೃತ್ವಾ ಸಂಲಗ್ನೌ ಸುಪ್ರಸಾರಿತೌ ।**
**ಕನಿಷ್ಠಾಂಗುಷ್ಠಕೌ ಲಗ್ನೌ ಮುದ್ರಾ ಚಕ್ರಸ್ಯ ಸಿದ್ಧಿದಾ ॥**

- **ಶಂಖಮುದ್ರೆ :** ಎಡಗೈಯ ಹೆಬ್ಬೆರಳನ್ನು ಬಲಮುಷ್ಟಿಯಿಂದ ಹಿಡಿದು ಉಳಿದ ಬೆರಳುಗಳಿಂದ ಸುತ್ತುವರೆಸಿ ಮುಷ್ಟಿಯನ್ನು ಮೇಲ್ಮುಖ-ವಾಗಿರಿಸಿದರೆ ಶಂಖಮುದ್ರೆಯಾಗುತ್ತದೆ.



**ವಾಮಾಂಗುಷ್ಠಂ ತು ಸಂಗೃಹ್ಯ ದಕ್ಷಿಣೇ ತು ಮುಷ್ಟಿನಾ ।**
**ಕೃತ್ವೋತ್ತಾನಂ ತತೋ ಮುಷ್ಟಿಂ ಅಂಗುಷ್ಠಂ ತು ಪ್ರಸಾರಯೇತ್ ॥**

- **ಪದ್ಮಮುದ್ರೆ :** ಎರಡೂ ಕೈಗಳನ್ನು ಸೇರಿಸಿ, ಎಲ್ಲಾ ಬೆರಳುಗಳನ್ನು ಮೇಲ್ಮುಖವಾಗಿರಿಸಿ, ಸ್ವಲ್ಪ ಬಗ್ಗಿಸಿ ಕಮಲದಂತೆ ಸಂಪುಟಾಕಾರ-ವಾಗಿರಿಸಿದರೆ ಪದ್ಮಮುದ್ರೆಯಾಗುತ್ತದೆ.



**ಹಸ್ತೌ ತು ಸಮ್ಮುಖೌ ಕೃತ್ವಾ ಸನ್ನತಪ್ರೋತ್ಥಿತಾಂಗುಲೀ।**
**ತಲಾಂತರ್ಮಿಲಿಗಂಗುಷ್ಠೌ ಕೃತ್ವೈಷಾ ಪದ್ಮಮುದ್ರಿಕಾ ॥**



- **ಶ್ರೀವತ್ಸಮುದ್ರೆ :** ಎರಡು ಕೈಗಳ ತಳಗಳನ್ನು ಒಂದು ಕೆಳಮುಖವಾಗಿಯೂ ಇನ್ನೊಂದು ಮೇಲ್ಮುಖವಾಗಿರಿಸಿ, ಎಡಗೈಯ ಕಿರುಬೆರಳು ಬಲಗೈಯ ತೋರುಬೆರಳನ್ನು ಸಂಬಂಧವಾಗುವಂತೆಯೂ ಹಾಗೂ ಎರಡು ಕೈಗಳ ಮಧ್ಯ ಹಾಗೂ ಉಂಗುರ ಬೆರಳುಗಳನ್ನು ಹೆಬ್ಬೆರಳಿನಿಂದ ಒತ್ತುವುದೇ "ಶ್ರೀವತ್ಸಮುದ್ರೆ".

**ಅನ್ಯೋನ್ಯ ಪೃಷ್ಠಕರಯೋಃ ಮಧ್ಯಮಾನಾಮಿಕಾಂಗುಲೀ ।**
**ಅಂಗುಷ್ಠೇನ ತು ಬಧ್ನೀಯಾತ್ ಕನಿಷ್ಠಾ ಮೂಲಸಂಸ್ಥಿತೇ ।**

**ಮುದ್ರಾಶ್ರೀವತ್ಸಂಜ್ಞಿಕಾ ॥**

- **ವನಮಾಲಾಮುದ್ರೆ :**

ಎರಡೂ ಕೈಗಳನ್ನು ಮೇಲೆ ಮಾಡಿ, ತೋರುಬೆರಳು ಹಾಗೂ ಅಂಗುಷ್ಠವನ್ನು ಒಂದಕ್ಕೊಂದು ಸೇರಿಸಿ, ಆ ಕೈಗಳನ್ನು ಹಾರ ಹಾಕುವಂತೆ ಕುತ್ತಿಗೆಯಿಂದ ಪಾದದವರೆಗೂ ಮುಂದುವರೆಸಿದರೆ "ವನಮಾಲಾ ಮುದ್ರೆ" ಎನಿಸುತ್ತದೆ.



**ಸ್ಪೃಶೇತ್ ಕಂಠಾದಿಪಾದಪರ್ಯಂತಂ ತರ್ಜನ್ಯಾಂಗುಷ್ಠಯಾ ತಥಾ ।**
**ಕರದ್ವಯೇನ ಮಾಲಾವತ್ ಮುದ್ರೇಯಂ ವನಮಾಲಿಕಾ ॥**

- **ಚಂದ್ರಮುದ್ರಾ :** ತೋರಬೆರಳು ಹಾಗೂ ಅಂಗುಷ್ಠವನ್ನು ದೂರ ಪ್ರಸರಿಸಿ ಚಾಚಿದಾಗ ಅರ್ಧಚಂದ್ರಾಕಾರವುಂಟಾಗಿ ಚಂದ್ರ ಮುದ್ರೆಯೆನಿಸುತ್ತದೆ.

**ತರ್ಜನ್ಯಂಗುಷ್ಠ ಪ್ರಸಾರಣರೂಪಾ ಚಂದ್ರಮುದ್ರಾ ।**

ಬಿಸಿಯಾದ ನೈವೇದ್ಯವು ತಂಪಾಗಿಸಲು ಈ ಮುದ್ರೆ.

- **ಶೋಧನಮುದ್ರಾ :** ಪೂಜಿಸಿ ನೀರನ್ನು ಶೋಧಿಸಲು ಉಪಯೋಗಿಸುವ ಮುದ್ರೆ ಶೋಧನಮುದ್ರೆ.

ಬಲಗೈಯ ಮುಷ್ಠಿ ಮಾಡಿ, ಅಂಗುಷ್ಠವನ್ನು ಕೆಳಮುಖವಾಗಿ ಚಾಚಿ ನೀರಿನ ಮೇಲೆ ಪ್ರದಕ್ಷಿಣೆ ಸುತ್ತುವರೆಸಿದರೆ ಶೋಧನಮುದ್ರೆ.

**ಅಧೋಂಗುಷ್ಠಂ ಪ್ರಸಾರ್ಯಾಥ ಮುಷ್ಟಿಂ ಕೃತ್ವಾ ತು ಭ್ರಾಮಯೇತ್ ।**
**ಸರ್ವಶುದ್ಧೀಕರೀ ಲೋಕೇ ಮುದ್ರಾ ಶೋಧನ ಮುದ್ರಿಕಾ ॥**

- **ಧೇನುಮುದ್ರಾ** : ಎರಡು ಕೈಗಳನ್ನು ಸಮ್ಮುಖವಾಗಿರಿಸಿ, ಅಧೋಮುಖವಾಗಿಟ್ಟು, ಎಡಗೈಯ ಬೆರಳುಗಳನ್ನು ಬಲಗೈಯ ಬೆರಳುಗಳ ಸಂಧಗಳನ್ನಿಟ್ಟು, ಎರಡೂ ಕೈಗಳ ಮಧ್ಯಮ ಬೆರಳುಗಳಿಂದ ತರ್ಜನಿ ಬೆರಳುಗಳನ್ನು ಸ್ಪರ್ಶಿಸಬೇಕು, ಎರಡೂ ಕೈಗಳ ಅನಾಮಿಕಾ ಬೆರಳುಗಳಿಂದ ಕಿರುಬೆರಳಿನ ತುದಿಗಳನ್ನು ಸ್ಪರ್ಶಿಸಿದರೆ ಧೇನು ಮುದ್ರೆಯಾಗುತ್ತದೆ. ನೈವೇದ್ಯವನ್ನು ಅಮೃತವನ್ನಾಗಿಸಲು ಈ ಮುದ್ರೆ.



**ಹಸ್ತದ್ವಯೇತ್ವಧಯೋ ವಕ್ತ್ರೇ ಸಂಮುಖೇ ಚ ಪರಸ್ಪರಂ ।**
**ವಾಮಾಂಗುಲೀಃ ದಕ್ಷಿಣಾನಾಮಂಗಲೀನಾಂ ಚ ಸಂಧಿಷು ॥**

- **ಅಸ್ತ್ರಮುದ್ರೆ** : ಅಂಗುಷ್ಠದಿಂದ ತೋರುಬೆರಳುಗಳನ್ನು ಹತ್ತು ದಿಕ್ಕುಗಳಲ್ಲೂ ಚಿಟಿಕೆ ಹಾಕಿ ಶಬ್ದ ಮಾಡುವುದು.
- **ಮೃಗೀಮುದ್ರೆ** : ವೈಶ್ವದೇವದಲ್ಲಿ ಆಹುತಿಗಳನ್ನು ಹಾಕುವಾಗ ಮೃಗೀಯ ಮುದ್ರೆಯು ಉಪಯುಕ್ತವಾಗುತ್ತದೆ.



ಮಧ್ಯಮ ಬೆರಳು, ಅನಾಮಿಕ, ಬೆರಳುಗಳನ್ನು ಅಂಗುಷ್ಠಾಗ್ರದಲ್ಲಿ ಸಂಯೋಜಿಸಿದರೆ ಮೃಗೀ ಮುದ್ರೆಯಾಗುತ್ತದೆ.

**ಮಧ್ಯಮಾನಾಮಿಕಾ ಸಮ್ಯಗಂಗುಷ್ಠಾಗ್ರೇ ನಿಯೋಜಯೇತ್ ।**
**ಮೃಗೀ ಮುದ್ರೇತಿ ವಿಖ್ಯಾತಾ ಹೋಮಕಾಲೇ ಪ್ರಯೋಜಯೇತ್ ॥**

ಹೀಗೆ ಇನ್ನೂ ಅನೇಕ ಮುದ್ರೆಗಳಿವೆ. ಪ್ರಸಿದ್ಧವಾದ ಮುದ್ರೆಗಳು ನೂರೆಂಟು

ಇವೆ. ಅವುಗಳಲ್ಲಿ ಐವತ್ತೈದು ಮುದ್ರೆಗಳು ಪೂಜೆಯಲ್ಲಿ ಸ್ವೀಕರಿಸಲಾಗಿದೆ. ಉಳಿದ ಮುವ್ವತ್ತೈದು ನಟನ, ಜಪ, ಯೋಗ, ಧ್ಯಾನಾದಿಗಳಲ್ಲಿ ಉಪಯುಕ್ತವಾಗಿದೆ.

**ಅಷ್ಟೋತ್ತರ ಶತಂ ಮುದ್ರಾ ಬ್ರಹ್ಮಣಾ ಯಾಃ ಪ್ರಕೀರ್ತಿತಾಃ ।**
**ತಾಸಾಂ ತು ಪಂಚ ಪಂಚಾಶದೇತಾಃ ಗ್ರಾಹ್ಯಾಸ್ತು ಪೂಜನೇ ॥**

ಹೀಗೆ ಮೇರು ಮುದ್ರೆ ಇದು ಆ ನೈವೇದ್ಯವು ಪರ್ವತದಷ್ಟು ಪರಿಮಾಣ ವೃದ್ಧಿಯಾಗಲೆಂದು ತೋರಿಸುವುದು.

## ೧೮. ಪಂಚಾಮೃತದ ಬಗ್ಗೆ ವಿವರಣೆ :

ಪೂಜೆಯಲ್ಲಿ ಮೊದಲು ದೇಹಶುದ್ಧಿಗಾಗಿ ಪಂಚಗವ್ಯವನ್ನು ಸ್ವೀಕರಿಸಬೇಕು. ಪಂಚಗವ್ಯದಲ್ಲಿ ಹಾಲು, ಮೊಸರು, ತುಪ್ಪ, ಗೋಮೂತ್ರ, ಗೋಮಯಗಳೆಂಬ ಗೋವಿನ ವಿಕಾರವೇ ಆದ ಪಂಚವಸ್ತುಗಳಿರುತ್ತವೆ. ಪಂಚಾಮೃತದಲ್ಲಿ ಪಂಚವಸ್ತುಗಳಿದ್ದರೂ ಜೇನುತುಪ್ಪ ಹಾಗೂ ಇಕ್ಷುರಸಗಳು ಗವ್ಯಗಳಲ್ಲ. ಈ ಕಾರಣದಿಂದಲೇ ಪಂಚಗವ್ಯವು ಪಂಚಾಮೃತಕ್ಕಿಂತಲೂ ಶ್ರೇಷ್ಠವಾಗಿದೆ. ಪಂಚಾಮೃತದಲ್ಲಿರುವ ಭಗವಂತನ ರೂಪಗಳು ಆವಾಹಿತ ಪ್ರತಿಮೆಯಲ್ಲಿರುವ ಬಿಂಬರೂಪ-ದಿಂದ ಅಭಿನ್ನವೆಂಬ ಅನುಸಂಧಾನವೇ ಪಂಚಾಮೃತಾಭಿಷೇಕ. ಪಂಚಾಮೃತದಲ್ಲಿ ಭಗವಂತನನ್ನು ಆವಾಹಿಸಿ ಸ್ಥಾಪಿಸಿ ಪೂಜಿಸಬೇಕು.

**ಪಂಚಾಮೃತಾನಾಂ ಕಲಶಾನ್ ಸ್ಥಾಪಯೇತ್ ಪೂಜಯೇದಿತಿ ॥**

- **ಪಂಚಾಮೃತದ ಫಲ :**

ಪೂಜಕನು ನಾನಾ ವಿಧವಾದ ಅಪರಾಧಗಳನ್ನು ತಿಳಿದೊ, ತಿಳಿಯದೆಯೋ ಕ್ಷಣಕ್ಷಣಕ್ಕೂ ಮಾಡುತ್ತಿರುವನು. ಆ ಪಾಪಗಳೆಲ್ಲವೂ ಪಂಚಾಮೃತಾಭಿಷೇಕದಿಂದ ಪರಿಹಾರವಾಗುವುವು.

**ಕ್ಷೀರಾಭಿಷೇಕ :**

ಕ್ಷೀರದಲ್ಲಿ ಭಗವಂತನ 354 ರೂಪಗಳಿದ್ದು ಕ್ಷೀರದಲ್ಲಿರುವ ಭಗವಂತನ ಮಧುರ ರೂಪಕ್ಕೆ "ವಿಶದ" ಎಂದು ಹೆಸರು.

**ಚತುಃಪಂಚಾಶದಧಿಕತ್ರಿಶತಾನಿ ತಥಾ ಕವಿಃ।**
**ಜಾನೀಯಾತ್ ಕ್ಷೀರಗಾನ್ಯೇವ ತತಾ ಘೃತಗತಾನಿ ವೈ ॥**
**'ವಿಶದಂ ಕ್ಷೀರಮಾಧುರ್ಯಂ' ಸ್ಥಿರಮಾಜ್ಯಸ್ಯ ತೀಕ್ಷ್ಣಕಂ।**
**ಗುಡಸ್ಯ ಪನಸಾದೀನಾಂ ನಿರ್ಹಾರೀತ್ಯಭಿಧೀಯತೇ ॥**

ಕ್ಷೀರಾಭಿಷೇಕವನ್ನು ಮಾಡಿದ ಪುರುಷನು ಹಾಲು ಹರಿಯುವ ನದಿಗಳಿರುವ ಪಾಯಸ ಕರ್ದಮವಿರುವ ಲೋಕಗಳನ್ನು ಹೊಂದುವನು.

**ಯೇಷು ಕ್ಷೀರವಹಾ ನದ್ಯೋ ಹ್ರದಾಃ ಪಾಯಸಕರ್ದಮಾಃ।**
**ತಾನ್ ಲೋಕಾನ್ ಪುರುಷಾ ಯಾಂತಿ ಕ್ಷೀರಸ್ನಪನಕಾ ಹರೇಃ ॥**

- **ಗಂಧೋದಕ ಸ್ನಾನ :**

ಗಂಧವನ್ನು ನೀರಾಗಿಸಿ ಅದನ್ನು ಶಂಖದೊಳಗೆ ಹಾಕಿಕೊಂಡು ಗಂಧೋದಕದಿಂದ ಭಗವಂತನಿಗೆ ಅಭಿಷೇಕಿಸಿದರೆ ನೂರು ವರ್ಷಗಳ ಕಾಲ ನಿರಂತರವಾಗಿ ಭಗವಂತನ ಪ್ರೇಮಪ್ರವಾಹವು ಭಕ್ತನಲ್ಲಿ ಹರಿಯುವುದು.

**ವಿಲೇಪಯತಿ ಗೋವಿಂದಂ ಶಂಖೇ ಕೃತ್ವಾ ತು ಚಂದನಂ।**
**ಪರಮಾತ್ಮಾ ಪರಾಂ ಪ್ರೀತಿಂ ಕರೋತಿ ಶತವಾರ್ಷಿಕೀಮ್ ॥**

ಶಂಖದಲ್ಲಿ ಕ್ಷೀರಾದಿಗಳನ್ನು ಹಾಕಿಕೊಂಡು ಅಭಿಷೇಕಿಸಿದರೆ ನೂರಾರು ಬ್ರಹ್ಮಹತ್ಯೆಗಳು ದೂರವಾಗುವುದು.

**ಶಂಖೇನ ಸ್ನಪನಂ ವಿಷ್ಣೋಃ ಬ್ರಹ್ಮಹತ್ಯಾಶತಂ ದಹೇತ್।**

- **ಪಂಚಾಮೃತಾಭಿಷೇಕ :**

ಪೂಜೆಯಲ್ಲಿ ಪಂಚಾಮೃತಾಭಿಷೇಕವೂ ಪ್ರಧಾನವಾಗಿದೆ. ಕ್ಷೀರ, ದಧಿ, ತುಪ್ಪ, ಜೇನುತುಪ್ಪ, ಸಕ್ಕರೆ, ಇವುಗಳು ಪಂಚ ಅಮೃತಪ್ರಾಯವಾದ ವಸ್ತುಗಳು. ಪಂಚಾಮೃತದಲ್ಲಿ ಐದು ಭಗವಂತನ ರೂಪಗಳಿವೆ. ಗೋವಿಂದ, ವಾಮನ, ವಿಷ್ಣು, ಮಧುಸೂದನ, ಅಚ್ಯುತ ಈ ರೂಪಗಳು ಕ್ರಮವಾಗಿ ಹಾಲು ಮೊಸರು, ತುಪ್ಪ, ಜೇನು, ಸಕ್ಕರೆ ಇವುಗಳಲ್ಲಿರುವುವು.



**ಕ್ಷೀರಾಭಿಮಾನೀ ಗೋವಿಂದಃ ದಧ್ನಿ ವಾಮನ ದೇವತಾ ।**
**ನಾರಾಯಣಂ ಘೃತೇ ವಿದ್ಯಾತ್ ಮಧೌ ಚ ಮಧುಸೂದನಂ ॥**
**ಶರ್ಕರಾಯಾಮಚ್ಯುತಂ ಚ ॥**

- **ಪಂಚಾಮೃತ ಪಾತ್ರ ಪೂಜೆ :**

**ಕ್ಷೀರೇ ಗೋವಿಂದಾಯ ನಮಃ ಗೋವಿಂದಮಾವಾಹಯಾಮಿ ।**
**ದಧಿನಿ ವಾಮನಾಯನಮಃ ವಾಮನಮಾವಾಹಯಾಮಿ ।**
**ಘೃತೇ ವಿಷ್ಣವೇ ನಮಃ ವಿಷ್ಣುಮಾವಾಹಯಾಮಿ ।**
**ಮಧುನಿಮಧುಸೂದನಯ ನಮಃ ಮಧುಸೂದನಾಮಾವಾಹಯಾಮಿ।**
**ಶರ್ಕರೇ ಅಚ್ಯುತಾಯ ನಮಃ ಅಚ್ಯುತಮಾವಾಹಯಾಮಿ ॥**

ಹೀಗೆ ಸ್ಮರಿಸುತ್ತಾ ತುಲಸೀದಳವನ್ನು ಹಾಕಬೇಕು.

- **ದಿಕ್ಕಿನ ನಿಯಮ :**

ಚತುರಸ್ರಮಂಡಲವನ್ನು ಬರೆದು ಶ್ರೀಕಾರವನ್ನು ಬರೆದು ಪಂಚಾಮೃತ–ಪಾತ್ರೆಗಳನ್ನು ಹೀಗೆ ಇಡಬೇಕು.

ಪೂರ್ವದಿಕ್ಕಿನಲ್ಲಿ ಮೊಸರು, ಪಶ್ಚಿಮದಲ್ಲಿ ಜೇನುತುಪ್ಪ, ದಕ್ಷಿಣದಲ್ಲಿ ತುಪ್ಪ, ಉತ್ತರದಲ್ಲಿ ಕಬ್ಬಿನರಸ, ಇವುಗಳ ಮಧ್ಯೆ ಕ್ಷೀರವನ್ನಿಡಬೇಕು.

**ಮಧ್ಯೇ ದುಗ್ಧಮ, ದಧಿ ಪ್ರಾಚ್ಯಾಂ, ದಕ್ಷಿಣೇ ಘೃತಮೇವ ಚ ।**
**ಉತ್ತರೇ ಮದು ಸಂಯೋಜ್ಯಂ ಶರ್ಕರಾ ಪಶ್ಚಿಮಾ ಭವೇತ್ ॥**
**ಮಧ್ಯೇ ಕ್ಷೀರಂ ತು ದಧ್ಯಾದಿ ನ್ಯಸೇತ್ ಪೂರ್ವಾದಿ ದಿಕ್ಷು ಚ ।**

ಹೀಗೆ ಪಂಚಾಮೃತದ ಪಾತ್ರೆಗಳನ್ನಿರಿಸಿ ಶಂಖೋದಕದಿಂದ ಪ್ರೋಕ್ಷಿಸಿ, ತುಲಸೀದಳಗಳನ್ನು ಹಾಕಬೇಕು. ಅನಂತರ **'ಆಪ್ಯಾಯಸ್ವ ಸಮೇತು ತೇ'** ಎಂಬ ಮಂತ್ರದಿಂದ ಹಾಲಿನಲ್ಲಿ ಗೋವಿಂದನನ್ನು ಆವಾಹಿಸಬೇಕು. ದಧಿ ಪಾತ್ರೆಯಲ್ಲಿ ವಾಮನನ್ನು **"ದಧಿಕ್ರಾವ್ಣೋ"** ಎಂಬ ಮಂತ್ರದಿಂದಲೂ, ತುಪ್ಪದ ಪಾತ್ರೆಯಲ್ಲಿ ನಾರಾಯಣನನ್ನು (ವಿಷ್ಣು) **'ಘೃತಂ ಮಿಮಿಕ್ಷೇ'** ಎಂಬ ಮಂತ್ರದಿಂದಲೂ, ಜೇನಿನಲ್ಲಿ – **'ಮಧುವಾತಾ ಋತಾಯತೇ'**

ಎಂಬ ಮಂತ್ರದಿಂದ ಮಧುಸೂದನನ್ನು ಕಬ್ಬಿನರಸ ಅಥವಾ ಸಕ್ಕರೆಯಲ್ಲಿ ಅಚ್ಯುತನನ್ನು **'ಸ್ವಾಧುಃ ಪವಸ್ವ'** ಎಂಬ ಮಂತ್ರದಿಂದಲೂ ಆವಾಹಿಸಬೇಕು. ನಂತರ ಕಲಶ ಪೂಜೆಯನ್ನು ಮಾಡಿದಂತೆ ಈ ದ್ರವ್ಯಗಳಿಗೆ ಅಭಿಮಾನಿಗಳ ಅಂತರ್ಯಾಮಿಯಾದ ಭಗವಂತನನ್ನು ಆವಾಹಿಸಿ ಅರ್ಘ್ಯ, ಪಾದ್ಯ ಮುಂತಾದ ನೀರಾಜನದವರೆಗೂ ಪೂಜೆ ಮಾಡಬೇಕು. ಇವುಗಳ ಜೊತೆಗೆ ಮಾವು, ಬಾಳೇಹಣ್ಣು, ದಾಳಿಂಬೆ, ದ್ರಾಕ್ಷಿ, ಗೋಡಂಬಿ ಮುಂತಾದ ವಸ್ತುಗಳನ್ನು ಸೇರಿಸುವುದಿದ್ದರೆ **"ಫಲೇಷು ನಾರಾಯಣ-ಮಾಹವಾಯಾಮಿ"** ಎಂದು ನಾರಾಯಣನನ್ನು **"ಯಾ ಫಲಿನೀಃ ಯಾ ಅಫಲಾ"** ಇತ್ಯಾದಿ ಮಂತ್ರಗಳಿಂದ ಆವಾಹಿಸಬೇಕು.

**ಪಂಚಾಮೃತದೇವತಾಭ್ಯೋ ನಮಃ**

**ಧ್ಯಾನಾವಾಹನಾದಿ ಷೋಡಶೋಪಚಾರ ಪೂಜಾಂ ಸಮರ್ಪಯಾಮಿ।**

ಎಂದು ಪೂಜಿಸಬೇಕು. ಹೀಗೆ ಪಾತ್ರೆಗಳ ಪೂಜೆಯನ್ನು ಮಾಡಿ ತಾರ್ಕ್ಷ್ಯ, ಧೇನು, ಶಂಖ, ಚಕ್ರ, ಗದಾ ಮುದ್ರೆಗಳನ್ನು ತೋರಿಸಿ **"ಓಂ ನಮೋ ನಾರಾಯಣಾಯ ಓಂ"** ಎಂದು ಎಂಟು ಬಾರಿ ಜಪಿಸಿ, ವಿಷ್ಣು ಗಾಯತ್ರೀಯನ್ನು ಪಠಿಸಿ ಅಭಿಮಂತ್ರಿಸಬೇಕು.

ಭಗವಂತನಿಗೆ ಕ್ಷೀರಾಭಿಷೇಕ ಮಾಡುವ ಪುರುಷನು ಏಳು ಜನ್ಮಗಳಲ್ಲಿ ಆನಂದ, ಆರೋಗ್ಯ, ಆಹ್ಲಾದ, ಸ್ವಾಮಿತ್ವಾದಿಗಳನ್ನು ಪಡೆಯುವನು.

**ಆಹ್ಲಾದಂ ನಿರ್ವೃತಿಂ ಸ್ವಾಮ್ಯಮಾರೋಗ್ಯಂ ಚಾನುರೂಪತಾಮ್ ।**
**ಸಪ್ತಜನ್ಮಸ್ವವಾಪ್ನೋತಿ ಕ್ಷೀರಸ್ನಾನಪರೋ ಹರೇಃ ॥**

ಹಾಲಿನ ಅಭಿಷೇಕದಿಂದ ನೂರು ತಪ್ಪುಗಳನ್ನು ಭಗವಂತನು ಸಹಿಸುವನು. ಮೊಸರಿನಿಂದ ಸಾವಿರ ತಪ್ಪುಗಳನ್ನು ಕ್ಷಮಿಸುವನು. ತುಪ್ಪದಿಂದ ಹತ್ತುಸಾವಿರ ತಪ್ಪುಗಳನ್ನು, ಜೇನಿನ ಅಭಿಷೇಕದಿಂದ ಲಕ್ಷಾಪರಾಧಗಳನ್ನು, ಇಕ್ಷುರಸದಿಂದ ಅಥವಾ ಸಕ್ಕರೆಯಿಂದ ಹತ್ತು ಲಕ್ಷಾಪರಾಧಗಳನ್ನು ಎಳೆನೀರಿನಿಂದ ಒಂದು ಕೋಟಿ ಅಪರಾಧಗಳನ್ನು ಕ್ಷಮಿಸುವನು. ಗಂಧ, ತುಲಸೀಕಾಷ್ಠ ಇವುಗಳಿಂದ ಮಿಶ್ರಿತವಾದ ಗಂಧೋದಕದಿಂದ ಲೆಕ್ಕವಿಲ್ಲದಷ್ಟು ಪಾಪಫಲವನ್ನು ಪರಿಹರಿಸುವನು.

**ದಶಾಪರಾಧಂ ತೋಯೇನ ಕ್ಷೀರೇಣ ಕ್ಷಮತೇ ಶತಂ।**
**ಸಹಸ್ರಂ ಕ್ಷಮತೇ ದಧ್ನಾ ಘೃತೇನ ಕ್ಷಮತೇಽಯುತಂ॥**

**ಮಧುನಾ ಕ್ಷಮತೇ ಲಕ್ಷಂ ಇಕ್ಷುಣಾ ದಶಲಕ್ಷಕಂ।**
**ನಾರಿಕೇಲಾಂಬುನಾ ಕೋಟಿಂ ಅನಂತಂ ಗಂಧವಾರಿಣಾ॥**

ಮೊಸರಿನಿಂದ ಅಭಿಷೇಕಿಸಿದರೆ ಕ್ಷೀರಾಭಿಷೇಕದಿಂದ ಬರುವ ಪುಣ್ಯಕ್ಕಿಂತಲೂ ನೂರು ಪಟ್ಟು ಫಲಾಧಿಕ್ಯವು, ಘೃತದಿಂದ ಸಾವಿರ ಪಟ್ಟು ಫಲವೂ, ಜೇನಿನಿಂದ ಹತ್ತು ಸಾವಿರ ಪಟ್ಟು ಫಲವನ್ನು ನೀಡುತ್ತದೆ.

**ಕ್ಷೀರಾದ್ದಶಗುಣಂ ಕ್ಷೌದ್ರಂ ಸ್ವಾದೂದಂ ಚ ದಶೋತ್ತರಂ।**
**ಘೃತಾದ್ದಶಗುಣಂ ಕ್ಷೌದ್ರಂ ಸ್ವಾದೂದಂ ಚ ದಶೋತ್ತರಂ॥**

ಹೀಗೆ ಪಂಚಾಮೃತ ಸ್ನಾನವು ಭಗವಂತನಿಗೆ ಅತಿಪ್ರಿಯವಾದ್ದರಿಂದ ಪೂಜೆಯಲ್ಲಿ ಪ್ರಧಾನವಾದ ಅಂಗವಾಗಿದೆ.

**ಪಂಚಾಮೃತದಲ್ಲಿ ಫಲಗಳು** : ಎಳೆನೀರನ್ನು ಅಭಿಷೇಕ ಮಾಡುವುದನ್ನೇ ಫಲೋದಕ ಎನ್ನಲಾಗಿದೆ. ಆದರೆ ಇದರ ಜೊತೆಗೆ ಹಲಸು, ಬಾಳೆಹಣ್ಣು, ಮಾವು, ಮಾದಲಫಲ, ಕಿತ್ತಲೆ, ಹೆಬ್ಬಲಸು ಇವುಗಳನ್ನು 'ಫಲೋದಕ' ಎಂದು ಕರೆಯಲಾಗಿದೆ.

**ಪನಸಂ ನಾರಿಕೇಲಂ ಚ ಮಾತುಲುಂಗದ್ವಯಂ ತಥಾ।**
**ನಾರಂಗಂ ಲಿಕುಚಂ ಚೈವ ಚೂತಮೇತತ್ ಫಲೋದಕಮ್॥**

**ಕ್ಷೀರಾದಿಗಳ ಪ್ರತ್ಯಾಮ್ನಾಯ** : ಕ್ಷೀರವ್ರತಾದಿಗಳಲ್ಲಿ ಹಾಲನ್ನು ಉಪಯೋಗಿಸಬಾರದು. ಆ ಸಮಯದಲ್ಲಿ ಹಾಲಿನ ಸ್ಥಾನವನ್ನು ಮೊಸರೇ ತುಂಬುತ್ತದೆ. ಹಾಗೆಯೇ ದಧಿಯ ಅಭಾವವಿದ್ದಾಗ ಹಾಲೇ ದಧಿಯಾಗಿ ಕೆಲಸ ಮಾಡುತ್ತದೆ.

**ಅಲಾಭೇ ದಧಿನಿ ಕ್ಷೀರ ಕ್ಷೀರಾಭಾವೇ ಭವೇದ್ ದಧಿ।**

- **ಪಂಚಾಮೃತ ದ್ರವ್ಯ ಪೂಜೆ :**

ಪಂಚಾಮೃತವೆಂದರೆ ಹಸುವಿನ ಹಾಲು (ಡೈರಿ ಹಾಲಲ್ಲ), ಮೊಸರು,

ತುಪ್ಪ, ಜೇನುತುಪ್ಪ, ಸಕ್ಕರೆ ಈ ಐದೂ ಸೇರಿದಾಗ ಪಂಚಾಮೃತವೆನಿಸುತ್ತದೆ.

ಇದರ ಜೊತೆಗೆ ಬಾಳೆಹಣ್ಣು, ಮಾವು, ಎಳೆನೀರು, ಕಬ್ಬಿನ ರಸ, ಗೋಡಂಬಿ, ದ್ರಾಕ್ಷಿ ಮೊದಲಾದವುಗಳನ್ನೂ ಭಗವಂತನಿಗೆ ಅರ್ಪಿಸುವ ಪದ್ಧತಿಯಿದೆ.

ಪಂಚಾಮೃತದಿಂದ ಅಭಿಷೇಕದಿಂದ ಭಗವಂತನು ಅತ್ಯಂತ ಪ್ರೀತನಾಗುವನು. ವಿಶೇಷ ದಿವಸಗಳಲ್ಲಿ ಪ್ರತಿಮಾ ಪೂಜಾ ಕಾಲದಲ್ಲೂ ಪಂಚಾಮೃತಾಭಿಷೇಕವನ್ನು ಮಾಡುವ ಸಂಪ್ರದಾಯವಿದೆ. ಶ್ರೀಮಠಗಳಲ್ಲಿ ಯುಗಾದಿ, ದೀಪಾವಳಿಯ ವಿಶೇಷವಾಗಿ ಸಂಸ್ಥಾನ ಪ್ರತಿಮೆಗಳನ್ನು ಅಭಿಷೇಕಿಸುವ ಪದ್ಧತಿಯಿದೆ.

ಕೇವಲ ಕ್ಷೀರಾಭಿಷೇಕದಿಂದಲೇ ಅಶ್ವಮೇಧ ಫಲವು ಪಂಚಾಮೃತದಿಂದ ಹೇಳುವುದೇನು.

**ಕುರ್ವಂತಿ ಕ್ಷೀರಸ್ನಪನಂ ಯೇ ನರಾ ಕೃಷ್ಣಮೂರ್ಧನಿ ।**
**ಜ್ಞಾತ್ವಾಶ್ವಮೇಧಜಂ ಪುಣ್ಯಂ ಬಿಂದುನಾ ಬಿಂದುನಾ ಸ್ಮೃತಮ್ ॥**

- **ಪಂಚಾಮೃತ ದ್ರವ್ಯ ಹೇಗಿರಬೇಕು :**

ಪಾದ್ಮಸಂಹಿತೆಯ ಪ್ರಕಾರ ಪಂಚಾಮೃತದಲ್ಲಿ ಬಳಸುವ ಹಾಲು, ಕರುವು ಇಲ್ಲದಿರುವ ಗೋವಿನದಾಗಿರಬಾರದು. ರೋಗಿಷ್ಠ ಅಥವಾ ಗರ್ಭಿಣಿಯಾಗಿರುವ, ಕರು ಹಾಕಿರುವ ದಿನದಿಂದ ಹತ್ತು ದಿನ ಮುಗಿಯದ ಹಸುವಿನ ಹಾಲು ನಿಷಿದ್ಧವೆಂದು ತಿಳಿಸಿದೆ.

**ನಾರ್ತಾಯಾಂ ನ ಗರ್ಭಿಣ್ಯಾಂ ನ ವತ್ಸಯಾಂ ಕದಾಚನ ।**

ಆಗಲೇ ಕಾಯಿಸಿದ್ದ ತುಪ್ಪವು, ಒಂದು ಆಹೋರಾತ್ರದಲ್ಲಿದ್ದ ಮೊಸರು, ಆಗ ತಾನೇ ಕರೆದ ಹಾಲು ಶ್ರೇಷ್ಠವು.

**ಸದ್ಯಃ ತಪ್ತಘೃತಂ ಶುದ್ಧಮಹೋರಾತ್ರೋಷಿತಂ ದಧಿ ।**
**ಕ್ಷೀರಂ ಗ್ರಾಹ್ಯಂ ಮತಪ್ತಂ ಚ ದಶಾಹಾತ್ ಜನ್ಮನಃ ಪರಂ ॥**



- **ಪಂಚಾಮೃತದ್ರವ್ಯ ಪರಿಮಾಣ :**

ಹಾಲು, ಮೊಸರು, ತುಪ್ಪ, ಜೇನುತುಪ್ಪ ಇವು ದ್ರೋಣ ಪರಿವಾಣದಷ್ಟಿರಬೇಕು (ದೊನ್ನೆ). ಈ ನಾಲ್ಕು ದ್ರೋಣ ಪರಿಮಾಣವಾಗಿರಬೇಕು ಅಥವಾ ಅರ್ಧ ದ್ರೋಣ ಪರಿಮಾಣವಾದರೂ ಪರವಾಗಿಲ್ಲ. ಇದಕ್ಕಿಂತ ಕಡಿಮೆ ಇದ್ದರೆ ಆ ಪೂಜೆ ಆಸುರ ಪೂಜೆಯೆನಿಸುವುದು. ಮನೆಯಲ್ಲಿ ಪ್ರತಿಮಾ ಪೂಜಾದಿಗಳ ಕಾಲದಲ್ಲಿ ಪಂಚಾಮೃತ ಅಭಿಷೇಕ ಮಾಡುವುದಾದರೆ ಒಂದು ಪ್ರಸ್ಥ ಎಂದರೆ ಒಂದು ಸೇರಿನಷ್ಟು ಹಾಲಿರಬೇಕು.

**ದ್ರೋಣ ಮಾನಂ ಪಂಚಗವ್ಯಂ ಘೃತಮಾನಂ ಚ ತಾದೃಶಂ ।**
**ಅರ್ಧಂ ವಾ ಸ್ಯಾದಾಢಕಂ ವಾ ನ್ಯೂನಂ ಚೇತ್ ಆಸುರಂ ತಥಾ ।**
**ಗೃಹಾರ್ಚಾಸ್ನಾಪನೇ ನೂನಂ ಪ್ರಸ್ಥಂ ಚೈವ ಪ್ರಕಲ್ಪಯೇತ್ ॥**

## 16. ಗಂಧದ ಬಗ್ಗೆ ವಿವರಣೆ :

ಗಂಧವು ಭಗವಂತನಿಗೆ ಅತೀ ಪ್ರಿಯವಾದದ್ದು. ಗಂಧದಲ್ಲಿ ಭಗವಂತನ ನಾನೂರಮೂರು (403) ರೂಪಗಳಿವೆ. ಗಂಧವು ಇಲ್ಲದೆ ಷೋಡಶೋಪಚಾರ ಪೂಜೆಯಾಗುವುದಿಲ್ಲ.

- **ಗಂಧದಲ್ಲಿರಬೇಕಾದ ವಸ್ತುಗಳು :**

ಅಗರು, ತುಲಸೀಕಾಷ್ಠ, ಕದಂಬ, ದೇವದಾರು, ಬಿಲ್ವ, ಅಗಸ್ತೀ, ಚಂದನ, ಕುಂಕುಮ, ಕೇಸರೀ ಇವು ಎಂಟು ವಸ್ತುಗಳಿಂದ ಕೂಡಿದ ಗಂಧವು ಅಷ್ಟಗಂಧವೆನಿಸಿದ್ದು ವಿಷ್ಣು ಪ್ರಿಯವಾಗಿದೆ.

**ಅಗರುಸ್ತುಲಸೀಕಾಷ್ಠಂ ಕದಂಬಂ ದೇವದಾರುಕಮ್ ।**
**ಬಿಲ್ವಾಗಸ್ತೀ ಚಂದನಂ ಚ ಕುಂಕುಮಂ ಚೇತಿ ಚಾಷ್ಟಮಂ ॥**

- **ಪಂಚಗಂಧ :**

ಶ್ರೀಗಂಧ, ಕೇಸರೀ, ತುಲಸೀಕಾಷ್ಠ, ಪಚ್ಚೆಕರ್ಪೂರ, ಅಗರು ಈ ಐದು ವಸ್ತುಗಳಿಂದ ತಯಾರಾದ ಗಂಧವು ಪಂಚಗಂಧವೆನಿಸುತ್ತದೆ.

ತುಪ್ಪ, ಜೇನುತುಪ್ಪ, ಸಕ್ಕರೆ ಈ ಐದೂ ಸೇರಿದಾಗ ಪಂಚಾಮೃತವೆನಿಸುತ್ತದೆ.

ಇದರ ಜೊತೆಗೆ ಬಾಳೆಹಣ್ಣು, ಮಾವು, ಎಳೆನೀರು, ಕಬ್ಬಿನ ರಸ, ಗೋಡಂಬಿ, ದ್ರಾಕ್ಷಿ ಮೊದಲಾದವುಗಳನ್ನೂ ಭಗವಂತನಿಗೆ ಅರ್ಪಿಸುವ ಪದ್ಧತಿಯಿದೆ.

ಪಂಚಾಮೃತದಿಂದ ಅಭಿಷೇಕದಿಂದ ಭಗವಂತನು ಅತ್ಯಂತ ಪ್ರೀತನಾಗುವನು. ವಿಶೇಷ ದಿವಸಗಳಲ್ಲಿ ಪ್ರತಿಮಾ ಪೂಜಾ ಕಾಲದಲ್ಲೂ ಪಂಚಾಮೃತಾಭಿಷೇಕವನ್ನು ಮಾಡುವ ಸಂಪ್ರದಾಯವಿದೆ. ಶ್ರೀಮಠಗಳಲ್ಲಿ ಯುಗಾದಿ, ದೀಪಾವಳಿಯ ವಿಶೇಷವಾಗಿ ಸಂಸ್ಥಾನ ಪ್ರತಿಮೆಗಳನ್ನು ಅಭಿಷೇಕಿಸುವ ಪದ್ಧತಿಯಿದೆ.

ಕೇವಲ ಕ್ಷೀರಾಭಿಷೇಕದಿಂದಲೇ ಅಶ್ವಮೇಧ ಫಲವು ಪಂಚಾಮೃತದಿಂದ ಹೇಳುವುದೇನು.

**ಕುರ್ವಂತಿ ಕ್ಷೀರಸ್ನಪನಂ ಯೇ ನರಾ ಕೃಷ್ಣಮೂರ್ಧನಿ।**
**ಜ್ಞಾತ್ವಾಶ್ವಮೇಧಜಂ ಪುಣ್ಯಂ ಬಿಂದುನಾ ಬಿಂದುನಾ ಸ್ಮೃತಮ್ ॥**

- **ಪಂಚಾಮೃತ ದ್ರವ್ಯ ಹೇಗಿರಬೇಕು :**

ಪಾದ್ಮಸಂಹಿತೆಯ ಪ್ರಕಾರ ಪಂಚಾಮೃತದಲ್ಲಿ ಬಳಸುವ ಹಾಲು, ಕರುವು ಇಲ್ಲದಿರುವ ಗೋವಿನದಾಗಿರಬಾರದು. ರೋಗಿಷ್ಠ ಅಥವಾ ಗರ್ಭಿಣಿಯಾಗಿರುವ, ಕರು ಹಾಕಿರುವ ದಿನದಿಂದ ಹತ್ತು ದಿನ ಮುಗಿಯದ ಹಸುವಿನ ಹಾಲು ನಿಷಿದ್ಧವೆಂದು ತಿಳಿಸಿದೆ.

**ನಾರ್ತಾಯಾಂ ನ ಗರ್ಭಿಣ್ಯಾಂ ನ ವತ್ಸಯಾಂ ಕದಾಚನ।**

ಆಗಲೇ ಕಾಯಿಸಿದ್ದ ತುಪ್ಪವು, ಒಂದು ಆಹೋರಾತ್ರದಲ್ಲಿದ್ದ ಮೊಸರು, ಆಗ ತಾನೇ ಕರೆದ ಹಾಲು ಶ್ರೇಷ್ಠವು.

**ಸದ್ಯಃ ತಪ್ತಘೃತಂ ಶುದ್ಧಮಹೋರಾತ್ರೋಷಿತಂ ದಧಿ।**
**ಕ್ಷೀರಂ ಗ್ರಾಹ್ಯಂ ಮತಪ್ತಂ ಚ ದಶಾಹಾತ್ ಜನ್ಮನಃ ಪರಂ॥**



- **ಪಂಚಾಮೃತದ್ರವ್ಯ ಪರಿಮಾಣ :**

ಹಾಲು, ಮೊಸರು, ತುಪ್ಪ, ಜೇನುತುಪ್ಪ ಇವು ದ್ರೋಣ ಪರಿಮಾಣದಷ್ಟಿರಬೇಕು (ದೊನ್ನೆ). ಈ ನಾಲ್ಕು ದ್ರೋಣ ಪರಿಮಾಣವಾಗಿರಬೇಕು ಅಥವಾ ಅರ್ಧ ದ್ರೋಣ ಪರಿಮಾಣವಾದರೂ ಪರವಾಗಿಲ್ಲ. ಇದಕ್ಕಿಂತ ಕಡಿಮೆ ಇದ್ದರೆ ಆ ಪೂಜೆ ಆಸುರ ಪೂಜೆಯೆನಿಸುವುದು. ಮನೆಯಲ್ಲಿ ಪ್ರತಿಮಾ ಪೂಜಾದಿಗಳ ಕಾಲದಲ್ಲಿ ಪಂಚಾಮೃತ ಅಭಿಷೇಕ ಮಾಡುವುದಾದರೆ ಒಂದು ಪ್ರಸ್ಥ ಎಂದರೆ ಒಂದು ಸೇರಿನಷ್ಟು ಹಾಲಿರಬೇಕು.

**ದ್ರೋಣ ಮಾನಂ ಪಂಚಗವ್ಯಂ ಘೃತಮಾನಂ ಚ ತಾದೃಶಂ ।**
**ಅರ್ಧಂ ವಾ ಸ್ಯಾದಾಢಕಂ ವಾ ನ್ಯೂನಂ ಚೇತ್ ಆಸುರಂ ತಥಾ ।**
**ಗೃಹಾರ್ಚಾಸ್ನಾಪನೇ ನೂನಂ ಪ್ರಸ್ಥಂ ಚೈವ ಪ್ರಕಲ್ಪಯೇತ್ ॥**

## 16. ಗಂಧದ ಬಗ್ಗೆ ವಿವರಣೆ :

ಗಂಧವು ಭಗವಂತನಿಗೆ ಅತೀ ಪ್ರಿಯವಾದದ್ದು. ಗಂಧದಲ್ಲಿ ಭಗವಂತನ ನಾನೂರಮೂರು (403) ರೂಪಗಳಿವೆ. ಗಂಧವು ಇಲ್ಲದೆ ಷೋಡಶೋಪಚಾರ ಪೂಜೆಯಾಗುವುದಿಲ್ಲ.

- **ಗಂಧದಲ್ಲಿರಬೇಕಾದ ವಸ್ತುಗಳು :**

ಅಗರು, ತುಲಸೀಕಾಷ್ಠ, ಕದಂಬ, ದೇವದಾರು, ಬಿಲ್ವ, ಅಗಸ್ತೀ, ಚಂದನ, ಕುಂಕುಮ, ಕೇಸರೀ ಇವು ಎಂಟು ವಸ್ತುಗಳಿಂದ ಕೂಡಿದ ಗಂಧವು ಅಷ್ಟಗಂಧವೆನಿಸಿದ್ದು ವಿಷ್ಣು ಪ್ರಿಯವಾಗಿದೆ.

**ಅಗರುಸ್ತುಲಸೀಕಾಷ್ಠಂ ಕದಂಬಂ ದೇವದಾರುಕಮ್ ।**
**ಬಿಲ್ವಾಗಸ್ತೀ ಚಂದನಂ ಚ ಕುಂಕುಮಂ ಚೇತಿ ಚಾಷ್ಟಮಂ ॥**

- **ಪಂಚಗಂಧ :**

ಶ್ರೀಗಂಧ, ಕೇಸರೀ, ತುಲಸೀಕಾಷ್ಠ, ಪಚ್ಚೆಕರ್ಪೂರ, ಅಗರು ಈ ಐದು ವಸ್ತುಗಳಿಂದ ತಯಾರಾದ ಗಂಧವು ಪಂಚಗಂಧವೆನಿಸುತ್ತದೆ.

- **ಶ್ರೀಗಂಧದ ಶ್ರೇಷ್ಠತೆ :**

ಶ್ರೀಗಂಧವೇ ಭಗವದರ್ಚನೆಯಲ್ಲಿ ಪ್ರಧಾನವಾದದ್ದು, ಶ್ರೀಗಂಧವನ್ನು ಸರ್ವಪ್ರಯತ್ನದಿಂದಲೂ ಸಂಪಾದಿಸಿ ಅರ್ಪಿಸಬೇಕು.

**ಸರ್ವೇಷು ಗಂಧಜಾತೇಷು ಪ್ರಶಸ್ತೋ ಮಲಯಜೋದ್ಭವಃ।**

- **ಗಂಧವನ್ನು ಉಂಡೆ ಮಾಡಿ ಅರ್ಪಿಸಬೇಕು :**

ದ್ರವೀಭೂತವಾದ ತುಪ್ಪವನ್ನು, ದ್ರವೀಭೂತವಾದ ಗಂಧವನ್ನು ಭಗವಂತನಿಗೆ ಅರ್ಪಿಸಬಾರದು. ಭಗವಂತನ ಪ್ರೀತಿಗೋಸ್ಕರ ಉಂಡೆಯಾಗಿ ಮಾಡಿ ಗಂಧವನ್ನು ಅರ್ಪಿಸಬೇಕು.

**ದ್ರವೀಭೂತಂ ಘೃತಂ ಚೈವ ದ್ರವೀಭೂತಂ ಚ ಚಂದನಮ್ ।**
**ನಾರ್ಪಯೇನ್ ಮಮ ತುಷ್ಟ್ಯರ್ಥಂ ಘನೀಭೂತಂ ತದರ್ಪಯೇತ್ ।**
**ಅಭಿಷೇಕೇ ತಥಾ ಹೋಮೇ ಘನೀಭೂತಂ ಘೃತಂ ವರಮ್ ॥**

- **ಶಂಖದ ಮೂಲಕ ಗಂಧಾರ್ಪಣೆ :**

ಗಂಧವನ್ನು ತೆಗೆದು ಅದನ್ನು ದೇವರ ವಸ್ತ್ರದಿಂದ ಹಿಂಡಿ ನೀರನ್ನು ತೆಗೆದು ಉಂಡೆಯಾಗಿ ತಯಾರಿಸಿ ಶಂಖಕ್ಕೆ ಸ್ಪರ್ಶಿಸಿ ಭಗವಂತನಿಗೆ ಅರ್ಪಿಸಬೇಕು. ಗಂಧವನ್ನು ಅರ್ಪಿಸುವಾಗಲೂ ತುಲಸೀದಳ ಸಹಿತವಾಗಿಯೇ ಅರ್ಪಿಸಬೇಕು. ಪ್ರತಿಮೆಗಳಿಗೆ ದ್ವಾದಶನಾಮದಂತೆ ಗಂಧವನ್ನು ಹಚ್ಚುವುದಾದರೆ ಗಂಧದಲ್ಲಿರುವ ನೀರನ್ನು ವಸ್ತ್ರದಿಂದ ಹಿಂಡಿ ತೆಗೆದು ನಂತರ ಶುದ್ಧವಾದ ನೀರನ್ನು ಸೇರಿಸಿ ದ್ವಾದಶನಾಮವನ್ನು ತಿದ್ದಬಹುದು.

**ಘನೀಭೂತಂ ಚಂದನಂ ತು ಕಸ್ತೂರೀಕುಂಕುಮಾದಿಕಮ್ ।**
**ತುಲಸೀಮಿಶ್ರಿತಂ ಸರ್ವಂ ವಿಷ್ಣವೇ ತು ಸಮರ್ಪಯೇತ್ ॥**

**ವಿಲೇಪಯಂತಿ ದೇವೇಶಂ ಕೃತ್ವಾ ಶಂಖೇ ತು ಚಂದನಂ।**
**ಪರಮಾತ್ಮಾ ಪರಾಂ ಪ್ರೀತಿಂ ಕರೋತಿ ಶತವಾರ್ಷಿಕೀಮ್ ॥**

– ಕಪಿಂಜಲ ಸಂಹಿತೆ

- **ಒಣಗಿದ ಗಂಧಾರ್ಪಣೆ ನಿಷಿದ್ಧ :**

ಹಿಂದಿನ ದಿನ ತೆಗೆದ ಗಂಧವು ಒಣಗಿರುವುದು. ಅದನ್ನೇ ಅಥವಾ ಎರಡು ಮೂರು ದಿವಸಗಳಿಗೆ ಬೇಕಾಗುವಷ್ಟು ಗಂಧವನ್ನು ಬಿಡುವಿದ್ದ ದಿನದಲ್ಲೇ ತೆಗೆದು ಅದನ್ನೇ ಪುನಃ ಪುನಃ ಉಪಯೋಗಿಸಬಾರದು. ಅಂದು ತೆಗೆದ ಗಂಧಾಕ್ಷತೆಗಳು ಅಂದಿನ ಪೂಜೆಯಲ್ಲೇ ಮುಗಿಸಬೇಕು. ಆರ್ದ್ರವಾದ ಗಂಧವನ್ನು ಅರ್ಪಿಸಬೇಕು.

- **ಕರಶುದ್ಧಿಯು ಅವಶ್ಯಕ :**

ಒಂದೊಂದು ಗಂಧದ ಉಂಡೆಯನ್ನು ಅರ್ಪಿಸುವಾಗಲೂ ಕೈ ತೊಳೆದು–ಕೊಂಡೇ ಅರ್ಪಿಸಬೇಕು. ಅನ್ಯಥಾ ನಿರ್ಮಾಲ್ಯವಾಗುವುದು. ಮೊದಲು ಉಂಡೆಗಳನ್ನು ಸಾಲಿಗ್ರಾಮಕ್ಕೆ ಅರ್ಪಿಸಬೇಕು. ನಂತರ ಕೈಯನ್ನು ತೊಳೆದುಕೊಂಡೇ ಇನ್ನೊಂದು ಗಂಧದುಂಡೆಯನ್ನು ಅರ್ಪಿಸಬೇಕು ಎಂದರ್ಥ. ಇಲ್ಲದಿದ್ದರೆ ಮುಂದುಮುಂದಿನ ಗಂಧಗಳು ನಿರ್ಮಾಲ್ಯವಾಗುತ್ತವೆ.

**ಅನ್ಯಥಾ ಉತ್ತರೋತ್ತರಗಂಧಾನಾಂ ನಿರ್ಮಾಲ್ಯತಾಪಾತಾತ್ ।**

–ಪೂ.ಕ.

**ಗಂಧಾರ್ಪಣ ಮಂತ್ರ –**

**ಗಂಧಾದ್ವಾರಾ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಮ್ ।**
**ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಂ ॥**

**ಶ್ರೀಖಂಡಂ ಚಂದನಂ ದಿವ್ಯಂ ನಾನಾಗಂಧಮನೋಹರಮ್ ।**
**ವಿಲೇಪನಂ ಸುರುಶ್ರೇಷ್ಠ ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್ ॥**

**ಗಂಧಮುದ್ರೆ :**

**ಕನಿಷ್ಠಾಮೂಲ ಸಂಲಗ್ನಾವಂಗುಷ್ಠೌ ಗಂಧಮುದ್ರಿಕಾ ।**

ಗಂಧವನ್ನು ಅರ್ಪಿಸುವಾಗ ಗಂಧಮುದ್ರೆಯನ್ನು ಪ್ರದರ್ಶಿಸಬೇಕು. ಎರಡು ಕೈಗಳ ಅಂಗುಷ್ಠಗಳನ್ನು ಆಯಾಯ ಕೈಗಳ ಕಿರುಬೆರಳಿನ ಕೆಳಗಿನ ಪರ್ವಗಳಿಗೆ ಸ್ಪರ್ಶಿಸಿದರೆ ಗಂಧಮುದ್ರೆಯಾಗುವುದು.

## 7. **ಅಕ್ಷತೆಯ ಬಗ್ಗೆ ವಿವರಣೆ** :

ಅಕ್ಷತೆಯನ್ನು ತಿಲಕವೆಂಬ ಪದದಿಂದ ಉಪಯೋಗಿಸಲಾಗುವುದು. ಅಕ್ಷತೆ ಎಂದರೆ ಅಲಂಕಾರಾರ್ಥವಾಗಿ ಉಪಯೋಗಿಸುವ ಭಗವದರ್ಪಿತ ವಸ್ತುವಾಗಿದೆ. ಶ್ರೀಗಂಧವನ್ನು ಲಕ್ಷ್ಮೀದೇವಿಯು ಅರ್ಪಿಸಿದರೆ ದುರ್ಗೆಯು ಅಂಗಾರಕ್ಕೆ ಅಭಿಮಾನಿಯಾಗಿದ್ದು ದುರ್ಗೆಯು ಅರ್ಪಿಸುವಳು. ಭೂದೇವಿಯು ಅಕ್ಷತೆಗೆ ಅಭಿಮಾನಿಯಾಗಿದ್ದು ಭೂದೇವಿಯೇ ಅಕ್ಷತೆಯನ್ನು ಅರ್ಪಿಸುವಳು.

**ಶ್ರೀಗಂಧೇ ತು ಶ್ರಿಯಂ ವಿದ್ಯಾತ್ ಅಕ್ಷತಾಯಾಂ ಭುವಂ ಸ್ಮರೇತ್ ।**
**ದುರ್ಗಾಮಂಗಾರಕೇ ವಿದ್ಯಾತ್ ವೈಜಯಂತ್ಯಾಂ ಸದಾಶಿವಮ್ ॥**

– ಪೂ.ಕ. 18

- **ಅಕ್ಷತೆಯಿಂದ ವಿಷ್ಣುವಿಗೆ ಪೂಜೆಯಿಲ್ಲ** ?

**'ನಾಕ್ಷತೈಃ ಅರ್ಚಯೇದ್ ವಿಷ್ಣುಂ'** ಎಂಬ ಪ್ರಮಾಣವು ಅಕ್ಷತೆಗಳಿಂದ ವಿಷ್ಣುವನ್ನು ಪೂಜಿಸಬಾರದು ಎಂದು ತಿಳಿಸಿದೆ. ಆದರೆ **ಅಕ್ಷತೆ** ಎಂಬ ಶಬ್ದವು ಸ್ತ್ರೀಲಿಂಗವಾಚಕ ಶಬ್ಧವಾಗಿದೆ. **ಅಕ್ಷತೈಃ** ಎಂಬ ಪದವಾದರೂ ಪುಲ್ಲಿಂಗ ಶಬ್ದ ಬಹುವಚನವಾಗಿದೆ. ಈ ಪದಕ್ಕೆ ಮಂತ್ರಾಕ್ಷತೆಯೆಂದು ಅರ್ಥ. **'ನಾಕ್ಷತೈಃ ಅರ್ಚಯೇದ್ ವಿಷ್ಣುಂ'** ಎಂಬಲ್ಲಿ ವಿಷ್ಣುಪದವು ಸಾಲಿಗ್ರಾಮ ಪರವಾಗಿದೆ.

**ಅತ್ರ ವಿಷ್ಣುಪದಂ ಶಾಲಿಗ್ರಾಮ ಪರಮ್** । – ಆಚಾರ ಕಿರಣ – 185

ಸಾಲಿಗ್ರಾಮಗಳ ಮೇಲೆ ಆವಾಹನಾದಿಗಳಿಗೆ ಮಂತ್ರಾಕ್ಷತೆಯನ್ನು ಹಾಕಬಾರದೆಂದು ಅರ್ಥ.

**ಶಾಲಿಗ್ರಾಮ ಶಿಲಾಮೇವ ನಾಕ್ಷತೈರರ್ಚಯೇದ್ ದ್ವಿಜಃ** । – ವಿಷ್ಣುಸ್ಮೃತಿ

- **ಗಂಧಾಕ್ಷತೇ :**

ಗಂಧದ ಜೊತೆಗೆ ಅಕ್ಷತೆ ಎಂಬ ಪದವು ಇದ್ದಾಗ ಅಕ್ಷತೆಯೆಂದರೆ ಮಂತ್ರಾಕ್ಷತೆಯಲ್ಲ.

**ಗಂಧಶ್ಚ ಅಕ್ಷತಾ ಚ ಗಂಧಾಕ್ಷತೇ** ಎಂಬ ಸಮಾಸದಂತೆ ಗಂಧವು ಹಾಗೂ ಅಕ್ಷತೆಯೇ ಆಗಿದೆ. ಅರಿಷಿಣದಿಂದ ಮಿಶ್ರಿತವಾದ ಅಕ್ಕಿಯೆ ಅಕ್ಷತಾ ಎಂದು ತಿಳಿಸಲಾಗಿದೆ.

**ತಂಡುಲಾಃ ಸಹರಿದ್ರಾಸ್ತು ಅಕ್ಷತಾಃ ಇತಿ ಕೀರ್ತಿತಾಃ** । –ಸ್ಮೃತಿ–27

ಸಂಪ್ರದಾಯದಲ್ಲೂ 'ಗಂಧಾಕ್ಷತೇ ನೀಡಿ' ಎಂದು ವ್ಯವಹರಿಸುವರು. '**ವ್ರತರಾಜ**' ಮುಂತಾದ ವ್ರತಗ್ರಂಥಗಳಲ್ಲಿ. '**ಕುಸುಮಾಕ್ಷತಾನ್ ಗೃಹೀತ್ವಾ**' ಎಂಬ ಪ್ರಯೋಗವು ಕಂಡುಬಂದಿದೆ. ಇಲ್ಲಿ ಕುಸುಮ ಶಬ್ದದ ಸಾನ್ನಿಧ್ಯದಿಂದ ಮಂತ್ರಾಕ್ಷತೆ ಎಂದೇ ಅರ್ಥ ಹಾಗೂ ಪುಲ್ಲಿಂಗ ರೂಪವನ್ನು ಗಮನಿಸಬಹುದು.

- **ಅಕ್ಷತೆಯಲ್ಲಿರಬೇಕಾದ ವಸ್ತುಗಳು :**

ಸಂಪ್ರದಾಯದಲ್ಲಿ ಅರಿಶಿಣವನ್ನು ತೇದು ಅದಕ್ಕೆ ಬಾಳೆಹಣ್ಣಿನ ಸಿಪ್ಪೆಯನ್ನು ಸುಟ್ಟ ಪುಡಿಯನ್ನು ಮಿಶ್ರಣ ಮಾಡಿದರೆ ಅಕ್ಷತೆಯಾಗುವುದು. ಕಸ್ತೂರೀ, ತುಲಸೀಕಾಷ್ಠ, ಗೋರೋಚನಾ, ಅರಿಷಿಣ, ಆಗರು, ಚಂದನ ಇವುಗಳ ಕಲ್ಕವನ್ನು ತೆಗೆದು ತಿಲಕದಂತೆ ಭಗವಂತನಿಗೆ ಅರ್ಪಿಸಬೇಕು.

**ಕುಂಕುಮಂ ತುಲಸೀಕಾಷ್ಠಂ ವೈಷ್ಣವಾಹೃತಮೃತ್ತಿಕಾ ।**
**ಗೋರೋಚನಂ ಚ ಕಸ್ತೂರೀ ಹರಿದ್ರಾಽಗರುಚಂದನಮ್ ॥**

**ಕಸ್ತೂರೀ ಕಲ್ಕಜಂ ಭಾಲೇ ತಿಲಕಂ ತು ಮಯಾ ಕೃತಂ ।**
**ಸಂಗೃಹಾಣ ಸುರಶ್ರೇಷ್ಠ ಶ್ರೀಶ ಭಕ್ತಾರ್ತಿನಾಶನ ॥**

- **ಷೋಡಶೋಪಚಾರ ಪೂಜೆಯಲ್ಲಿ ಅಕ್ಷತೆ :**

ಷೋಡಶೋಪಚಾರ ಪೂಜೆಯಲ್ಲಿ ತುಲಸೀ, ಅಕ್ಷತೆ ಮುಂತಾದವುಗಳು ಸೇರಿಲ್ಲವಾದರೂ ಪದ್ಧತಿಯಂತೆ ಉಪಯೋಗಿಸಿಕೊಂಡು ಬರಲಾಗುತ್ತಿದೆ. ಆದ್ದರಿಂದ ಪುಷ್ಪೋಪಚಾರ ಪೂಜೆಯಲ್ಲಿ ತುಲಸಿಯನ್ನು, ಗಂಧಾರ್ಪಣೆಯಲ್ಲಿ ಅಕ್ಷತೆಯನ್ನು ಉಪಲಕ್ಷಣವಾಗಿ ತೆಗೆದುಕೊಂಡು ಗಂಧಾದಿ ಉಪಚಾರ ಪೂಜೆಯಲ್ಲಿ ಅಕ್ಷತಾದಿಗಳನ್ನು ಭಗವಂತನಿಗೆ ಅರ್ಪಿಸಬೇಕು. ವಿಷ್ಣುರಹಸ್ಯದಲ್ಲಿ ವಿಷ್ಣುಪಂಚಕವನ್ನು ಕುರಿತು ತಿಳಿಸುವಾಗ 'ಗಂಧಾಕ್ಷತಾನ್' ಎಂಬ ಪದವೇ ಇದೆ.

**ಗಂಧಾಕ್ಷತಾನ್ ನ ಧಾರ್ಯೇತ ತಾಮಸೀಂ ಗತಿಮುಪ್ನುಯಾತ್ ॥**

ಅಕ್ಷತೆ ಎಂಬ ಪದವು 'ತಿಲಕ' ಎಂಬ ಪದಕ್ಕೆ ಪರ್ಯಾಯ ಪದವಾಗಿ ಉಪಯೋಗ ಮಾಡಲಾಗಿದೆ. ಈ ಹಿಂದೆಯೇ ಗುಪ್ತವಾಗಿದ್ದ ಅಕ್ಷತೆ ಅಂಗಾರ ಧಾರಣೆಯನ್ನು ಆಚಾರ್ಯ ಮಧ್ವರು ಪ್ರಕಟಗೊಳಿಸಿದರು.

**ಗಂಧಾಕ್ಷತೆ –**

ಗಂಧವನ್ನು ಧರಿಸಲು,

**ನಿರ್ಮಾಲ್ಯ ಚಂದನೇನಾಂಗಮ್ ಅಂಕಯೇತ್ ತಸ್ಯ ನಾಮಭಿಃ ।**

– ಎಂಬ ಪ್ರಮಾಣವಿದೆ.

**ಅಂಗಾರವನ್ನು ಧರಿಸಲು–**

**ವಿಷ್ಣೋರಂಗಾರಶೇಷಣ ಊರ್ಧ್ವಪುಂಡ್ರಾಂತರೇ ತು ಯಃ ।**
**ಕರೋತಿ ತೀರ್ಥತೋ ಭಕ್ತ್ಯಾ ಸ ಯಾತಿ ಹರಿಮಂದಿರಮ್ ॥**

ಊರ್ಧ್ವಪುಂಡ್ರದ ಮಧ್ಯದಲ್ಲಿ ಅಂಗಾರವನ್ನು ಹಚ್ಚಿಕೊಳ್ಳಬೇಕು.

**ಅಕ್ಷತೆ ಧರಿಸಲು –**

**ಲಲಾಟೇ ತು ಗದಾಕಾರಂ ತಿಲಕಂ ಚ ವಿಧಾರಯೇತ್ ।**

ತಿಲಕವೆಂದರೆ ಅಕ್ಷತೆಯೆಂದೆ ಮಾಧ್ವ ಸಂಪ್ರದಾಯದಲ್ಲಿ ಅರ್ಥ.

- **ಅಲಂಕಾರಾರ್ಥವಾಗಿ ಅಕ್ಷತೆ :**

ಭಗವಂತನ ರಥವಾದ ಈ ದೇಹವನ್ನು ಅಲಂಕರಿಸಿ ದ್ವಾದಶನಾಮ–ಗಳಲ್ಲೂ ಅಂಗಾರ ಅಕ್ಷತೆಯನ್ನು ಹಚ್ಚುವ ಪದ್ಧತಿಯೂ ಇದೆ. ಹೀಗೆ ಅಲಂಕೃತವಾದ ದೇಹವು ಭಗವಂತನ ಸ್ವಾಮ್ಯಕ್ಕೆ ಒಳಪಟ್ಟಿದೆ ಎಂದು ತಿಳಿಯಬೇಕು. ಏಕಾದಶಿಯೆಂದು ಯಾವುದೇ ಅಲಂಕಾರಾದಿಗಳನ್ನು ಮಾಡಿಕೊಳ್ಳಲು ಅನುಮತಿ ಇಲ್ಲದಿರುವುದರಿಂದ **'ವಿಷ್ಣೋರಂಗಾರ–ಶೇಷೇಣ'** ಎಂಬ ಪ್ರಮಾಣದಂತೆ ಅಂಗಾರವನ್ನು ಮಾತ್ರ ಧರಿಸುವ ಪದ್ಧತಿಯಿದೆ. ಏಕಾದಶಿಯಂದು ದೇವರಿಗೆ ಅರ್ಪಿಸಿದ ಗಂಧವನ್ನು ಧರಿಸಬಾರದು. ಗಂಧವು ಅಷ್ಟ ಅಲಂಕಾರ ವಸ್ತುಗಳಲ್ಲಿ ಸೇರಿದ್ದರಿಂದಲೂ,

ಏಕಾದಶಿಯಂದು ಅಲಂಕಾರಗಳು ವರ್ಜ್ಯವಾದ್ದರಿಂದಲೂ ಹರಿಗರ್ಪಿತವಾದರೂ ಧರಿಸಲು ನಿಷಿದ್ಧವಾಗಿದೆ. ಅಂಗಾರವಾದರೊ ಅಲಂಕಾರವೆಂದು ಪರಿಗಣಿತವಾಗಿಲ್ಲ. ಆದ್ದರಿಂದಲೇ ಮಡಿ ಹೆಂಗಸರು ಸರ್ವಾಲಂಕಾರ ವರ್ಜಿತರಾಗಿದ್ದರೂ ಅಂಗಾರವನ್ನು ಧರಿಸುವುದು ಪದ್ಧತಿಯಿದೆ.

**ಶ್ರೀರಾಮೋಪಾಸನಾ ಯಸ್ಯ ತಿಲಕಂ ತೂರ್ಧ್ವಪುಂಡ್ರಕಮ್ ।**
**ಭ್ರುವೋರ್ಮಧ್ಯೆ ಸಬಿಂದುಃಸ್ಯಾತ್ ಯದಿ ವಿಪ್ರ ಮನೋಹರಮ್ ॥**

ಮತ್ಸ್ಯಾದಿ ವಿಷ್ಣೋಪಾಸಕರು ಗೋಪಿಚಂದನಾದಿಗಳಿಂದ ಊರ್ಧ್ವಪುಂಡ್ರವನ್ನು ಧರಿಸಿ ಮಧ್ಯದಲ್ಲಿ ಛಿದ್ರವನ್ನು ಮಾಡಿ ಹಣೆಯ ಮಧ್ಯದಲ್ಲಿ ಬಿಂದು ಸಂಹಿತವಾದ ತಿಲಕವನ್ನು ಧರಿಸಬೇಕು. 'ಬಿಂದುಸಹಿತ ತಿಲಕ' ಎಂದರೆ ಮಾಧ್ವರ ಚಿಹ್ನೆಯಾದ ಅಕ್ಷತೆ ಅಂಗಾರವೇ ಆಗಿದೆ.

**ಮಧ್ಯಶ್ಛಿದ್ರಂ ಯುಗ್ಮರೇಖಮೂರ್ಧ್ವಪುಂಡ್ರಂ ಪ್ರಕೀರ್ತಿತಮ್ ।**

ಈ ಕಮಲದ ಮೊಗ್ಗು ಕೆಳಮುಖವಾದರೆ ಪ್ರಾಯಃ ಅಕ್ಷತೆ – ಅಂಗಾರದ ರೂಪ ಬರುತ್ತದೆ. ಹೀಗೆ ಭಗವಂತನ ಆಯುಧವಾಗಿ, ಭಗವಂತನಿಗೆ ಅರ್ಪಿಸಿದ ನಿರ್ಮಾಲ್ಯವಾಗಿ, ಅಲಂಕಾರವಾಗಿ, ಭೋಕ್ತೃಚಿಹ್ನೆಯಾಗಿ ದ್ವೈತಮತದ ಚಿಹ್ನೆಯಾಗಿ, ಶತ್ರುಗಳಿಗೆ ಭಯಂಕರವಾದ ಗದೆಯಂತೆಯೂ, ಭಗವಂತನು ಒಬ್ಬ ಆಶ್ಚರ್ಯವ್ಯಕ್ತಿಯಾಗಿಯೂ, ಅವನಿಂದ ಸೃಷ್ಟಿಸಲ್ಪಟ್ಟ ಈ ಜಗತ್ತು ಬಹುಚಿತ್ರವಾಗಿದೆ ಎಂದೂ ತಿಳಿಸಲೂ ಚಿಹ್ನೆ ಬಹೂಪಕಾರವಾಗಿದೆ.

- **ತಿಲಕದ ಲಕ್ಷಣ :**

**ಕಸ್ತೂರಿ ಕುಂಕುಮಂ ಫಲ್ಗು ಸಿಂಧೂರಂ, ರಕ್ತಚಂದನಮ್ ।**
**ಗೋರೋಚನಾ ಗಂಧಕಾಷ್ಠಂ ಜಲಂ ಚಾಗರು ಗೋಮಯಮ್ ॥**

**ಧಾತ್ರೀ ಮೂಲಸ್ಯ ಮೃದುಗಂಧೋ ಹರಿದ್ರಾ ಗೋಂಟಹಸ್ಯ ಚ ।**
**ಏತಾನಿ ತಿಲಕಾನ್ಯಾಹುಃ ಸಂಧ್ಯಾದಿ ಸರ್ವಕರ್ಮಸು ॥ –ಪದ್ಮ–ಉ.**

ಈ ತಿಲಕ ಲಕ್ಷಣದಲ್ಲಿ ಕಸ್ತೂರಿ ಮಿಶ್ರಿತವಾದ ಕುಂಕುಮದಿಂದ ತಯಾರಿಸಿದ ಕಲ್ಕವು ತಿಲಕವೆನಿಸಿದೆ. ಹಾಗೆಯೇ, ಕೆಂಪುಚಂದನದ ಕಾಷ್ಠ (ತೊಗಟೆ)ದಿಂದ ತಯಾರಿಸಿದ ಅಕ್ಷತೆಯನ್ನು ತಯಾರಿಸುವ ಪದ್ಧತಿಯೂ ಇದೆ. ಕಸ್ತೂರಿ, ಕುಂಕುಮ, ಸಿಂಧೂರ ಇವುಗಳ ಮಿಶ್ರಣದಿಂದ ಅಕ್ಷತೆಯಂತೆ ಇರುವ ವಸ್ತು ತಯಾರಾಗುತ್ತದೆ. ಮಧ್ವ ವಿಜಯದಲ್ಲಿ ವ್ಯಾಸರ ವರ್ಣನೆಯಲ್ಲಿ 'ತಿಲಕ' ಪದವನ್ನೇ ಹೇಳಲಾಗಿದೆ. ಗೃಹಸ್ಥರು ಕನ್ನಡಿ ನೋಡಿ ಅಕ್ಷತೆಯನ್ನು ಧರಿಸಬಹುದು. ಸನ್ಯಾಸಿಗಳಿಗೆ ಹಾಗೂ ಬ್ರಹ್ಮಚಾರಿಗಳಿಗೆ ದರ್ಪಣ ದರ್ಶನ ನಿಷಿದ್ಧವಾದರೂ ಗೃಹಸ್ಥರಿಗೆ ನಿಷಿದ್ಧವಲ್ಲ. ಆದ್ದರಿಂದ ಭಗವಂತನ ದೇಹ ಸುಂದರವಾಗಿ ಕಾಣಲು ಚಿಹ್ನೆಯನ್ನು ಯದ್ವಾ ತದ್ವಾ ಧರಿಸದೆ ಕನ್ನಡಿಯನ್ನು ನೋಡಿ ಅಕ್ಷತೆ–ಅಂಗಾರಗಳನ್ನು ಹಚ್ಚಿಕೊಳ್ಳಬಹುದು. **'ವಿಕ್ಷ್ಯಾಽಽದರ್ಶೇ ಜಲೆ ವಾಽಪಿ ಯೋ ವಿದಧ್ಯಾತ್ ಪ್ರಯತ್ನತಃ ॥'** ಇದು ಗೋಪಿಚಂದನ ಧಾರಣೆಯ ಬಗ್ಗೆ ಪದ್ಮಪುರಾಣದ ಪಾತಾಳಖಂಡದಲ್ಲಿ ಹೇಳಿದ್ದರೂ ಅಕ್ಷತೆ–ಅಂಗಾರ ಧಾರಣೆಗೂ ಇಟ್ಟುಕೊಳ್ಳಬಹುದು. ಹೀಗೆ ಅಕ್ಷತೆ ಅಂಗಾರಗಳು ಭಗವದರ್ಪಿತವಾಗಿ ಪೂಜಕನು ಧರಿಸಬೇಕೆಂದು ಮಾಧ್ವರಲ್ಲಿ ಸಂಪ್ರದಾಯ ಪ್ರಾಪ್ತವಾಗಿದೆ. ಸಂಪ್ರದಾಯವೂ ಪರಮ ಪ್ರಮಾಣವೆ ಆಗಿದೆ. ಅಡ್ಡವಾಗಿ ವಿಭೂತಿಯನ್ನು ಧರಿಸಿದ್ದರೆ ಅದ್ವೈತಿಗಳೆಂದು, ಮೂರು ನಾಮ ಧರಿಸಿದ್ದರೆ ವಿಶಿಷ್ಟಾದ್ವೈತಿಗಳೆಂದು, ಅಕ್ಷತೆ ಅಂಗಾರ ಧರಿಸಿದ್ದರೆ ಮಾಧ್ವರೆಂದು ಅವರವರ ಚಿಹ್ನೆಯಿಂದಲೇ ತಿಳಿಯಬಹುದಾಗಿದೆ. ಇಂಥ ಭಾವನೆಯನ್ನು ತಾಳಬೇಕಾದರೆ ಈ ಅಕ್ಷತೆ ಭಗವಂತನಿಗೆ ಅರ್ಪಿತವೆಂಬ ಕಾರಣದಿಂದಲೂ, ಅಲಂಕಾರಾರ್ಥವಾಗಿಯೋ ಅಕ್ಷತೆ–ಅಂಗಾರವನ್ನು ಧರಿಸಬೇಕು. ಇದೊಂದು ಭೋಕ್ತೃ–ಚಿಹ್ನೆಯೂ ಆಗಿದೆ.

- **ಏಕಾದಶಿಯಂದು ಗಂಧ–ತುಲಸಿ :**

ಏಕಾದಶಿಯಂದು ಭಗವಂತನಿಗೆ ಮಾತ್ರ ಉಂಡೆ ಮಾಡಿದ ಗಂಧವನ್ನು ಅರ್ಪಿಸಬೇಕು. ಭಗವಂತನಿಗೆ ಅಲಂಕಾರಾದಿಗಳು ಇರುತ್ತವೆ. ಇತರ ದೇವತೆಗಳಿಗೆ ಗಂಧಾದಿ ಅಲಂಕಾರವಿರುವುದಿಲ್ಲ.

**ಸಸಾರಮಿತಿ ಸಂಪ್ರೋಕ್ತಂ ಚಂದನಂ ಸರ್ವದಾ ಸ್ಮೃತಂ।**

ಪದ್ಧತಿಯಲ್ಲಿಯೂ ಏಕಾದಶಿಯಂದು ಅಂಗಾರವನ್ನು ಹಚ್ಚಿಕೊಳ್ಳುವರೇ ವಿನಹ ಗಂಧವನ್ನು ಹಚ್ಚಿಕೊಳ್ಳುವುದಿಲ್ಲ. ದ್ವಾದಶಿಯಂದು ಈ ಗಂಧವನ್ನು ಹಚ್ಚಿಕೊಳ್ಳಬಹುದು.

ಏಕಾದಶಿಯಂದು ತುಲಸಿಯನ್ನು ದೇವರಿಗೆ ಏರಿಸಬಹುದೆ ವಿನಹ ನಿರ್ಮಾಲ್ಯಾದಿಗಳನ್ನು ಭಕ್ಷಿಸಬಾರದು. ನಿರ್ಮಾಲ್ಯ ತುಲಸಿಯನ್ನು ವಾಸನೆ ನೋಡಬಹುದು. ಕಿವಿಯಲ್ಲಿ ಧರಿಸಬಹುದು, ತಿನ್ನಬಾರದು.

**ಏಕಾದಶ್ಯಾಂ ತು ತುಲಸೀ ಸಾರಂ ಗ್ರಾಹ್ಯಂ ಮನೀಷಿಭಿಃ।**

**ನಾಸಿಕೇನ್ಯವೇಂದ್ರಿಯೇಣ ನ ತು ಜಿಹ್ವೇಂದ್ರಿಯೇಣ ವೈ॥**

– ಗರುಡಪುರಾಣ

## 18. ಪುಷ್ಪಗಳ ಬಗ್ಗೆ ವಿವರಣೆ :

ಶುದ್ಧವಾದ ವಸ್ತ್ರಧರಿಸಿ, ದೇವರನ್ನು ಸ್ತುತಿಸುತ್ತಾ, ವನದಲ್ಲಾಗಲೀ, ತನ್ನ ಮನೆಯ ತೋಟದಲ್ಲಾಗಲಿ ಬಿಟ್ಟಿರುವ ಹೂವುಗಳನ್ನು ಸಂಗ್ರಹಿಸಬೇಕು. ಕೈಯನ್ನು ತೊಳೆದುಕೊಂಡೆ ಬಿಡಿಸಬೇಕು.

**ತತಃ ಶುಕ್ಲಾಂಬರೋ ಮೌನೀ ಪಾಣಿಂ ಪ್ರಕ್ಷಾಲ್ಯ ವಾರಿಣಾ।**

ಪುಷ್ಪಾಹರಣ ಮಂತ್ರಃ –

**ನಮಸ್ತೇ ಕುಸುಮಾಧಾರೇ ನಮಸ್ತೇ ಕಮಲಾಶಯೇ।**

**ಪುಷ್ಪಾಣಿ ವಿಷ್ಣು ಪೂಜಾರ್ಥಂ ಆಹರಿಷ್ಯೇ ತವಾಜ್ಞಯಾ ॥** –ಸ್ಕಾಂದ ಪುರಾಣ

ಸ್ನಾನಕ್ಕಿಂತ ಮೊದಲೇ ಪುಷ್ಪ ಬಿಡಿಸಬೇಕು.

**ಸ್ನಾನಂ ಕೃತ್ವಾ ತು ಯೇ ಕೇಚಿತ್ ಪುಷ್ಪಂ ಗೃಹ್ಣಂತಿ ವೈ ದ್ವಿಜಾಃ।**

**ದೇವತಾಃ ತತ್ ನನ್ನ ಗೃಹ್ಣಂತಿ ಭಸ್ಮೀಭವತಿ ಕಾಷ್ಠವತ್ ॥** – ಹಾರೀತ

- **ಪುಷ್ಪಗಳಲ್ಲಿ ಸಾತ್ವಿಕಾದಿ ವಿಭಾಗ :**

ತುಲಸೀ, ಕಮಲ, ಜಾಜೀ, ಕೇತಕೀ, ಕರವೀರ, ಮಾಲತೀ, ಮಲ್ಲಿಗೆ, ತಾವರೆ ಇವುಗಳು ವಿಷ್ಣು ಪೂಜೆಗೆ ಯಾವಾಗಲೂ ಯೋಗ್ಯವಾಗಿರುತ್ತದೆ.

ಬಿಳಿಯ ಬಣ್ಣದ ಪುಷ್ಪಗಳು ಸಾತ್ವಿಕವೆನಿಸಿವೆ. ಕೆಂಪು ಬಣ್ಣದ್ದು ರಾಜಸವು, ನೀಲಿ ಪುಷ್ಪಗಳು ತಾಮಸ ಪುಷ್ಪವೆನಿಸಿವೆ.

**ಸಾತ್ವಿಕ ಶುಕ್ಲಪುಷ್ಪಾಣಿ ರಾಜಸಂ ರಕ್ತಪುಷ್ಪಕಮ್ ।**
**ತಾಮಸಂ ಕೃಷ್ಣಪುಷ್ಪಾಣಿ ವರ್ಜನೀಯಂ ವಿದೋ ವಿದುಃ ॥** – ಭಾರತ

- **ಅಗ್ರಾಹ್ಯ ಪುಷ್ಪಗಳು :**

ಗಂಧವಿಲ್ಲದ, ತುಳಿದಿರುವ, ನೆಲದಲ್ಲಿ ಬಿದ್ದಿರುವ, ಸರಿಯಾಗಿ ಅರಳದೆ ಮೊಗ್ಗಾಗಿರುವ, ಬಣ್ಣ ಬದಲಾಗಿರುವ, ವಸ್ತ್ರದಲ್ಲಿ ತಂದಿರುವ, ದುಷ್ಟರು ಮುಟ್ಟಿರುವ, ವಾಸನೆ ನೋಡಿದ, ಕಾಲಿನಿಂದ ಮೆಟ್ಟಿದ, ಅತೀ ಬಾಡಿ ಹೋದ, ಸ್ತ್ರೀ ಶೂದ್ರಾದಿಗಳಿಂದ ತರಲ್ಪಟ್ಟ ಪುಷ್ಪಗಳು, ಅಗ್ರಾಹ್ಯವಾಗಿ ಪೂಜೆ ಮಾಡಲು ಅಯೋಗ್ಯವಾಗಿವೆ.

**ಅಗ್ರಾಹ್ಯಾಣಿ ತಥಾಽಽಸನ್ನ ಮುಕುಲಂ ಪತಿತಂ ತಥಾ ।**
**ವಿವರ್ಣವಸ್ತ್ರಬದ್ಧಂ ಚ ದುರ್ಜನ ಸ್ಪೃಷ್ಟಮೇವ ಚ ॥**

**ಆಘ್ರಾತಂ ಚ ಪದಾ ಸ್ಪೃಷ್ಟಂ ವಿಗಂಧಂ ಚ ತಥೈವ ಚ ।**
**ಅತಿಪಕ್ವಮಪಕ್ವಂ ಚ ಸ್ತ್ರೀಶೂದ್ರಾದಿ ಹೃತಂ ತ್ಯಜೇತ್ ॥** – ಪಾದ್ಮಸಂಹಿತಾ

ಹಳದಿ ಘಂಟೆ ಹೂ, ದತ್ತೂರ, ಕೆಂಪು ದಾಸವಾಳ, ಪುನ್ನಾಗ, ರಾತ್ರಿರಾಣಿ, ಹಾಲು ಸುರಿಸುವ ಎಕ್ಕ ಮುಂತಾದವು ನಿಷಿದ್ಧವಾಗಿವೆ. ಬಣ್ಣ, ವಾಸನೆ ಇರದ ಪುಷ್ಪಗಳು ನಿಷಿದ್ಧ.

**ಕಿಂಕಿಣೀ ಮುನಿಪುಷ್ಪಂ ಚ ಧತ್ತೂರಂ ಪಾಟಲಂ ತಥಾ ।**
**ತತೋಽತಿಮುಕ್ತಕಂ ಚೈವ ಪುನ್ನಾಗಂ ನಕ್ತಮಾಲಿಕಾ ॥**

- **ಗ್ರಾಹ್ಯ ಪುಷ್ಪಗಳು :**

ಪಾರಿಜಾತ, ಹರಿಚಂದನ, ಮಂದಾರ, ಕೇತಕೀ, ಕರವೀರ, ಚಂಪಕ, ಮಲ್ಲಿಗೆ, ಜಾಜೀ, ಸೂಜೀಮಲ್ಲಿಗೆ, ಅಂಬೂರಮಲ್ಲಿಗೆ, ನಿತ್ಯ ಮಲ್ಲಿಗೆ, ಏಳುಸುತ್ತಿನ ಮಲ್ಲಿಗೆ ಇವೆ ಮೊದಲಾದವು ಗ್ರಾಹ್ಯಗಳಾಗಿವೆ.

**ಕರವೀರೈರ್ಜಾಜಿಕುಸುಮೈಃ ಚಂಪಕೈರ್ಬಕುಳೈಃ ಶುಭೈಃ ।**
**ಶತಪತ್ರೈಶ್ಚ ಕಲ್ಹಾರೈಃ ಅರ್ಚಯೇತ್ ಪುರುಷೋತ್ತಮಂ ॥**

- **ಪುಷ್ಪಾಭಿಮಾನಿ ದೇವತೆಗಳು :**

ಪಾರಿಜಾತ ಪುಷ್ಪಗಳಲ್ಲಿ ಆಂಜನೇಯನಿರುವನು, ಸೌಗಂಧಿಕ ಕಮಲ ಮೊದಲಾದ ಸುಗಂಧ ಪುಷ್ಪಗಳಲ್ಲಿ ಭೀಮಸೇನನೇ ಇರುವನು. ಪೂಜಾರ್ಹವಾದ ಬಿಳೀ ಕಣಿಗಲೇ, ಮಲ್ಲಿಗೆ ಮುಂತಾದ ಪುಷ್ಪಗಳಲ್ಲಿ ರುದ್ರದೇವನಿರುವನು. ಪುನ್ನಾಗ ಪುಷ್ಪ (ನಾಗಸಂಪಿಗೆ)ದಲ್ಲಿ ಗರುಡನಿರುವನು. ದೂರ್ವೆಯಲ್ಲಿ (ಗರಿಕೆ) ವರುಣದೇವನಿರುವನು. ತುಲಸಿಯಲ್ಲಿ ಸಾಕ್ಷಾತ್ ರಮಾದೇವಿಯೇ ಯಾವಾಗಲೂ ಇರುವಳು. ಪುಷ್ಪದಲ್ಲಿ 161 ಭಗವದ್ರೂಪಗಳಿವೆ.

**ಪಾರಿಜಾತಸ್ಯ ಪುಷ್ಪೇಷು ಆಂಜನೇಯಸ್ತದಾಜ್ಞಯಾ ।**
**ಸೌಗಂಧಿಕೇ ಭೀಮಸೇನಃ ಶ್ವೇತ ಪುಷ್ಪೇಷು ಶಂಕರಃ ॥**

**ಪುನ್ನಾಗಪುಷ್ಪೇ ಗರುಡೋ, ದೂರ್ವಾಯಾಂ ವರುಣೋ ಮಹಾನ್ ।**
**ತುಲಸ್ಯಾ ತು ರಮಾದೇವಿ ಸಾ ವಿಷ್ಣೋರ್ನಿತ್ಯದಾ ಪ್ರಿಯಾ ॥**

**ಏಕ ಷಷ್ಟ್ಯುತ್ತರಶತಂ ರೂಪಾಣಾಂ ಪರಮಾತ್ಮನಃ ।**
**ಪುಷ್ಪೇಷು ಚಿಂತನೀಯಂ ಸ್ಯಾತ್ ಮಹಾಶಾಸ್ತ್ರಾರ್ಥವಿತ್ತಮೈಃ ॥**

- **ಎಕ್ಕಪತ್ರದಲ್ಲಿ ಪುಷ್ಪಸಂಗ್ರಹಣೆ ನಿಷಿದ್ಧ :**

ಪುಷ್ಪಗಳನ್ನು ಅರ್ಕಪತ್ರದಲ್ಲಿ (ಎಕ್ಕದೆಲೆ) ಹಾಕಿ ತರಬಾರದು. ಅರ್ಕಪತ್ರದಲ್ಲಿ ಯೋಗ್ಯ ಪುಷ್ಪಗಳೂ ಅಯೋಗ್ಯವಾಗುತ್ತವೆ.

**ಸರ್ವಪುಷ್ಪಾಣಿ ವರ್ಜ್ಯಾನಿ ಚಾರ್ಕಪತ್ರಸ್ಥಿತಾನಿ ಚ ।**

- **ಮನೆಯಲ್ಲಿ ಬೆಳೆಸಿದ ಹೂ ಉತ್ತಮ :**

ತಮ್ಮ ಮನೆಯಲ್ಲಿಯೇ ತಾನೇ ಬೆಳೆಸಿದ ಪುಷ್ಪಗಳು ಅತ್ಯಂತ ಯೋಗ್ಯ-ವಾದವುಗಳು. ಅರಣ್ಯದಿಂದ ತಂದ ಹೂವುಗಳು ಮಧ್ಯಮವಾದವುಗಳು.

**ಸ್ವಾರಾಮೇ ಚೋತ್ತಮಂ ವಿದ್ಯಾತ್ ಅರಣ್ಯಂ ಮಧ್ಯಮಂ ಭವೇತ್ ॥**

- **ಕ್ರಯಕೊಟ್ಟು ತಂದದ್ದು ಕನಿಷ್ಠ :**

ತನ್ನ ಮನೆಯಲ್ಲಿ ಬೆಳೆದದ್ದು, ಅರಣ್ಯದಿಂದ ಸಂಗ್ರಹಿಸಿದ್ದು ಇವುಗಳಲ್ಲಿ

ಮೇಲೆ ಹೇಳಿದ ಪುಷ್ಪಗಳು ಅಲಭ್ಯವಾದಾಗ ಕ್ರಯಕ್ಕಾದರೂ ಸರಿ ತಂದು ಪೂಜಿಸಬೇಕು.

**ಪೂರ್ವೋದಿತಾಲಾಭೇ ಗ್ರಾಹ್ಯಮುತ್ತರೋತ್ತರಮ್ ।**

ಯಾಚನೆ ಮಾಡಿದ ಮತ್ತು ಕದ್ದ ಹೂಗಳಿಂದ ಪೂಜಿಸಬಾರದು.

**ಯಾಚಿತೈಃ ಪತ್ರ ಪುಷ್ಪಾದ್ಯೈಃ ಕರೋತಿ ಚ ಮಮಾರ್ಚನಂ ।**
**ಅಯಾಚಿತಾನಿ ಲಬ್ಧಾನಿ ಯದ್ವಾ ಕಮಲಸಂಭವ ॥**

- **ಪುಷ್ಪಗಳ ಪೂಜಾ ಕಾಲ :**

ಪ್ರಾತಃ ಕಾಲದ ಪೂಜೆಯಲ್ಲಿ ಮಾಲತೀ ಪುಷ್ಪವು ಶ್ರೇಷ್ಠವಾಗಿದೆ. ಮಧ್ಯಾಹ್ನದಲ್ಲಿ ಕರವೀರ ಪುಷ್ಪಗಳು, ಸಾಯಂಕಾಲ ಜಾತಿ ಪುಷ್ಪ – ಜಾಜಿ ಪುಷ್ಪಗಳು, ಪ್ರದೂಷ ಕಾಲದಲ್ಲಿ ಬಕುಲ ಪುಷ್ಪಗಳಿಂದ ಪೂಜೆಯು ಶ್ರೇಷ್ಠವಾಗಿದೆ. ಹಗಲಿನಲ್ಲಿ ಅರಳುವ ಪುಷ್ಪಗಳಿಂದ ಹಗಲಿನಲ್ಲಿಯೂ, ರಾತ್ರಿಯಲ್ಲಿ ಅರಳುವ ನಿಷಿದ್ಧವಲ್ಲದ ಪುಷ್ಪಗಳಿಂದ ರಾತ್ರಿ ಪೂಜೆಯು ಪ್ರಶಸ್ತವಾಗಿದೆ.

**ದಿವಾಪುಷ್ಪೈಃ ದಿವಾ ಪೂಜಾ ನಿಶಾಪುಷ್ಪೈಸ್ತಥಾ ನಿಶಿ ।**
**ಆಪತ್ಕಾಲೇ ಯಥಾ ಯೋಗ್ಯಮರ್ಚಯೇತ್ ಪುರುಷೋತ್ತಮಮ್ ॥**

- **ಮಧ್ಯರಾತ್ರಿ ಪೂಜೆಯಲ್ಲಿ ಮಲ್ಲಿಗೆ–ತಾವರೆ :**

ಶ್ರೀಕೃಷ್ಣಜನ್ಮಾಷ್ಟಮೀ, ಶಿವರಾತ್ರಿ ಮುಂತಾದ ರಾತ್ರಿ ಉತ್ಸವಗಳಲ್ಲಿ ಮಲ್ಲಿಗೆಯು ಪ್ರಶಸ್ತವಾಗಿದೆ.

**ಮಧ್ಯರಾತ್ರೇ ಮಲ್ಲಿಕಾಭಿಃ ಯುಜೇತ ಜಲಜೈಃ ಸದಾ ।**

ಧನುರ್ಮಾಸಾದಿ ಪ್ರತ್ಯೂಷ ಪೂಜೆಯಲ್ಲಿ ನಂದಿಬಟ್ಟಲು ಶ್ರೇಷ್ಠವಾಗಿದೆ.

**ಪ್ರತ್ಯೂಷೇ ನಂದಿಕಾವರ್ತೈಃ ಕಾಲ ಏವಮುದಾಹೃತಂ ।**

ಬಿಡಿಹೂವುಗಳಿಗಿಂತಲೂ ಕಟ್ಟಿದ ಮಾಲೆ ಶ್ರೇಷ್ಠ.

**ಅಬಂಧೇಭ್ಯಃ ಪ್ರಸೂನೇಭ್ಯಃ ಬದ್ಧ ಮಾಲಾ ಪ್ರಶಸ್ಯತೇ ।**

– ಪಾದ್ಮ ಸಂಹಿತಾ

- **ಬಾಳೇನಾರಿನಿಂದ ಕಟ್ಟಿದ ಮಲ್ಲಿಗೆ ಶ್ರೇಷ್ಠ :**

ಮಾಲೆಗಳನ್ನು ಸುಮ್ಮನೇ ಅನಾವಶ್ಯಕವಾಗಿ ತುಂಡು ತುಂಡುಗಳಾಗಿ ಛೇದಿಸಬಾರದು. ಚಿಕ್ಕ ಚಿಕ್ಕ ಮಾಲೆಗಳನ್ನು ಕಟ್ಟಬೇಕು.

**ಸ್ರಕ್ ತು ನಾನಾವಿಧೈಃ ಪುಷ್ಪೈಃ ನಿರ್ಮಿತಾ ಕದಲೀತ್ವಚಾ ।**
**ನ ಛೇದಯೇದ್ ಯಜ್ಞಸೂತ್ರಂ ಮಾಲಾಂ ಚೈವ ನ ಛೇದಯೇತ್ ॥**

- **ಪುಷ್ಪ ತಾರತಮ್ಯ :**

ಸಕಲ ಪುಷ್ಪಗಳಲ್ಲಿ ನೀಲಿ ಕಮಲವು ಅತಿ ಶ್ರೇಷ್ಠವಾದದ್ದು. ನೀಲಿ ಕಮಲ (ಉತ್ಪಲ)ಕ್ಕಿಂತಲೂ, ಕೆಂಪು ಕಮಲವು ಶ್ರೇಷ್ಠ. ಕೆಂಪು ಕಮಲಕ್ಕಿಂತಲೂ (ಬಿಳಿ ಕಮಲ) ಪ್ರಶಸ್ತವಾಗಿದೆ. ತುಲಸಿಯಾದರೂ ಪುಂಡರೀಕಕ್ಕಿಂತಲೂ ಸಾವಿರ ಪಟ್ಟು ಗುಣಾಧಿಕ್ಯವುಳ್ಳದ್ದು.

**ತುಲಸ್ಯುತ್ಪಲಜಾತಿಶ್ಚ ಕೇತಕೀ ಕರವೀರಕಃ ।**
**ಮಾಲತೀ ಮಾಧವ ಚೈವ ಮಲ್ಲಿಕಾ ಚಾಂಬುಜಾನಿ ಚ ।**
**ತದಾ ಪುಷ್ಪಾಣಿ ಯೋಗ್ಯಾನಿ ವಿಷ್ಣೋರಾರಾಧನಾದಿಕೇ ॥**

–ವಿಷ್ಣುತೀರ್ಥೀಯೇ

**ಪುಷ್ಪಗಳಲ್ಲಿ ಮಾಲತಿಯೇ ಶ್ರೇಷ್ಠ :**

**ಸುರಾಣಾಂ ಯಥಾ ವಿಷ್ಣುಃ ಪುಷ್ಪಣಾಂ ಮಾಲತೀ ತಥಾ ।**

ಮಾಲತಿ ಪುಷ್ಪದಿಂದ (ಮಲ್ಲಿಗೆ) ದಿನವೂ ಪೂಜಿಸುವವನಿಗೆ ರೋಗಾದಿಗಳು ದೂರವಾಗುವುವು.

- **ಪುಷ್ಪಹಾರ ಅರ್ಪಿಸಿದ ಫಲ :**

ಭಗವಂತನಿಗೆ ಹೂವಿನಿಂದ ಹಾರವನ್ನು ತಯಾರಿಸಿ ಏರಿಸಿದರೆ ಅಂತಹವನಿಗೆ ಎಂದೂ ಭೋಜನದ ಕೊರತೆಯಿರುವುದಿಲ್ಲ. ಶ್ವೇತರಾಜನ ದೃಷ್ಟಾಂತದಿಂದ ಈ ವಿಷಯವು ಸ್ಪಷ್ಟವಾಗುವುದು.

**ಮಾಲಾದಾನ ವರಾನ್ನವಾನ್ ಭುವಿ ಭವೇತ್ ।**

- **ನಿರ್ಮಾಲ್ಯವಾಗದ ಪುಷ್ಪಗಳು :**

ಪುಷ್ಪಗಳು ಸಿಗದಿರುವಾಗ ಹಿಂದಿನ ದಿನದ ಪುಷ್ಪಗಳನ್ನೇ (ಬಾಡದೆ ಇದ್ದರೇ) ಪುನಃ ತೊಳೆದು ಪೂಜಿಸಬಹುದು. ಗಂಧೋದಕದಿಂದ ಮೂರು ಬಾರಿ ಪ್ರೋಕ್ಷಿಸಿ ಪೂಜಿಸಬೇಕು.

**ಯದ್ವಾ ಪರ್ಯುಷಿತೈಶ್ಚಾಪಿ ಪುಷ್ಪಾದ್ಯೈರವಿಕಾರಿಭಿಃ।**
**ಗಂಧೋದಕೇನ ಚೈತಾನಿ ತ್ರಿಃ ಪ್ರೋಕ್ಷೈವ ಪ್ರಪೂಜಯೇತ್ ॥**

ಪದ್ಮ, ತಾವರೆ, ಶಾವಂತಿಗೆ ಇವುಗಳು ಪರ್ಯುಷಿತವಾಗುವುದಿಲ್ಲ. ಗಂಧೋದಕದಿಂದ ಪ್ರೋಕ್ಷಿಸಿ ಪುನಃ ಪೂಜಿಸಬಹುದು.

- **ಪುಷ್ಪಗಳನ್ನು ಏರಿಸುವ ರೀತಿ :**

ಭಗವಂತನಿಗೆ ಪುಷ್ಪವನ್ನೇರಿಸುವಾಗ ಮೃಗೀ ಮುದ್ರೆಯಿಂದಲೇ ಅರ್ಪಿಸಬೇಕು. ಅಂದರೆ ಹೆಬ್ಬೆರಳಿನ ತುದಿಯನ್ನು ಮಧ್ಯಮ ಬೆರಳು ಹಾಗೂ ಅನಾಮಿಕ ಬೆರಳುಗಳ ತುದಿಗೆ ಮುಟ್ಟಿಸಿದರೆ ಮೃಗೀಮುದ್ರೆಯಾಗುತ್ತದೆ.

- **ನಿರ್ಮಾಲ್ಯ ವಿಸರ್ಜನೆ ರೀತಿ :**

ಅಂಗುಷ್ಠ ಹಾಗೂ ತರ್ಜನೀ ಇವುಗಳಿಂದಲೇ ಹಿಂದಿನ ದಿನದಲ್ಲಿ ಪೂಜಿಸಿದ ನಿರ್ಮಾಲ್ಯವನ್ನು ತೆಗೆಯಬೇಕು.

**ಮಾಧ್ಯಮಾಽನಾಮಿಕಾ ಮಧ್ಯೇ ಪುಷ್ಪಂ ಸಂಗೃಹ್ಯ ಪೂಜಯೇತ್।**
**ಅಂಗುಷ್ಠ ತರ್ಜನ್ಯಗ್ರಾಭ್ಯಾಂ ನಿರ್ಮಾಲ್ಯಮಪನೋದಯೇತ್ ॥**

- **ಸ್ನಾನದ ಮೊದಲು ಪುಷ್ಪವನ್ನು ಸಂಗ್ರಹಿಸಬೇಕು :**

ಪ್ರಾತಃಕಾಲದಲ್ಲಿ ಮುಖಪ್ರಾಕ್ಷಾಲವನ್ನು ಮಾಡಿ ತುಲಸಿಗೆ ನೀರೆರೆದು ವಂದಿಸಿ, ಮೃತ್ತಿಕಾಧಾರಣ ಮಾಡಿದ ನಂತರ ಸ್ನಾನವನ್ನು ಮಾಡದೆ ಪುಷ್ಪಗಳನ್ನು ಸಂಗ್ರಹಿಸಬೇಕು. ತಾನು ಸ್ನಾನವನ್ನು ಮಾಡಿದ್ದರೆ ಸ್ನಾನವನ್ನು ಮಾಡದೆ ಇರುವ ಶಿಷ್ಯ, ಪುತ್ರಾದಿಗಳಿಂದ ತರಿಸಬಹುದು. ಸ್ನಾನವನ್ನು ಮಾಡಿ ಪುಷ್ಪ ಸಂಚಯವನ್ನು ಮಾಡಿದರೆ ದೇವತೆಗಳು ಆ ಪುಷ್ಪವನ್ನು ಸ್ವೀಕರಿಸಲಾರರು, ಪೂಜಿಸಿದರೂ ಶುಷ್ಕ ಕಟ್ಟಿಗೆಯು ಉರಿದು ಬೂದಿಯಾಗುವಂತೆ ಆ ಹೂವು ಭಸ್ಮ ಪ್ರಾಯವಾಗುತ್ತದೆ.

**ಸ್ನಾತ್ವಾ ಮಧ್ಯಾಹ್ನ ಸಮಯೇ, ನ ಛಿಂದ್ಯಾತ್ ಕುಸುಮಂ ನರಃ।**
**ಸ್ನಾನಂ ಕೃತ್ವಾ ತು ಯೇ ಕೇಚಿತ್ ಪುಷ್ಪಂ ಗೃಹ್ಣಂತಿ ವೈ ದ್ವಿಜಾಃ।**
**ದೇವತಾಸ್ತನ್ನ ಗೃಹ್ಣಂತಿ ಭಸ್ಮೀ ಭವತಿ ಕಾಷ್ಠವತ್ ॥** – ಹಾರೀತಸ್ಮೃತಿ

- **ಪುಷ್ಪಗಳ ಜೊತೆಗೆ ತುಲಸೀ ಅರ್ಪಣೆ :**

ಪುಷ್ಪವನ್ನು ದೇವರಿಗೆ ಅರ್ಪಿಸಿ, ಅದರ ನಂತರ ಒಂದು ದಳ ತುಲಸಿಯನ್ನು ಅರ್ಪಿಸಬೇಕು. ಪುನಃ ಪುಷ್ಪ, ಪುನಃ ತುಲಸೀ, ಹೀಗೆ ಜೊತೆಜೊತೆಯಾಗಿಯೇ ಕ್ರಮವಾಗಿ ಪುಷ್ಪ–ತುಲಸಿಗಳನ್ನು ಅರ್ಪಿಸಬೇಕು.

- **ಪುಷ್ಪವನ್ನು ಏರಿಸುವಾಗ ಮೂಲಮಂತ್ರ :**

ಮೂಲಮಂತ್ರ ಹಾಗೂ ಬ್ರಹ್ಮಸೂತ್ರಗಳು, ಸಹಸ್ರನಾಮ ಇವುಗಳಿಂದ ಅರ್ಪಿಸಬೇಕು.

**ಪ್ರತ್ಯೇಕಂ ಪುಷ್ಪಮಾದಾಯ ತುಲಸೀಂ ವಾ ಸಮರ್ಪಯೇತ್ ।**
**ಪ್ರತ್ಯೇಕಂ ಮೂಲಮಂತ್ರೈರ್ವಾ ಭಕ್ತ್ಯಾ ಸಾಹಸ್ರನಾಮಭಿಃ ॥** –ಸಂಗ್ರಹ

- **ತುಲಸೀ ಹಾಗೂ ಪುಷ್ಪ ಒಟ್ಟಿಗೆ ಏರಿಸಬಾರದು :**

ತುಲಸಿಯನ್ನು ಮೊದಲು ನಂತರ ಪುಷ್ಪವನ್ನಾಗಲೀ ಪುಷ್ಪ ಮೊದಲೂ ನಂತರ ತುಲಸೀಯನ್ನಾಗಲೀ ಅರ್ಪಿಸಬೇಕೇ ವಿನಹ ತುಲಸೀ ಮತ್ತು ಪುಷ್ಪಗಳನ್ನು ಸೇರಿಸಿ ಒಟ್ಟಿಗೆ ಪೂಜಿಸಬಾರದು. ಮಿಶ್ರ ಮಾಡಿ ಪೂಜಿಸಿದರೆ ಆ ಪೂಜೆಯು ಕೇವಲ ತುಲಸೀ ಪೂಜೆ ಅಥವಾ ಕೇವಲ ಪುಷ್ಪ ಪೂಜೆಯಾದೀತೆ ವಿನಃ ತುಲಸೀ ಹಾಗೂ ಪುಷ್ಪಗಳ ಪೂಜೆಯಾಗುವುದಿಲ್ಲ.

**ಯಾವಂತಿ ಯುಗಪದ್ ದದ್ಯಾತ್ ತಾವದೇಕಮಿತೀರಿತಂ।**

- **ಪುಷ್ಪವನ್ನು ತೊಳೆಯದೇ ಪೂಜಿಸಬಾರದು :**

**ಅಪ್ರಕ್ಷಾಲ್ಯ ಚ ಪುಷ್ಪಾಣಿ ಪ್ರಕ್ಷಾಲ್ಯ ತುಲಸೀಂ ಛಿಭೋ। ದೋಷ ಇತಿ ಶೇಷ।**

ಬೇರೆಯವರ ತೋಟದಿಂದಾಗಲೀ, ಮನೆಯ ಗಿಡದಿಂದಾಗಲೀ ಯಜಮಾನನ ಅಪ್ಪಣೆಯಿಲ್ಲದೆ ಪುಷ್ಪಗಳನ್ನು ಕದ್ದು ಅದರಿಂದ ಮಾಡಿದ ಪೂಜೆಯು ಸಫಲವಾಗುವುದಿಲ್ಲ. ಯಾರ ಮನೆಯ ಪುಷ್ಪವೋ ಆ ಯಜಮಾನನಿಗೆ ಪೂಜಾಫಲವು ಲಭಿಸುವುದು. ಕದ್ದವನ ಕೈಯನ್ನು ಕತ್ತರಿಸಬೇಕು.

- **ಅಗ್ರಾಹ್ಯ ಪುಷ್ಪಗಳು :**

**ಅಗ್ರಾಹ್ಯಾಣಿ ತಥಾಽಽಸನ್ನ ಮುಕುಲಂ ಪತತಿಂ ತಥಾ ।**
**ವಿವರ್ಣಂ ವಸ್ತ್ರಂ ಲಬ್ಧಂ ಚ ದುರ್ಜನ ಸ್ಪೃಷ್ಟಮೇವ ಚ ॥**

**ಆಘ್ರಾತಂ ಚ ಪದಾ ಸ್ಪೃಷ್ಟಂ ನಿರ್ಗಂಧಂ ಚ ತಥೈವ ಚ ।**
**ಅತಿಪಕ್ವಂ ವಿಪಕ್ವಂ ಚ ಸ್ತ್ರೀ ಶೂದ್ರಾದಿ ಹೃತಂ ತ್ಯಜೇತ್ ॥**

– ಪಾದ್ಮ ಸಂಹಿತಾ

**ಪರಾರೋಪಿತ ವೃಕ್ಷಸ್ಯ ಪುಷ್ಪಾಣ್ಯಾನೀಯ ಯೋಽರ್ಚಯೇತ್ ।**
**ಅನಾಪೃಚ್ಛನ್ ಹಿ ಗೃಹಣ್ಣೋ ಹಸ್ತಚ್ಛೇದನಮರ್ಹತಿ ।**
**ಚೌರ್ಯಾಹೃತಾನಾಂ ಪುಷ್ಪಾಣಾಂ ದೇವಾನಾಂ ಚ ಸಮರ್ಪಣಮ್ ॥**

**ಅನ್ಯಾವಶಿಷ್ಟ ಪರ್ಯುಷ್ಟ–ಮ್ಲಾನ ಪುಷ್ಪಸಮರ್ಪಣಮ್ ।**
**ಛಿನ್ನಭಿನ್ನಾತಿರಿಕ್ತಾನಾಂ ಪುಷ್ಪಣಾಂ ಚ ಸಮರ್ಪಣಂ ॥**

**ನಿರ್ಗಂಧ ಕುಸುಮಾನಾಂ ಚ ॥**

ಸೌತೆ, ಮುತ್ತುಗ ಪುಷ್ಪಗಳು ಸರ್ವಥಾ ನಿಷಿದ್ಧವಾಗಿದೆ.

**ಊರ್ವಾರುಕ ಪಲಾಶೋತ್ಥೈಃ ಪುಷ್ಪೈಃ ಕುರ್ಯಾನ್ ಮಮಾರ್ಚನಂ ॥**

- **ದೇವಾಲಯದ ಪುಷ್ಪಗಳಿಂದ ಮನೆಯ ದೇವರ ಪೂಜೆ ನಿಷಿದ್ಧ :**

ದೇವಸ್ಥಾನದಲ್ಲಿ ದೇವರಿಗಾಗಿ ಬೆಳೆದ, ಬೆಳೆಸಿದ ತುಲಸೀ ಪುಷ್ಪಗಳನ್ನು ತಂದು ಮನೆಯ ದೇವರನ್ನು ಪೂಜಿಸುವುದು ನಿಷಿದ್ಧವಾಗಿದೆ. ದೇವರಲ್ಲಿ ತಾರತಮ್ಯವಿಲ್ಲದಿದ್ದರೂ ದೇವಾಲಯದ ಪುಷ್ಪಾದಿಗಳನ್ನು ತರಬಾರದು.



ದೇವಾಲಯದ ಪುಷ್ಪದಿಂದ ಮಾಡಿದ ಪೂಜೆಯು ಹಿಂದೆ ಮಾಡಿದ ಪುಣ್ಯಗಳನ್ನು ನಾಶ ಮಾಡುತ್ತದೆ.

**ದೇವಾರೋಮೋದ್ಭವಂ ಪುಷ್ಪಂ ಗೃಹದೇವಾಯ ನಾರ್ಚಯೇತ್ ।**
**ದೇವಾಲಯೇ ನಿಯುಕ್ತಂ ತು ಹಂತಿ ಪುಣ್ಯಂ ಪುರಾಕೃತಂ ॥**

- **ಕುದುರೆಯ ಜನ್ಮ :**

ದೇವಾಲಯದ ಪುಷ್ಪವನ್ನು ಕದ್ದು ತಂದು ಪೂಜಿಸಿದರೆ ಕುದುರೆಯಾಗಿ ಜನಿಸುವನು.

**ದೇವಾಲಯಸ್ಯ ಪುಷ್ಪೇಣ ಯೋ ದೇವಂ ಪ್ರತಿಪೂಜಯೇತ್ ।**
**ಅಶ್ವತ್ಥಂ ಪ್ರಾಪ್ನುಯಾತ್ ಸೋಽಪಿ ದಶವರ್ಷಾಣಿ ಪಂಚ ಚ ।**
**ದೇವಾದ್ಯರ್ಥಂ ತು ಕುಸುಮಮ್ ಅಸ್ತೇಯಂ ಮನುರಬ್ರವೀತ್ ॥**

**ದೇವಾಲಯೇ ನಿಯುಕ್ತಂ ತು ಹಂತಿ ಪುಣ್ಯಂ ಪುರಾಕೃತ್ ।**
**ತಸ್ಮಾತ್ ಸರ್ವಪ್ರಯತ್ನೇನ ದೇವೋದ್ಯಾನಾನಿ ವರ್ಜಯೇತ್ ॥**

**ಹಸ್ತಾನೀತಂ ಪಟಾನೀತಂ ಸ್ವಯಂ ಪತಿತಮೇವ ಚ ।**
**ದೇವಾರಾಮೋದ್ಭವಂ ಪುಷ್ಪಂ ಗೃಹದೇವಾಯ ನಾರ್ಚಯೇತ್ ॥**

**ಸ್ವಾರಾಮಾ ಉತ್ತಮಾ ಪೂಜಾ ವನಪೂಜಾ ತು ಮಧ್ಯಮಾ ।**
**ವಿಕ್ರೀತಾ ತು ಕನಿಷ್ಠಾ ಸ್ಯಾತ್ ಯಾಚಮಾನಂ ತು ನಿಷ್ಫಲಂ ॥**

- **ಅರ್ಧ ಅರಳಿರುವ ಪುಷ್ಪಗಳನ್ನು ಕೀಳಬಾರದು :**

ಹರಿವಂಶ ಮಹಾತ್ಮೆಯಲ್ಲಿ ಸ್ತ್ರೀಯಾದವಳು ಮೊಗ್ಗನ್ನು ಕಿತ್ತಿದರೆ ಸಂತಾನಹೀನಳಾಗುವಳೆಂದು ತಿಳಿಸಲಾಗಿದೆ. ಮಾರನೇ ದಿನ ಬೆಳಿಗ್ಗೆ ಸ್ವತಃ ಪುಷ್ಪವು ಬೀಳುವುದರೊಳಗೆ ಪೂಜಕನೇ ಸಂಗ್ರಹಿಸಬೇಕು. ಸ್ವತಃ ಬಲಾತ್ಕಾರದಿಂದ ಕಿತ್ತಬಾರದು. ಇದರಿಂದ ಯಕ್ಷ ಹಾಗೂ ದೇವತೆಗಳ ವಿರೋಧ ಉಂಟಾಗುತ್ತದೆ.

ಒಂದೊಂದು ಕುಸುಮಗಳನ್ನೂ ಹತ್ತು ಯಕ್ಷರು, ಐದು ಯಕ್ಷ ಕನ್ಯೆಯರೂ ರಕ್ಷಿಸುತ್ತಿರುವರು.

**ಏಕೈಕ ಕುಸುಮಂ ಯಕ್ಷಾ ರಕ್ಷಂತಿ ದಶ ವೈ ಯತಃ ।**
**ತಥಾ ಯಕ್ಷಾಂಗನಾ ಪಂಚ ಸರ್ವತಃ ಕುಸುಮಾವೃತಾಃ ॥**

ಪುಷ್ಪಗಳನ್ನು ದೇವರಿಗೆ ಏರಿಸುವಾಗ ಗಿಡದಲ್ಲಿ ಯಾವ ರೀತಿಯಲ್ಲಿ ಮೇಲ್ಮುಖವಾಗಿದ್ದವೋ ಹಾಗೆ ಭಗವಂತನ ಅಂಗಗಳಲ್ಲಿ ಏರಿಸಬೇಕು. ಅಧೋಮುಖವಾಗಿ ಮಾಡಿ ಏರಿಸಬಾರದು. ಪತ್ರದ ಹಾಗೂ ಹಣ್ಣಿನ ತೊಟ್ಟು ಮೇಲ್ಮುಖವಾಗಿರುತ್ತದೆ. ಅವುಗಳನ್ನು ಹಾಗೆಯೇ ಅರ್ಪಿಸಬೇಕು.

- **ಎಡಗೈಯಿಂದ ಪುಷ್ಪಗಳನ್ನು ಕೀಳಬಾರದು :**

ಎಡಗೈಯಿಂದ ಪುಷ್ಪಗಳನ್ನು ಕಿತ್ತುವುದು, ಎಡಗೈಯಲ್ಲಿ ಇಟ್ಟುಕೊಂಡು ದೇವರಿಗೆ ಏರಿಸುವುದು ಎರಡೂ ನಿಷಿದ್ಧವಾಗಿದೆ.

**ನ ಪುಷ್ಪಚ್ಛೇದನಂ ಕಾರ್ಯಂ ದೇವಾರ್ಥಂ ವಾಮಹಸ್ತತಃ ।**
**ನ ದದ್ಯಾತ್ ತಾನಿ ದೇವೇಭ್ಯಃ ಸಂಸ್ಥಾಪ್ಯ ವಾಮಹಸ್ತತಃ ॥**

– ಸ್ಮೃತಿ ಸಂಗ್ರಹ

- **ವೀರ ಕ್ರಯ :**

ಪುಷ್ಪಗಳನ್ನು ಕೊಂಡುಕೊಂಡು ಪೂಜಿಸಬಾರದು. ಆದರೂ ಮಾಲೆಗಾರರು ಕೇಳಿದ ಹಣವನ್ನು ಚೌಕಾಸಿ ಮಾಡದೆ ಕೊಟ್ಟು ತಂದ ಹೂವನ್ನು ಪೂಜಿಸಿದರೆ ವೀರಕ್ರಯವೆನ್ನುವರು. ವೀರಕ್ರಯದಿಂದ ತಂದ ಪುಷ್ಪಗಳ ಪೂಜೆಯು ವೀರ್ಯವತ್ತಾಗಿರುತ್ತದೆ.

**ವೀರಕ್ರಯೋ ವೀರವತ್ ಸ್ಯಾತ್ ।**

**ವಿಕ್ರೇತುಃ ಉಪನ್ಯಸ್ತಮೂಲ್ಯೇನ ವೀರಕ್ರಯ ।**

- **ಕರವೀರ ಶ್ರೇಷ್ಠತೆ :**

ಜನಾರ್ದನ ಪೂಜೆಯಲ್ಲಿ ಕರವೀರದಿಂದ ಅರ್ಚಿಸಿದವನ ದರ್ಶನ ಮಾತ್ರದಿಂದ ನರಕಾಗ್ನಿಯೂ ಶಾಂತವಾಗುತ್ತದೆ.

**ಕರವೀರಸ್ಯ ಕುಸುಮೈಃ ಯೇ ಅರ್ಚಯಂತಿ ಜನಾರ್ದನಮ್ ।**
**ದರ್ಶನಾತ್ ತಸ್ಯ ದೇವೇಶ ನರಕಾಗ್ನಿಃ ಪ್ರಣಶ್ಯತಿ ॥**



ಕರವೀರ ಪುಷ್ಪದ ದೇವತೆಯು ಕಾಲೀದೇವಿಯೇ (ದುರ್ಗಾ) ಆಗಿರುವಳು.

**ಕರವೀರಂ ಜಯಾದೇವಿ ಸ್ವಯಂ ಕಾಲೀ ನ ಚಾನ್ಯಥಾ।**
**ಯೇಽರ್ಚಯಂತಿ ಜನಾಧಕ್ಷಂ ಕರವೀರೈಃ ಸಿತಾಸಿತೈಃ।**
**ಚತುರ್ಯುಗಾನಿ ದೇವೇಶ ಪ್ರೀತೋ ಭವತಿ ಮಾಧವಃ॥**

- **ಲಕ್ಷ್ಮಿದೇವಿಗೆ ಸಮನಾದ ಪುಷ್ಪಗಳು :**

**ಮಾಲತೀ ಬಕುಲಾಶೋಕ ಶೇಫಾಲೀ ನವಮಲ್ಲಿಕಾ।**
**ಕೇತಕಂ, ಬಕುಲಂ, ಕುಂದಂ ಪಾಟಲಾ ಚಂಪಕಂ ತಥಾ॥**

–ಬಿಲ್ವಂ, ಕಲ್ಹಾರಕಂ

ಇವೇ ಮೊದಲಾದ ಇಪ್ಪತ್ತೈದು ಪುಷ್ಪಗಳು ಲಕ್ಷ್ಮಿದೇವಿಗೆ ಸಮಾನವಾಗಿದ್ದು ಭಗವಂತನಿಗೆ ಅತಿಪ್ರಿಯವಾಗಿದೆ ಎಂದು ತಾತ್ಪರ್ಯ.

**ಪಂಚವಿಂಶತಿ ಪುಷ್ಪಾಣಿ ಲಕ್ಷ್ಮೀತುಲ್ಯಪ್ರಿಯಾನಿ ಮೇ।**

- **ಪುಷ್ಪಾರ್ಪಣೆಯ ಫಲ :**

**ಭಕ್ತ್ಯಾ ದೂರ್ವಾಂಕುರೈಃ ಪುಂಭಿಃ ಪೂಜಿತಃ ಪುರುಷೋತ್ತಮಃ।**
**ಹರಿರ್ದದಾತಿ ಹಿ ಫಲಂ ಸರ್ವಯಜ್ಞೈಶ್ಚ ದುರ್ಲಭಮ್॥**

– ಕೃ.ಮಹಾರ್ಣವ

**ಸಕೃದಭ್ಯರ್ಚ್ಯ ಗೋವಿಂದಂ ಬಿಲ್ವ ಪತ್ರೇಣ ಮಾನವಃ।**
**ಮುಕ್ತೀಭಾಗೀ ನಿರಾತಂಕೀ ವಿಷ್ಣೋರ್ಲೋಕೇ ಚಿರಂ ವಸೇತ್॥**

– ಕೃ. ಮಹಾರ್ಣವ

ದೂರ್ವೆಯನ್ನು ಭಕ್ತಿಯಿಂದ ಅರ್ಪಿಸಿದರೂ ಭಗವಂತನು, ಪ್ರೀತನಾಗಿ ಸಕಲ ಯಜ್ಞಗಳಿಂದಲೂ ದುರ್ಲಭವಾದ ಫಲ ನೀಡುವನು. ಅಷ್ಟೇಕೆ ಯಾವುದೂ ಲಭಿಸದಿದ್ದಾಗ ಬಿಲ್ವಪತ್ರೆಯಿಂದ ಅರ್ಚಿಸಿದರೂ ಸಾಕು, ಮುಕ್ತನಾಗಿ ವಿಷ್ಣುಲೋಕ ಹೊಂದುವನು. ತುಲಸಿಯ ಮಂಜರಿಯನ್ನೆ ಬಿಲ್ವವೆನ್ನಲಾಗಿದೆ.

**ತುಲಸೀ ಮಂಜರೀ ಯಾ ತು ಸಾ ಬಿಲ್ವೇತಿ ಗೀಯತೇ।**

- **ಪತ್ರೆಗಳನ್ನೂ ಅರ್ಪಿಸಬಹುದು :**

ಪುಷ್ಪಗಳು ಅಲಭ್ಯವಾದಾಗ ಪತ್ರೆಗಳನ್ನೂ ಏರಿಸಬಹುದು, ತುಲಸೀ ಪತ್ರ, ಬಿಲ್ವಪತ್ರ, ಮರುಗ, ದವನ, ಮಾಚೀಪತ್ರೆ, ಲವಂಗಪತ್ರ, (ಭೃಂಗಾರ) ಗರಿಕೆ, ಶಮೀ, ಖದಿರ = ಕಾಚು

**ತುಲಸೀಗಂಧಪರ್ಣಂ ಚ ಧಾತಕೀ ವಿಷ್ಣುಕರ್ಣಿಕಾ ।**

**ಬಿಲ್ವಾಶ್ವತ್ಥತಮಾಲಾಶ್ಚ ಮರುಗಂ ದವನಂ ತಥಾ ।**

**ಪತ್ರಾಣ್ಯೇತಾನ್ಯುಪಾದಾಯ ಪೂಜಯೇದ್ ಗರುಡಧ್ವಜಮ್ ।**

**ಭಕ್ತ್ಯಾದೂರ್ವಾಂಕುರೈಃ ಘುಂಭಿಃ ಪೂಜಿತಃ ಪುರುಷೋತ್ತಮಃ ॥**

**ಸಕೃದಭ್ಯರ್ಚ್ಯ ಗೋವಿಂದಂ ಬಿಲ್ವಪತ್ರೇಣ ಮಾನವಃ ।**

**ಕದಿರಂ ಸಹದೇವೀ ಚ ಶಮೀ ಬ್ರಹ್ಮಪಲಾಶಕಂ ।**

**ಚೂತಪರ್ಣಂ ಬಕಾಪದ್ಮಂ ತಥಾ ಕರ್ಪೂರಮಲ್ಲಿಕಾ ॥**

- **ಚೈತ್ರದಲ್ಲಿ ದವನ ಪೂಜೆ :**

ಚೈತ್ರಮಾಸದಲ್ಲಿ ಏಕಾದಶೀ, ಪೂರ್ಣಿಮೆ, ಅಮಾವಾಸ್ಯೆ ಈ ದಿವಸಗಳಲ್ಲಿ ಶ್ರೀಹರಿಗೆ ದವನದಿಂದ ಪೂಜೆಯನ್ನು ಮಾಡಬೇಕು. ದವನವನ್ನು ಮೂಲಮಂತ್ರದಿಂದ ಏರಿಸಬೇಕು.

**ದಮನಂ ಮೂಲಮಂತ್ರೇನ ಹ್ಯರ್ಪಯೇದ್ ವಿಷ್ಣುಮೂರ್ಧನಿ ।**

ಲಕ್ಷ್ಮೀ ಹಾಗೂ ವಿನಾಯಕನಿಗೆ ತುಲಸಿ ಇಲ್ಲ.

**ವಿನಾಯಕೇ ತು ತುಲಸೀ ನಾರ್ಪಯೇತ್ ಚಾತುಚಿದ್ ಬುಧಃ ।**

**ಮಹಾಲಕ್ಷ್ಮೇ ಚ ತುಲಸೀಂ ನಾರ್ಪಯೇತ್ ಚಾತುಚಿದ್ ಬುಧಃ ॥**

- **ಪುಷ್ಪಗಳನ್ನು ಏರಿಸಬೇಕಾದ ಅಂಗಗಳು :**

ಮುಕುಟ, ಶಿರಸ್ಸು, ಕಂಠ, ಹೃದಯ, ನಾಭಿ, ಜಾನು, ಪಾದ, ಹೀಗೆ ಎಂಟು ಅಂಗಗಳಲ್ಲಿ ಪುಷ್ಪದಳವನ್ನು ಮೂಲಮಂತ್ರದಿಂದ ಅರ್ಪಿಸಬೇಕು.

**ಮುಕುಟೇ ಮೂರ್ಧ್ನಿ, ಕಂಠೇ ಚ, ಹೃದಯೇ, ನಾಭಿ, ಗುಹ್ಯಕೇ ।**
**ಜಾನುಕೇ ಪಾದಕೇ ಚೈವ ಅಷ್ಟಪುಷ್ಪಂ ಸಮರ್ಚಯೇತ್ ॥**

– ಕರಣಾಗಮ, ಪರ್ವ 31

- **ಉಪಚಾರಗಳಲ್ಲಿ ಪುಷ್ಪಗಳನ್ನು ಅರ್ಪಿಸಬೇಕಾದದ್ದು :**

ಆವಾಹನೆ, ಅರ್ಘ್ಯ, ಪಾದ್ಯ, ಸ್ನಾನ, ಧೂಪ, ಗಂಧಲೇಪನ, ನೈವೇದ್ಯ, ವಿಸರ್ಜನೆ, ಈ ಉಪಚಾರ ಕಾಲದಲ್ಲಿ ಪುಷ್ಪಗಳನ್ನು ಏರಿಸಬೇಕು.

**ಆವಾಹನಾರ್ಘ್ಯ ಪಾದೇಷು ಸ್ನಾನ ಧೂಪೇ ವಿಲೇಪನೇ ।**
**ನೈವೇದ್ಯ ಚ ವಿಸರ್ಗೇ ಚ ಪುಷ್ಪಮಷ್ಟಸು ಯೋಜಯೇತ್ ॥**

– ಕಾಮಿಕಾಗಮ ಶ್ಲೋಕ 411–412

ಹೂವುಗಳನ್ನು ಗಿಡದಲ್ಲಿ ಹೇಗಿತ್ತೋ ಹಾಗೆಯೇ ಅರ್ಪಿಸಬೇಕು ಎಂಬ ನಿಯಮ ಕುಸುಮಾಂಜಲಿಯಲ್ಲಿ ಅನ್ವಿತವಾಗುವುದಿಲ್ಲ. (ಕುಸುಮಾಂಜಲಿ ಬೊಗಸೆಯಲ್ಲಿರುವ ಪುಷ್ಪಗಳು).

**ಪುಷ್ಪಂ ವಾ ಯದಿ ವಾ ಪತ್ರ ಫಲಂ ನೇಷ್ಟಮಧೋಮುಖಮ್ ।**
**ಪುಷ್ಪಾಂಜಲಿವಿಧಿಂ ಹಿತ್ವಾ ಯಥೋತ್ಪನ್ನಂ ತಥಾರ್ಪಣಂ ॥**

- **ಆಗದ ಪುಷ್ಪಗಳು :**

ಒಬ್ಬೊಬ್ಬ ದೇವತೆಗೆ ಒಂದೊಂದು ಪುಷ್ಪಗಳು ಪೂಜೆಗೆ ಅನರ್ಹವಾಗಿವೆ. ಆ ದೇವತೆಗಳಿಗೆ ಆ ನಿಷಿದ್ಧ ಪುಷ್ಪಗಳನ್ನು ಅರ್ಪಿಸಬಾರದು.

- **ವಿಷ್ಣುವಿಗೆ ಆಗದ ಪುಷ್ಪ :**

ಅಕ್ಷತಪುಷ್ಪ, ಎಕ್ಕಪುಷ್ಪ, ದತ್ತೂರ ಇವುಗಳನ್ನು ವಿಷ್ಣುವಿಗೆ ಅರ್ಪಿಸಬಾರದು.

**ಅಕ್ಷತಾನ್ ಅರ್ಕದತ್ತೂರೌ ವಿಷ್ಣೌ ನೈವಾರ್ಪಯೇತ್ ಸುಧೀಃ ।**

- **ರುದ್ರದೇವರಿಗೆ :**

ಮಾಲತಿಪುಷ್ಪ ಹಾಗೂ ಕೇದಿಗೆ ಶಿವನಿಗೆ ಅರ್ಪಿಸಬಾರದು.

**ಶಂಕರೇ ನಾರ್ಪಯೇದ್ ವಿದ್ವಾನ್ ಕೇತಕೀಂ ಮಾಲತೀಂ ತಥಾ ।**

- **ತುಲಸೀದಳ ರಹಿತವಾದ ಪುಷ್ಪಪೂಜೆಯು ನಿಷಿದ್ಧ :**

ವಿಷ್ಣುವಿಗೆ ತುಲಸೀದಳ ರಹಿತವಾದ ಪುಷ್ಪಗಳಿಂದ ಪೂಜೆಯು ನಿಷಿದ್ಧವಾಗಿದೆ. ಉತ್ತರಾಷಾಢವಿದ್ಧವಾದ ಶ್ರವಣವ್ರತಾಚರಣೆಯಂತೆ ನಿಷಿದ್ಧವಾಗಿದೆ. ಆದ್ದರಿಂದ ತುಲಸೀ ಸಹಿತವಾಗಿಯೇ ಪುಷ್ಪಗಳಿಂದ ಪೂಜಿಸಬೇಕು. ಸುರಾಬಿಂದುವಿನಿಂದ ಮಿಶ್ರವಾದ ತೀರ್ಥದಂತೆ ವರ್ಜ್ಯವಾಗಿದೆ.

ತುಲಸಿ ಸಹಿತವಾಗಿಯೇ ಪತ್ರಾದಿಗಳನ್ನು ಅರ್ಪಿಸಬೇಕು.

**ತುಲಸೀದಲಸಂತ್ಯಕ್ತಂ ಪುಷ್ಪೇಣಾಭ್ಯರ್ಚನಂ ಮಮ ।**
**ಉತ್ತರಾಷಾಢ ಮಿಲಿತ ಶ್ರವಣ ದ್ವಾದಶೀ ವ್ರತಂ ।**
**ಸುರಯಾ ಬಿಂದುನಾ ಸ್ಪೃಷ್ಟ ತೀರ್ಥವಚ್ಚೋಭಯಂ ತ್ಯಜೇತ್ ॥**

**ತ್ವತ್ಪತ್ರರಹಿತಂ ಯತ್ತು ಪತ್ರಂ ವಾ ಪುಷ್ಪಮೇವ ವಾ ।**
**ಸುವರ್ಣೇನ ಕೃತಂ ಪುಷ್ಪಂ ರಜತಂ ರತ್ನಮೇವ ವಾ ।**
**ಮಮ ಪಾದಾಬ್ಜ ಪೂಜಾಯಾಂ ಅನರ್ಹಂ ಭವತಿ ಧ್ರುವಮ್ ॥ –ಸ್ಮೃತಿ**

- **ಪುಷ್ಪವು ಅಲಭ್ಯವಾದಾಗ ಯತಿಯ ಭಾವ ಪುಷ್ಪಾರ್ಚನೆ :**

ಯತಿಗಳಿಗೆ ಪುಷ್ಪಗಳು, ತುಲಸೀದಳಗಳು ಅಲಭ್ಯವಾದಾಗ ಮಾನಸಿಕವಾಗಿ ಪುಷ್ಪಗಳನ್ನು ಚಿಂತಿಸಿ, ಓಂಕಾರವನ್ನು ಉಚ್ಚರಿಸುತ್ತಾ ಭಾವಪುಷ್ಪಗಳನ್ನು ಏರಿಸಬಹುದು.

- **ಅಷ್ಟಭಾವ ಪುಷ್ಪಗಳು :**

**ಅಹಿಂಸಾ ಪ್ರಥಮಂ ಪುಷ್ಪಂ ಪುಷ್ಪಮಿಂದ್ರಿಯ ನಿಗ್ರಹಃ ।**
**ಸರ್ವಭೂತದಯಾ ಪುಷ್ಪಂ ಸತ್ಯಪುಷ್ಪಂ ವಿಶೇಷತಃ ।**
**ಜ್ಞಾನ ಪುಷ್ಪಂ ತಪಃ ಪುಷ್ಪಂ ಕ್ರಿಯಾಪುಷ್ಪಂ ತಥೈವ ಚ ।**
**ಧ್ಯಾನಂ ಚೈವಾಷ್ಟಮಂ ಪುಷ್ಪಂ ಏಭಿಃ ತುಷ್ಯತಿ ಕೇಶವಃ ।**
**ಬುಧ್ಯಾ ವಿಹಂಸಾಪುಷ್ಪೈರ್ವಾ ಪ್ರಣವೇನ ಸಮರ್ಚಯೇತ್ ।**
**ವಾಸುದೇವಾತ್ಮಕಂ ಬ್ರಹ್ಮ ಮೂಲಮಂತ್ರೇಣ ವಾ ಯತಿಃ ॥**

## 19. ತುಲಸೀ ಬಗ್ಗೆ ವಿವರಣೆ :

- **ತುಲಸೀ ಗಿಡದ ಬುಡದಲ್ಲಿ ನೀರನ್ನು ಹಾಕುವ ಮಂತ್ರ :**

**ಶ್ರಿಯಃ ಪ್ರಿಯೇ ಶ್ರಿಯಾವಾಸೇ ನಿತ್ಯಂ ಶ್ರೀಧರವಲ್ಲಭೇ ।**
**ಭಕ್ತ್ಯಾ ದತ್ತಂ ಮಯಾಽರ್ಘ್ಯಂ ಹಿ ತುಲಸಿ ಪ್ರತಿಗೃಹ್ಯತಾಂ ॥**
**ಮನಃ ಪ್ರಸಾದ ಜನನೀ ಸುಖಸೌಭಾಗ್ಯ ವರ್ಧಿನಿ ।**
**ಆಧಿಂ ವ್ಯಾಧಿಂ ಚ ಹರ ಮೇ ತುಲಸಿ ತ್ವಾಂ ನಮಾಮ್ಯಹಂ ॥**

- **ತುಳಸಿಯಲ್ಲಿ ಕ್ಷಮಾ ಯಾಚಾನಾ ಮಂತ್ರ :**

**ತುಲಸ್ಯಮೃತಜನ್ಮಾಸಿ ಸದಾ ತ್ವಂ ಕೇಶವ ಪ್ರೀಯೆ ।**
**ಕೇಶವಾರ್ಥೇ ಏಚಿನ್ವಾಮಿ ಕ್ಷಮಸ್ವ ಹರಿವಲ್ಲಭೆ ॥** – ಸ್ಕಾಂಧ

- **ತುಲಸಿಯನ್ನು ಬಿಡಿಸುವ ಕ್ರಮ :**

ತುಲಸೀ ಮಂತ್ರವನ್ನು ಪಠಿಸಿ, ಮೂರು ಬಾರಿ ಚಪ್ಪಾಳೆ ಹೊಡೆದು, ನಂತರ ಬೇರೊಂದು ರೆಂಬೆ (ಶಾಖೆಯು) ಅಲ್ಲಾಡದಂತೆ ಮೆಲ್ಲಗೆ ಬಿಡಿಸಬೇಕು. ರೆಂಬೆಗಳು ಮುರಿಯಬಾರದು. ಉಗುರಿನ ಸ್ಪರ್ಶವಾಗದಂತೆ ಕಿತ್ತಬೇಕು.

**ನಖಸ್ಪರ್ಶೇನ ರಹಿತಂ ಚಿನುಯಾತ್ ಶುಚಿನಾ ಸ್ವಯಂ ।**

ತುಲಸಿಯನ್ನು ತೊಳೆದು ತೊಳೆದು ಪೂಜಿಸಬಹುದು.

**ತುಲಸೀಂ ಬಿಲ್ವಪತ್ರಂ ಹೇಮಪುಷ್ಪಂ ಚ ಮೌಕ್ತಿಕಂ ।**
**ನಿತ್ಯಂ ತು ಧಾರಯೇದೇವಂ ಪ್ರಕ್ಷಾಲ್ಯ ಚ ಪುನಃ ಪುನಃ ॥**

- **ತುಲಸೀ ಸಂಗ್ರಹಣೆ :**

ನಿತ್ಯಾರ್ಚನೆಯಲ್ಲಿ ತುಲಸಿಯು ಮಹತ್ವವಾದ ಪಾತ್ರವನ್ನು ವಹಿಸುತ್ತದೆ. ತುಲಸೀ ರಹಿತವಾದ ಪೂಜೆಯನ್ನು ಭಗವಂತನು ಸ್ವೀಕರಿಸುವುದಿಲ್ಲ. ಆ ಪೂಜೆಯು ವ್ಯರ್ಥವಾಗುತ್ತದೆ.

**ಯತ್ಕರ್ಮ ಕುರುತೇ ಮನುಜಃ ಪೃಥಿವ್ಯಾಂ ।**
**ನಾರಾಯಣಪ್ರಿಯತಮಾಂ ತುಲಸೀಂ ವಿನಾ ಚ ॥**

**ತತ್ಸರ್ವಮೇವ ವಿಫಲಂ ಭವತಿ ದ್ವಿಜೇಂದ್ರ ।**
**ಪದ್ಮೇಕ್ಷಣೋऽಪಿ ನ ಹಿ ತುಷ್ಯತಿ ದೇವ ದೇವಃ ॥**

- **ತುಲಸ್ಯಾ ಹರಣ ಮಂತ್ರ :**

**ತುಲಸ್ಯಮೃತನಾಮಾऽಸಿ ತದಾ ತ್ವಂ ಕೇಶವಪ್ರಿಯೇ ।**
**ಕೇಶವಾರ್ಥೇ ವಿಚಿನ್ವಾಮಿ ವರದಾ ಭವ ಶೋಭನೇ ॥**

**ಚಯನೋದ್ಭವದುಃಖಂ ಯದ್ ದೇವಿ ತೇ ಹೃದಿ ವರ್ತತೇ ।**
**ತತ್ ಕ್ಷಮಸ್ವ ಜಗನ್ಮಾತಃ ತುಲಸಿ ತ್ವಾಂ ನಮೊಸ್ತು ತೇ ॥**

- **ತುಲಸೀ ನಿಷಿದ್ಧ ಕಾಲಗಳು :**

ಪೂರ್ಣಿಮೆ, ಅಮಾವಾಸ್ಯೆ, ದ್ವಾದಶೀ, ರವಿಸಂಕ್ರಮಣ, ಅಭ್ಯಂಗ ಮಾಡಿಕೊಂಡ ದಿವಸ, ಮಧ್ಯಾಹ್ನ, ಸಂಧ್ಯಾಕಾಲ, ರಾತ್ರಿ, ಅಶೌಚವಿರುವಾಗ, ಅಶುಚಿಯಾಗಿಯೂ ತುಲಸಿಯನ್ನು ಕೀಳಬಾರದು.

- **ಹರಿಯ ತಲೆಛೇದನ :**

ಸಂಕ್ರಮಣ, ಪೂರ್ಣಿಮಾ–ಅಮಾವಾಸ್ಯೆ, ದ್ವಾದಶೀ, ಸಂಧ್ಯಾಕಾಲ, ರಾತ್ರಿ ಈ ಕಾಲಗಳಲ್ಲಿ ಯಾರು ತುಲಸಿಯನ್ನು ಬಿಡಿಸುವರೋ ಅವರು ಹರಿಯ ತಲೆಯನ್ನೇ ತೆಗೆದ ಪಾಪಕ್ಕೆ ಒಳಗಾಗುವರು.

**ಸಂಕ್ರಾತೌ ಪಕ್ಷಯೋರಂತೇ ದ್ವಾದಶ್ಯಾಂ ನಿಶಿ ಸಂಧ್ಯಯೋಃ ।**
**ತುಲಸೀಂ ಯೇ ವಿಚಿನ್ವಂತಿ ವಿಚಿನ್ವಂತಿ ಹರೇಃ ಶಿರಃ ॥**

ನಿಷಿದ್ಧ ದಿನಗಳಲ್ಲಿ ತುಲಸೀ ಪತ್ರ ಛೇದನವು ಅನರ್ಥಗಳನ್ನುಂಟು ಮಾಡುತ್ತವೆ.

- **ವಾರಗಳು :**

ಭಾನುವಾರ, ಮಂಗಳವಾರ, ಶುಕ್ರವಾರಗಳಂದು ತುಲಸಿಯನ್ನು



ತೆಗೆಯಬಾರದು. ವ್ಯತೀಪಾತವಿರುವ ದಿನ, ವೈಧೃತಿ ಇವುಗಳಲ್ಲಿ ತುಲಸಿಯನ್ನು ಕಿತ್ತಬಾರದು. ಅಕಾಲದಲ್ಲಿ ತುಲಸಿಯನ್ನು ಬಿಡುಸುವವರು ಬ್ರಹ್ಮಹತ್ಯೆಯ ಪಾಪವನ್ನು ಹೊಂದುವರು.

**ಭಾನುವಾರೇ ಭೃಗೌ ಭೌಮೇ ವ್ಯತೀಪಾತೇ ಯುಗಾದಿಷು ।**
**ನಾಹರೇತ್ ತುಲಸೀಪತ್ರಂ ಮಧ್ಯಾಹ್ನೋಪರಿ ವೈಧೃತೌ ॥**

**ಸಂಕ್ರಾಂತೌ ಪಕ್ಷಯೋರಂತೆ ದ್ವಾದಶ್ಯಾಂ ನಿಶಿ ಸಂಧ್ಯಯೋಃ ।**
**ತುಲಸೀಂ ಯೆ ವಿಚಿನ್ವಂತಿ ತೇ ವೈ ಬ್ರಹ್ಮಹಣಃ ಸ್ಮೃತಃ ॥** – ಗಾರುಡ

- **ಮಧ್ಯಾಹ್ನದ ನಂತರವೂ ಬಿಡಿಸಬಾರದು :**

**ಮಧ್ಯಾಹ್ನಾತ್ ಪರತಸ್ತಸ್ಯ ಹರೇಃ ಪೂಜಾರತಾಸ್ತಥಾ ।**
**ಛಿಂದಂತಿ ತುಲಸೀಂ ಮೂಢಾಃ ಅಧೋಗಚ್ಛಂತಿ ಮಾನವಾಃ ॥**

- **ಸ್ನಾನ ಮಾಡದೆ ತುಲಸೀ ಕೀಳಬಾರದು :**

**ಅಸ್ನಾತ್ವಾ ತುಲಸೀ ಛಿತ್ವಾ ದೇವಾರ್ಚಾಪಿತೃಕರ್ಮಣಿ ।**
**ತತ್ಸರ್ವಂ ನಿಷ್ಫಲಂ ಯಾತಿ ಪಂಚಗವ್ಯೇನ ಶುದ್ಧ್ಯತಿ ॥**

ಸ್ನಾನವನ್ನು ಮಾಡದೇ ತುಲಸಿಯ ಸಂಗ್ರಹವು ದೋಷಕಾರಿಯಾಗಿದ್ದು ಪಂಚಗವ್ಯವನ್ನು ಕುಡಿದು ಉಪವಾಸವನ್ನು ಮಾಡುವುದು ಪ್ರಾಯಶ್ಚಿತ್ತ.

ಮೊದಲು ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡಿ ನಿರ್ಮಾಲ್ಯ ವಿಸರ್ಜನೆ, ಸಂಧ್ಯಾವಂದನೆ, ಬ್ರಹ್ಮಯಜ್ಞಗಳನ್ನು ಮುಗಿಸಿ, ನಂತರ ತುಲಸಿಯನ್ನು ಸಂಗ್ರಹಿಸುವುದು. ಮಧ್ಯಾಹ್ನದ ನಂತರ ಪುನಃ ಸ್ನಾನವನ್ನು ಮಾಡಿ ಪೂಜಾದಿಗಳನ್ನು ಮಾಡಬೇಕು.

ತುಲಸಿಯನ್ನು ಸ್ನಾನ ಮಾಡಿ ಬಿಡಿಸಬೇಕು. ಸ್ನಾನ ಮಾಡಿ ತುಲಸಿಯನ್ನು ಬಿಡಿಸಿದ ನಂತರ ಪುನಃ ಸ್ನಾನ ಮಾಡಿ ಪೂಜಾದಿ ಕಾರ್ಯಗಳನ್ನು ಮಾಡಬೇಕು ಅಥವಾ ಸ್ನಾನ ಮಾಡಿದ ಶಿಷ್ಯರಿಂದ ತುಲಸಿಯನ್ನು ತರಿಸಿ ಪೂಜಿಸಬಹುದು.

- **ತುಲಸಿಯ ಅವಶ್ಯಕತೆ :**

ತುಲಸಿಯಲ್ಲಿ ಭಗವಂತನು, ಲಕ್ಷ್ಮೀದೇವಿ, ಬ್ರಹ್ಮಾದಿಗಳ ಜೊತೆಗೆ ಇರುವನು. ಶ್ರೀ ತುಲಸಿಯಲ್ಲಿ 5317 ರೂಪದಿಂದ ಭಗವಂತನಿರುವನು. ಆದ್ದರಿಂದ ತುಲಸಿಯು ಇಲ್ಲದೆ ಪೂಜೆಯು ಪೂರ್ಣವಾಗುವುದಿಲ್ಲ.

**ಕಂಸಾರೇಃ ಪಂಚಸಾಹಸ್ರಂ ತಥೈವ ತ್ರಿಶತೋತ್ತರಂ ।**
**ರೂಪಾಣಾಂ ಸಪ್ತ ದಶಕಂ ಏಕಸ್ಮಿನ್ ತುಲಸೀದಲೇ ॥** – ಪ್ರಕಾಶ ಸಂಹಿತೆ

- **ತುಲಸಿಯು ಅಲಭ್ಯವಾದಾಗ :**

ತುಲಸಿಯಿಂದಲೇ ಭಗವಂತನ ಪೂಜೆಯು ವಿಹಿತವಾಗಿದೆ. ತುಲಸಿಯು ಸಿಗದಿದ್ದಾಗ ತುಲಸಿಯ ಎಲೆಗಳಿಂದ, ಎಲೆಗಳೂ ಅಲಭ್ಯವಾದಾಗ ಕೊಂಬೆಗಳಿಂದ, ರೆಂಬೆಗಳು ಅಲಭ್ಯವಾದಾಗ ತುಲಸಿಯ ಮೃತ್ತಿಕೆ–ಯಿಂದಲಾದರೂ ಪೂಜಿಸಬಹುದು.

ಮೃತಿಕಾದಿಗಳೂ ಅಲಭ್ಯವಾದಾಗ ತುಲಸೀ, ತುಲಸೀ ಎಂದು ನಾಮವನ್ನು ಉಚ್ಚರಿಸಿಯಾದರೂ ಜಲಜಾಕ್ಷನನ್ನು ಅರ್ಚಿಸಬಹುದು.

**ಪತ್ರಾಲಾಭೇ ತು ಶಾಖಾಭಿಃ, ಶಾಖಾಲಾಭೇ ಶಿಫಾಲವೈಃ ।**
**ಶಿಫಾಲಾಭೇ ಮೃದಾ ತತ್ರ ಭಕ್ತಿಮಾನ್ ಅರ್ಚಯೀತ ಮಾಮ್ ॥**

**ತುಲಸೀ ಮಂಜರೀ ಗ್ರಾಹ್ಯಾ ತದಭಾವೇ ತು ಪಲ್ಲವಃ ।**
**ತದಭಾವೇ ತು ಪತ್ರಂ ಸ್ಯಾತ್ ತದಭಾವೇ ತು ಕಾಷ್ಠಿಕಾ ॥**

**ತದಭಾವೇ ತು ಪತ್ರಂ ಸ್ಯಾತ್ ತದಭಾವೇ ತು ಮೃತ್ತಿಕಾ ।**
**ಮೃತ್ತಿಕಾಯಾ ಅಭಾವೇ ತು ತುಲಸೀ ಶಬ್ಧ ಉಚ್ಯತೇ ॥**

ಈ ಮೇಲಿನ ಪ್ರಮಾಣಗಳೆಲ್ಲವೂ ದೇವರ ಪೂಜೆಯಲ್ಲಿ ತುಲಸಿಯ ಅವರ್ಜನೀಯತೆಯನ್ನು ಸಾರುತ್ತದೆ. ಆದ್ದರಿಂದಲೇ –

**ತ್ವತ್ಪತ್ರರಹಿತಂ ಯತ್ತು ಪತ್ರಂ ವ ಪುಷ್ಪಮೇವ ವಾ ।**
**ಮಮ ಪಾದಾಬ್ಜ ಪೂಜಾಯಾಂ ಅನರ್ಹಂ ಭವತಿ ಧ್ರುವಮ್ ॥**



- **ತುಲಸಿಗೆ ನಿರ್ಮಾಲ್ಯ ದೋಷವಿಲ್ಲ :**

ತುಲಸಿಯನ್ನು ಸಂಗ್ರಹಿಸಿ ಆರು ತಿಂಗಳು ಕಾಲ ಪರ್ಯಂತ ಪೂಜಿಸುತ್ತಿರಬಹುದು. ಒಣಗಿದ್ದರೂ ದೋಷವಿಲ್ಲ. ಹಿಂದಿನ ದಿನ ದೇವರ ಮೇಲಿರುವ ನಿರ್ಮಾಲ್ಯ ತುಲಸಿಯ ನಿರ್ಮಾಲ್ಯತೆಯನ್ನು ಹೋಗಲಾಡಿಸಲು ಮಾತ್ರ ನೀರಿನ ಪ್ರೋಕ್ಷಣೆಯು ಅವಶ್ಯವಾಗಿದೆ.

**ಶುಷ್ಕಂ ಪರ್ಯುಷಿತಂ ವಾಪಿ ನ ನಿರ್ಮಾಲ್ಯಂ ತ್ರಿವಾಸರೈಃ ।**
**ಪ್ರಕ್ಷಾಲಯಿತ್ವಾ ತುಲಸೀ ಪೂಜಯೇಚ್ಚ ಸದಾ ಹರಿಮ್ ॥**

- **ತೊಳೆದು ಪೂಜಿಸಬಾರದು :**

ನಿರ್ಮಾಲ್ಯವಾಗಿದ್ದರೆ ಮಾತ್ರ ತೊಳೆದು ಪೂಜಿಸಬೇಕು. ಗಿಡದಿಂದ ತಂದು ನೀರನ್ನು ಪ್ರೋಕ್ಷಿಸಿ ಪೂಜಿಸಿದರೆ ಬ್ರಹ್ಮಘಾತಿಯಾಗುವನು.

**ಮಮ ಪ್ರಿಯಾಂ ತು ತುಲಸೀಂ ಪ್ರಕ್ಷಾಲ್ಯ ತು ಕರೋತಿ ಯಃ ।**
**ಸ ಪಾಪೀ ಬ್ರಹ್ಮಘಾತೀ ಸ್ಯಾತ್ ನಿರಯಂ ಸೋಽಧಿಗಚ್ಛತಿ ॥**

- **ವೇಣು ಪಾತ್ರೆ (ಬುಟ್ಟಿ)ಯಲ್ಲಿ ಸಂಗ್ರಹ :**

**ಯಾ ದೃಷ್ಟಾ ನಿಖಿಲಾಘಸಂಘ ಶಮನೀ ಸ್ಪೃಷ್ಟಾ ವಪುಃ ಪಾವನೀ ।**
**ರೋಗಾಣಾಂ ಅಭಿವಂದಿತಾ ನಿರಸನೀ ಸಿಕ್ತಾ ಅಂತಕತ್ರಾಸಿನೀ ।**

**ಪ್ರತ್ಯಾಸತ್ತಿವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ ।**
**ನ್ಯಸ್ತಾ ತಚ್ಚರಣೇ ವಿಮುಕ್ತಿ ಫಲದಾ ತಸ್ಯೈ ತುಲಸ್ಯೈ ನಮಃ ॥**

- **ತುಲಸಿಯನ್ನು ತರುವ ಕ್ರಮ :**

ಈ ಮಂತ್ರವನ್ನು ಪಠಿಸುತ್ತಾ ಒಂದೊಂದೇ ದಳಗಳನ್ನು ವೇಣುಪಾತ್ರೆಯಲ್ಲಿ ಸಂಗ್ರಹಿಸಬೇಕು.

ಚಿತ್ತಶುದ್ಧನು ಆಗಿ ಮುಂಜಾನೆಯೊಳು ತುಲಸಿ ಸ್ತೋತ್ರವನ್ನೇ ಮಾಡುತ್ತಾ

ದಿವ್ಯವಾಗಿಹ ತ್ರಿದಳ ಪ್ರತ್ಯೇಕ ಪಾತ್ರೆಯಲ್ಲಿ ತೆಗೆದು ಶೋಧಿಸಿ ತುಂಬಿ ವಿತ್ತಾದಿಯಲಿ ತಾರದೆ ಮತ್ತೆ ವಸ್ತ್ರದಿ ಹಸ್ತ ಶಿಲೆಯರ್ಕ ಏರಂಡ – ಪತ್ರದಲ್ಲಿ ತಾರದಲೇ, ಭೂಮಿಯೊಳಗಿಡದೆ, ಪೂರ್ವೋತ್ತರಾಭಿ– ಮುಖವಾಗಿ ಭಕ್ತಿಯಿಂದ ತರಬೇಕು, ಹೊತ್ತು ಮೀರಿಸಲಾಗದೋ– ವಿಜಯದಾಸರು.

- **ಪುಷ್ಪ ತುಲಸೀ ಸಂಗ್ರಹದಲ್ಲಿ ಭಗವನ್ನಾಮಸ್ಮರಣೇ :**

ಪುಷ್ಪ ಸಂಗ್ರಹಣೆಯಲ್ಲಿ ಶ್ರೀಕೃಷ್ಣಸ್ಮರಣೆ, ತುಲಸಿಯ ಸಂಗ್ರಹಣೆಯಲ್ಲಿ ಶ್ರೀರಾಮ ಸ್ಮರಣೆ ಮಾಡಬೇಕು.

**ಶ್ರೀಮತ್ತುಲಸ್ಯಾಃ ಛೇದನೇ ಚೈವ ಕಾಲೇ ಶ್ರೀರಾಮ ರಾಮೇತಿ ಚ ಸಂಸ್ಮರೇತ್ ।**
**ಪುಷ್ಪಾದೀನಾಂ ಛೇದನೇ ಚೈವ ಕಾಲೇ ಶ್ರೀಕೃಷ್ಣ ಕೃಷ್ಣೇತಿ ಜಪೇತ್ ಸದೈವ ॥**

- **ಗುಹ್ಯಪಾಪ ಪರಿಹಾರ :**

ಶ್ರೀ ತುಲಸಿಯನ್ನು ವಿಧಿವತ್ತಾಗಿ ಸಂಗ್ರಹಿಸಿ, ಕೇಶವನ ಶಿರಸ್ಸಿನಲ್ಲಿ ಭಕ್ತಿಯಿಂದ ಅರ್ಪಿಸಿದವನು, ಬೇರೆಯವರ ಮುಂದೆ ಬಹಿರಂಗವಾಗಿ ಹೇಳಲಾಗದ, ಗುಪ್ತವಾಗಿ ಮಾಡಿರುವ ಪಾಪಗಳೆಲ್ಲವೂ ಪರಿಹಾರವಾಗುತ್ತವೆ.

**ಗುಹ್ಯಾನಿ ಯಾನಿ ಪಾಪಾನಿ ಹ್ಯನಾಖ್ಯೇಯಾನಿ ಮಾನವೈಃ ।**
**ನಾಶಯೇತ್ ತುಲಸೀ ಭಕ್ತ್ಯಾ ದತ್ತಾ ಕೇಶವಮೂರ್ಧನಿ ॥**

– ಪದ್ಮಪುರಾಣ

ತುಲಸಿಯಿಂದ ಅರ್ಚಿಸಿದವನೇ ಧನ್ಯನು. ಕೋಟಿ ಸಂಖ್ಯಾಕಗಳಾದ ಸುವರ್ಣ ನಿರ್ಮಿತ ಪುಷ್ಪಗಳನ್ನು ಭಗವಂತನಿಗೆ ಅರ್ಪಿಸಿದ ಫಲವು ತುಲಸಿದಲ ಅರ್ಚನೆಯಿಂದ ಲಭಿಸುತ್ತದೆ.

**ಪುಷ್ಪೈಃ ದ್ವಾದಶ ಲಕ್ಷಂ ತು ಸುವರ್ಣೈಃ ಕೋಪರುಚ್ಯತೇ ।**
**ತತ್ಫಲಂ ಸಮವಾಪ್ನೋತಿ ತುಲಸ್ಯಾಸ್ತು ದಲೇನ ವಾ ॥** – ಶತಾನಂದಂ

**ಮಣಿಕಾಂಚಪುಷ್ಪಾಣಿ ತಥಾ ಮುಕ್ತಾ ಮಯಾನಿಚ ।**
**ತುಲಸೀಪತ್ರದಾನಸ್ಯ ಕಲಾಂ ನಾರ್ಹಂತಿ ಷೋಡಶೀಂ ॥**

– ವಿಷ್ಣುಧರ್ಮೋತ್ತರ

- **ದ್ವಾದಶಿಯಂದು ತುಲಸಿಯನ್ನು ಬಿಡಿಸಲೇಬಾರದು :**

ನಿಷಿದ್ಧ ದಿವಸಗಳಲ್ಲಿ, ವಾರ, ತಿಥಿಗಳಲ್ಲಿ, ತುಲಸಿದಳವನ್ನು ತೆಗೆಯಬಾರದು ಎಂಬ ನಿಯಮವಾದರೂ ಬ್ರಾಹ್ಮಣರನ್ನು ಬಿಟ್ಟು ಉಳಿದವರಿಗೆ ಮಾತ್ರ ಅನ್ವಯವಾಗುತ್ತದೆ. ವೈಷ್ಣವರು ನಿಷಿದ್ಧಾದಿ ದಿನಗಳಲ್ಲಿ ಪೂಜೆಗೆ ಬೇಕಾಗುವಷ್ಟು ಮಾತ್ರ ಸಂಗ್ರಹಿಸಿದರೆ ದೋಷವಿಲ್ಲ. ಆದರೆ ವೈಷ್ಣವರೂ ದ್ವಾದಶಿಯಂದು ತುಲಸಿಯನ್ನು ಕಿತ್ತಲೇಬಾರದು.

**ನಿಷಿದ್ಧತಿಥಿವಾರೇಷು ತುಲಸ್ಯಾಹರಣಂ ಮುನೇ ।**
**ವೈಷ್ಣವಾನಾಂ ನ ದೋಷಾಯ ವಿಷ್ಣೋಃ ಪ್ರೀತಿಕರತ್ವತಃ ॥** –ವಿಷ್ಣುರಹಸ್ಯ

**ಕ್ವಚಿನ್ನ ತುಲಸೀಂ ಛಿಂದ್ಯಾತ್ ದ್ವಾದಶ್ಯಾಮೇವ ವೈಷ್ಣವ ॥**

–ಗರುಡಪುರಾಣ

**ಸಂಕ್ರಾತ್ಯಾದಿ ನಿಷೇಧಸ್ತು ಪರೇಷಾಂ ಪರಿಕೀರ್ತಿತಂ ।**

- **ದ್ವಾದಶಿಯಂದು ಬ್ರಹ್ಮಾದಿಗಳಿಂದ ತುಲಸೀಪೂಜೆ :**

ಏಕೆಂದರೆ, ದ್ವಾದಶಿಯಲ್ಲಿ ಬ್ರಹ್ಮಾದಿಗಳೂ ತುಲಸೀ ಪೂಜೆಯನ್ನು ಮಾಡುವರು.

**ಪಕ್ಷೇ ಪಕ್ಷೇ ಚ ಸಂಪ್ರಾಪ್ತೇ ದ್ವಾದಶ್ಯಾಂ ವೈಶ್ಯಸತ್ತಮ ।**
**ಬ್ರಹ್ಮಾದಯೋಽಪಿ ಕುರ್ವಂತಿ ತುಲಸೀವನ ಪೂಜನಮ್ ॥**

- **ಯತಿಗಳು ತುಲಸೀಯನ್ನು ಬಿಡಿಸಬಾರದು :**

ವೈಷ್ಣವನು ಭಗವಂತನ ಪೂಜೆಗಾಗಿ ತುಲಸಿಯನ್ನು, ಪುಷ್ಪಗಳನ್ನು

ದಿವ್ಯವಾಗಿಹ ತ್ರಿದಳ ಪ್ರತ್ಯೇಕ ಪಾತ್ರೆಯಲ್ಲಿ ತೆಗೆದು ಶೋಧಿಸಿ ತುಂಬಿ ವಿತ್ತಾದಿಯಲಿ ತಾರದೆ ಮತ್ತೆ ವಸ್ತ್ರದಿ ಹಸ್ತ ಶಿಲೆಯರ್ಕ ಏರಂಡ – ಪತ್ರದಲ್ಲಿ ತಾರದಲೇ, ಭೂಮಿಯೊಳಗಿಡದೆ, ಪೂರ್ವೋತ್ತದಾಭಿ–ಮುಖವಾಗಿ ಭಕ್ತಿಯಿಂದ ತರಬೇಕು, ಹೊತ್ತು ಮೀರಿಸಲಾಗದೋ–ವಿಜಯದಾಸರು.

- **ಪುಷ್ಪ ತುಲಸೀ ಸಂಗ್ರಹದಲ್ಲಿ ಭಗವನ್ನಾಮಸ್ಮರಣೇ :**

ಪುಷ್ಪ ಸಂಗ್ರಹಣೆಯಲ್ಲಿ ಶ್ರೀಕೃಷ್ಣಸ್ಮರಣೆ, ತುಲಸಿಯ ಸಂಗ್ರಹಣೆಯಲ್ಲಿ ಶ್ರೀರಾಮ ಸ್ಮರಣೆ ಮಾಡಬೇಕು.

**ಶ್ರೀಮತ್ತುಲಸ್ಯಾಃ ಛೇದನೇ ಚೈವ ಕಾಲೇ ಶ್ರೀರಾಮ ರಾಮೇತಿ ಚ ಸಂಸ್ಮರೇತ್ ।**
**ಪುಷ್ಪಾದೀನಾಂ ಛೇದನೇ ಚೈವ ಕಾಲೇ ಶ್ರೀಕೃಷ್ಣ ಕೃಷ್ಣೇತಿ ಜಪೇತ್ ಸದೈವ ॥**

- **ಗುಹ್ಯಪಾಪ ಪರಿಹಾರ :**

ಶ್ರೀ ತುಲಸಿಯನ್ನು ವಿಧಿವತ್ತಾಗಿ ಸಂಗ್ರಹಿಸಿ, ಕೇಶವನ ಶಿರಸ್ಸಿನಲ್ಲಿ ಭಕ್ತಿಯಿಂದ ಅರ್ಪಿಸಿದವನು, ಬೇರೆಯವರ ಮುಂದೆ ಬಹಿರಂಗವಾಗಿ ಹೇಳಲಾಗದ, ಗುಪ್ತವಾಗಿ ಮಾಡಿರುವ ಪಾಪಗಳೆಲ್ಲವೂ ಪರಿಹಾರವಾಗುತ್ತವೆ.

**ಗುಹ್ಯಾನಿ ಯಾನಿ ಪಾಪಾನಿ ಹ್ಯನಾಖ್ಯೇಯಾನಿ ಮಾನವೈಃ ।**
**ನಾಶಯೇತ್ ತುಲಸೀ ಭಕ್ತ್ಯಾ ದತ್ತಾ ಕೇಶವಮೂರ್ಧನಿ ॥**

– ಪದ್ಮಪುರಾಣ

ತುಲಸಿಯಿಂದ ಅರ್ಚಿಸಿದವನೇ ಧನ್ಯನು. ಕೋಟಿ ಸಂಖ್ಯಾಕಗಳಾದ ಸುವರ್ಣ ನಿರ್ಮಿತ ಪುಷ್ಪಗಳನ್ನು ಭಗವಂತನಿಗೆ ಅರ್ಪಿಸಿದ ಫಲವು ತುಲಸಿದಲ ಅರ್ಚನೆಯಿಂದ ಲಭಿಸುತ್ತದೆ.

**ಪುಷ್ಪೈಃ ದ್ವಾದಶ ಲಕ್ಷಂ ತು ಸುವರ್ಣೈಃ ಕೋಪರುಚ್ಯತೇ ।**
**ತತ್ಫಲಂ ಸಮವಾಪ್ನೋತಿ ತುಲಸ್ಯಾಸ್ತು ದಲೇನ ವಾ ॥** – ಶತಾನಂದಂ

**ಮಣಿಕಾಂಚಪುಷ್ಪಾಣಿ ತಥಾ ಮುಕ್ತಾ ಮಯಾನಿಚ ।**
**ತುಲಸೀಪತ್ರದಾನಸ್ಯ ಕಲಾಂ ನಾರ್ಹಂತಿ ಷೋಡಶೀಂ ॥**

– ವಿಷ್ಣುಧರ್ಮೋತ್ತರ

- **ದ್ವಾದಶಿಯಂದು ತುಲಸಿಯನ್ನು ಬಿಡಿಸಲೇಬಾರದು :**

ನಿಷಿದ್ಧ ದಿವಸಗಳಲ್ಲಿ, ವಾರ, ತಿಥಿಗಳಲ್ಲಿ, ತುಲಸಿದಳವನ್ನು ತೆಗೆಯಬಾರದು ಎಂಬ ನಿಯಮವಾದರೂ ಬ್ರಾಹ್ಮಣರನ್ನು ಬಿಟ್ಟು ಉಳಿದವರಿಗೆ ಮಾತ್ರ ಅನ್ವಯವಾಗುತ್ತದೆ. ವೈಷ್ಣವರು ನಿಷಿದ್ಧಾದಿ ದಿನಗಳಲ್ಲಿ ಪೂಜೆಗೆ ಬೇಕಾಗುವಷ್ಟು ಮಾತ್ರ ಸಂಗ್ರಹಿಸಿದರೆ ದೋಷವಿಲ್ಲ. ಆದರೆ ವೈಷ್ಣವರೂ ದ್ವಾದಶಿಯಂದು ತುಲಸಿಯನ್ನು ಕಿತ್ತಲೇಬಾರದು.

**ನಿಷಿದ್ಧತಿಥಿವಾರೇಷು ತುಲಸ್ಯಾಹರಣಂ ಮುನೇ ।**
**ವೈಷ್ಣವಾನಾಂ ನ ದೋಷಾಯ ವಿಷ್ಣೋಃ ಪ್ರೀತಿಕರತ್ವತಃ ॥** –ವಿಷ್ಣುರಹಸ್ಯ

**ಕ್ವಚಿನ್ನ ತುಲಸೀಂ ಛಿಂದ್ಯಾತ್ ದ್ವಾದಶ್ಯಾಮೇವ ವೈಷ್ಣವ ॥**

–ಗರುಡಪುರಾಣ

**ಸಂಕ್ರಾತ್ಯಾದಿ ನಿಷೇಧಸ್ತು ಪರೇಷಾಂ ಪರಿಕೀರ್ತಿತಂ ।**

- **ದ್ವಾದಶಿಯಂದು ಬ್ರಹ್ಮಾದಿಗಳಿಂದ ತುಲಸೀಪೂಜೆ :**

ಏಕೆಂದರೆ, ದ್ವಾದಶಿಯಲ್ಲಿ ಬ್ರಹ್ಮಾದಿಗಳೂ ತುಲಸೀ ಪೂಜೆಯನ್ನು ಮಾಡುವರು.

**ಪಕ್ಷೇ ಪಕ್ಷೇ ಚ ಸಂಪ್ರಾಪ್ತೇ ದ್ವಾದಶ್ಯಾಂ ವೈಶ್ಯಸತ್ತಮ ।**
**ಬ್ರಹ್ಮಾದಯೋಽಪಿ ಕುರ್ವಂತಿ ತುಲಸೀವನ ಪೂಜನಮ್ ॥**

- **ಯತಿಗಳು ತುಲಸೀಯನ್ನು ಬಿಡಿಸಬಾರದು :**

ವೈಷ್ಣವನು ಭಗವಂತನ ಪೂಜೆಗಾಗಿ ತುಲಸಿಯನ್ನು, ಪುಷ್ಪಗಳನ್ನು

ಸಂಗ್ರಹಿಸಬಹುದು. ಆದರೆ ಯತಿಗಳು ಎಂದೂ ಪೂಜೆಗಾಗಿ ತುಲಸಿಯನ್ನು ಬಿಡಿಸಬಾರದು. ಯತಿಗಳು ತುಲಸಿಯನ್ನು ಬಿಡಿಸುತ್ತಿರುವುದನ್ನು ನೋಡಿದರೆ ನೋಡಿದವನು ಸಚೇಲ ಸ್ನಾನವನ್ನು ಮಾಡಬೇಕು.

**ಛೇದನೇ ಭೇದನೇ ಪಾಕೇ ಯತಿರ್ಯತ್ರ ಪ್ರವರ್ತತೇ ।**
**ತಾದೃಶಂ ಕಶ್ಮಲಂ ದೃಷ್ಟ್ವಾ ಸವಾಸಾ ಜಲಮಾವಿಶೇತ್ ॥**

- **ಬಟ್ಟೆಯಲ್ಲಿ ತುಲಸಿಯನ್ನು ತರಬಾರದು :**

ಪಾತ್ರೆಯಲ್ಲಿಯೇ ತುಲಸಿಯನ್ನು ಸಂಗ್ರಹಿಸಬೇಕು. ಬಟ್ಟೆಯ ತುದಿ, ಹರಳುಗಿಡದ ಎಲೆ, ಕುಂಬಳದೆಲೆ, ಅರ್ಕಪತ್ರಗಳು ಇವುಗಳಲ್ಲಿ ತರಬಾರದು. ಯುವತಿ, ಶೂದ್ರರಿಂದ ತಂದ ತುಲಸಿಯು ಪೂಜೆಗೆ ಅಯೋಗ್ಯವೆನಿಸಿದೆ.

- **ಶ್ರೀಕೃಷ್ಣ ತುಲಸಿಯಿಂದಲೂ ಪೂಜಿಸಬಹುದು :**

**ಸಿತಾ ವಾಽಪ್ಯಸಿತಾ ವಾಽಪಿ ತುಲಸೀ ವಿಷ್ಣುವಲ್ಲಭಾ ।**
**ತುಲಸೀಂ ಕೃಷ್ಣನಾಮ್ನೀ ತಾಂ ಯೋಽರ್ಪಯೇಚ್ಚ ಜನಾರ್ಧನಂ ।**
**ನರೋ ಯಾತಿ ತನುಂ ತ್ಯಕ್ತ್ವಾ ತದ್ವಿಷ್ಣೋಃ ಪರಮಂ ಪದಮ್ ॥**

– ಕೃಷ್ಣಾಚಾರ್ಯಸ್ಮೃತಿ

ಹೀಗೆ ತುಲಸೀ ಹಾಗೂ ಪುಷ್ಪಾದಿಗಳಿಂದ ಅರ್ಚಿಸಿದರೆ ಭಗವಂತನು ಅತ್ಯಂತವಾಗಿ ಪ್ರೀತನಾಗುವನು.

- **ಇತರ ನಿಯಮಗಳು :**

1. ತನಗೆ ಅಸಾಧ್ಯವಾದಾಗ ಸ್ನಾನ ಮಾಡಿರುವ ಶಿಷ್ಯಾದಿಗಳಿಂದ ಕೀಳಿಸಬಹುದು.
2. ಸ್ನಾನ ಮಾಡಿ ತುಲಸಿ ಕಿತ್ತಿದ ಮೇಲೆ ಪುನಃ ಸ್ನಾನವಿಲ್ಲದೆ ಪೂಜೆ ಮಾಡಬಾರದು.

3. ಹಣ ಕೊಟ್ಟು ತಂದ ತುಲಸಿಯಿಂದ ಪೂಜೆ ನಿಷಿದ್ಧ.
4. ಕೀಳುವಾಗ ಪೂರ್ವೋತ್ತರಮುಖವಾಗಿ ಕೀಳಬೇಕು.
5. ಅಭ್ಯಂಜನ ಮಾಡಿ, ಹೊಸಬಟ್ಟೆ ಉಟ್ಟು ತುಲಸೀ ಕೀಳಬಾರದು.
6. ತುಲಸೀದಲ ಸಂಪರ್ಕದಿಂದ ಅನ್ನವು ನಿರ್ವಿಷವಾಗುವುದು.

**ತುಲಸೀದಳ ಸಂಪರ್ಕಾತ್ ಅನ್ನಂ ಭವತಿ ನಿರ್ವಿಷಮ್ ।**

7. ಸ್ತ್ರೀಯರು ತುಲಸಿಯನ್ನು ಕಿತ್ತಬಾರದು. ಮುಟ್ಟಿದರೆ ದೋಷವಿಲ್ಲ.
8. ಪ್ರತಿದಿನವೂ ಹದಿನೆಂಟು ದಳಕ್ಕೆ ಕಡಿಮೆ ಇಲ್ಲದಂತೆ ಸ್ವೀಕರಿಸಬೇಕು. ಏಕಾದಶೀ ತುಲಸೀ ಭಕ್ಷಣೆ ನಿಷಿದ್ಧ.
9. ವಿಷಪರಿಹಾರಕ್ಕಾಗಿ ತುಲಸೀಮಣಿ ಧರಿಸಬೇಕು. ಕಿವಿಗಳಲ್ಲೂ ಕಾಂತಿಗಾಗಿ ಧರಿಸುವುದು.

**ತುಲಸೀಕಾಷ್ಠ ಸಂಭೂತಾಂ ಮಾಲಾಂ ಕಂಠೇ ವಿಧಾರಯೇತ್ ।**
**ಸ್ಪರ್ಶಮಾತ್ರೇಣ ಸಾ ಮಾಲಾ ಹೃದ್ಯಾ ಸರ್ವವಿಷಾಪಹಾ ॥**
**ಕರ್ಣಯೋಃ ತುಲಸೀಪತ್ರ ಧಾರಣಂ ಕಾಂತಿಕಾರಣಂ ॥**

10. ತುಲಸೀ ಸಹಿತವಾಗಿಯೇ ತೀರ್ಥವನ್ನು ಸ್ವೀಕರಿಸಬೇಕು. ಜಯಾದೇವಿ, ಮಾಯಾದೇವಿ, ಲಕ್ಷ್ಮೀದೇವಿಯು ತೀರ್ಥದ ಮೂರು ದಳಗಳಲ್ಲಿರುವರು.

**ತುಲಸೀ ಸಹಿತಂ ತೀರ್ಥಂ ಪಿಬೇದ್ ನೋಚೇದ್ ನರ್ಥಕೃತ್ ।**
**ಜಯಾ ಮಯಾ ಚ ಲಕ್ಷ್ಮೀಶ್ಚ ದಲೇಷು ತ್ರಿಷು ಸಂಸ್ಥಿತಾಃ ॥**

11. ಕಿವಿಯಲ್ಲಿ ನಾಲ್ಕುದಳ, ತಿನ್ನಲು ಒಂದು, ನಾಭಿಯಲ್ಲಿ ಒಂದು, ಶಿರಸ್ಸಿನಲ್ಲಿ ಒಂದು, ತೀರ್ಥದಲ್ಲಿ ಮೂರು, ಪ್ರಾಣಹುತಿ ಕಾಲದಲ್ಲಿ ಐದು, ಭೋಜನಾನಂತರ ಮೂರು ದಳ ಹೀಗೆ ಒಟ್ಟು 18. ಈ ನಿಯಮ ಸ್ತ್ರೀಯರಿಗೆ ಇಲ್ಲ.

**ಚತುಃಕರ್ಣೇ ಮುಖೇ ಚೈಕಂ ನಾಭೇವೇಕಂ ತಥೈವ ಚ ।**
**ಶಿರಸ್ಯೇಕಂ ತಥಾ ಪ್ರೋಕ್ತಂ ತೀರ್ಥೇತ್ರಯಮುದಾಹೃತಂ ।**
**ಅನ್ನೋಪರಿ ತಥಾ ಪಂಚ ಭೋಜನಾಂತೇ ದಲತ್ರಯಂ ॥**

## 20.ಧೂಪದ ಬಗ್ಗೆ ವಿವರಣೆ :

ಧೂಪ ಶಬ್ದವು "ಧೂಪ-ಸಂತಾಪೇ" ಎಂಬ ಧಾತುವಿನಿಂದ ನಿಷ್ಪನ್ನವಾಗಿದ್ದು ಸಮಸ್ತ ರೋಗಾದಿ ದೋಷಗಳನ್ನು ಪರಿಹಾರ ಮಾಡುವ ಸಾಧನ ಎಂಬ ಅರ್ಥವನ್ನು ಹೊಂದಿದೆ (ಧೂಪಯತೀತಿ ಧೂಪಃ).

**ಧೂತಾಶೇಷಮಹಾದೋಷಾಪೂತಿಗಂಧ ಪ್ರಭಾವತಃ ।**
**ಪರಮಾನಂದ ಜನನಾತ್ ಧೂಪ ಇತ್ಯಭಿಧೀಯತೇ ॥**

- **ಧೂಪಗಳಲ್ಲಿ ವಿಧಗಳು :**

ಧೂಪವು ಪಂಚಾಂಗ ಧೂಪ, ಅಷ್ಟಾಂಗ ಧೂಪ, ದಶಾಂಗ, ದ್ವಾದಶಾಂಗ ಧೂಪ ಷೋಡಶಾಂಗ ಧೂಪವೆಂದು ಪಂಚ ಪ್ರಕಾರಗಳಿವೆ.

ಪಂಚಾಂಗ ಧೂಪ – ಸಾಂಬ್ರಾಣಿ, ಅಗರು, ಚಂದನ, ಕರ್ಪೂರ, ಕುಂಕುಮ.

ಅಷ್ಟಾಂಗ ಧೂಪ – ಸಾಂಬ್ರಾಣಿ, ಅಗರು, ಚಂದನ, ಕರ್ಪೂರ, ಕುಂಕುಮ, ಕುಷ್ಟ, ಬಾಲಕ, ತೇಜಪತ್ರ

ದಶಾಂಗ ಧೂಪ – ಸಾಂಬ್ರಾಣಿ, ಅಗರು, ಚಂದನ, ಕರ್ಪೂರ, ಕುಂಕುಮ, ಕುಷ್ಟ, ಬಾಲಕ, ತೇಜಪತ್ರ, ಜಾಕಾಯಿ, ಉಶೀರ

**ಕರ್ಪೂರಂ ಕುಷ್ಠಮಗರು ಗುಗ್ಗುಲುರ್ಮಲಯೋದ್ಭವಂ ।**
**ಕೇಸರಂ ಬಾಲಕಂ ಪತ್ರಂ ತ್ವಗ್ ಜಾತೀಕೋಶಮುತ್ತಮಮ್ ॥**
**ಸರ್ವಮೇತದ್ ಘೃತಾಭ್ಯಕ್ತಂ ದಶಾಂಗೋ ಧೂಪ ಈರಿತಃ ॥**

- **ದ್ವಾದಶಾಂಗ ಧೂಪ :**

**ಗುಗ್ಗುಲಃ ಚಂದನಂ ಪತ್ರಂ ಕುಷ್ಟಂ ಚಾಗರು ಕುಂಕುಮಂ ।**
**ಜಾತೀಕೋಶಂ ಚ ಕರ್ಪೂರಂ ಜಟಾಮಾಂಸೀ ಚ ಬಾಲಕಮ್ ।**
**ತ್ವಗ್ ಉಶೀರಂ ಚ ಧೂಪೋಽಸೌ ದ್ವಾದಶಾಂಗ ಪ್ರಕೀರ್ತಿತಃ ॥**

- **ಧೂಪದ ಅವಶ್ಯಕತೆ :**

ಧೂಪವನ್ನು ಹಾಕದೇ, ದೀಪವನ್ನು ಬೆಳಗದೆ ಮಾಡುವ ಪೂಜೆಯು ವ್ಯರ್ಥ ಹಾಗೂ ಧೂಪರಹಿತವಾದ ಪೂಜೆಯು ಸಂಪತ್ತನ್ನು ನಾಶ ಮಾಡಿದರೆ, ದೀಪವಿಲ್ಲದ ಪೂಜೆಯು ಬುದ್ಧಿಭ್ರಮಣೆಗೆ ಕಾರಣವಾಗುತ್ತದೆ. ಆದ್ದರಿಂದ ಧೂಪ–ದೀಪವಿರಲೇಬೇಕು.

**ಧೂಪಹೀನೇ ಶ್ರಿಯಂ ಹಂತಿ, ದೀಪಹೀನೇ ಮತಿಭ್ರಮಃ ॥**

- **ಧೂಪದಲ್ಲಿರಬೇಕಾದ ವಸ್ತುಗಳ ಪ್ರಮಾಣ :**

ಗಂಧವು – ಹತ್ತುಭಾಗ, ಸಾಂಬ್ರಾಣಿಯು – ಒಂಭತ್ತು ಭಾಗ, ಜಾಕಾಯಿ, ಶ್ರೀಫಲ, ದೇವದಾರು ತೊಗಟೆ – ಎಂಟು ಭಾಗ, ಕೋಷ್ಠವು – ಆರು ಭಾಗ, ಪಚ್ಚಕರ್ಪೂರ – ಮೂರು ಭಾಗ, ಕೃಷ್ಣಾಗರು – ಮೂರು ಭಾಗ.

ಈ ಪ್ರಮಾಣದಲ್ಲಿ ಗಂಧಾದಿಗಳನ್ನು ಸೇರಿಸಿ ಸ್ವತಃ ಪೂಜಕನೇ ತಯಾರಿಸಿ, ತುಪ್ಪವನ್ನು ಸೇರಿಸಿ ದಶಾಂಗವನ್ನು ತಯಾರಿಸಬೇಕು.

**ಗವಾಜ್ಯೇನ ತು ಸಂಯೋಜ್ಯ ತಥಾ ಧೂಪಂ ಪ್ರವಾಸಿತಮ್ ॥**

- **ಧೂಪದಲ್ಲಿರಬೇಕಾದ ವಸ್ತುಗಳ ಹೆಸರು ಹಾಗೂ ಅರ್ಥ :**

**ಖದಿರ** = ಕಾಚು, **ದೇವದಾರು** = ದೇವದಾರು, **ನಾಗಕೇಸರ** = ಮೊಗ್ಗಿ, **ಜಾತಿಫಲ** = ಜಾಕಾಯಿ, **ಕಂಕೋಷ್ಠ** = ಕೊಳಂಜನ, **ಚಂಗಲ್‌ಕೋಷ್ಠ, ಶ್ರೀಕಂಠ** = ಚಂದನ, **ವಿಷ್ಣುಪರ್ಣಿ** = ಶ್ರೀತುಲಸಿ, **ಲಾವಂಚ** = ಬಾಳದಬೇರು, **ದೇವಧೂಪ** = ಲೋಬಾನ, **ಮಂಜಿಷ್ಠ** = ಮಂಜಿಷ್ಠ, **ಕರ್ಚೂರ** = ಕಚೋರ, **ಶಮ್ಯಾಕ** = ಕಕ್ಕೆ, **ಗ್ರಂಥಿರೋಚನಂ** =

ಗೋರೋಚನ, ಮಾಂಸಿ = ಜಟಾಮಾಂಸಿ, ತುಲಸೀಕಾಷ್ಠಂ, ಬಿಲ್ವಚಕ್ಕೆ = ತುಲಸೀಕಾಷ್ಠ, ಕರ್ಪೂರ = ಪಚ್ಚಕರ್ಪೂರ, ಗುಗ್ಗುಲ = ಸಾಂಬ್ರಾಣಿ

- **ಧೂಪಮುದ್ರೆ :**

ಧೂಪವು ಲಭ್ಯವಿಲ್ಲದಿರುವಾಗ ಧೂಪಮುದ್ರೆಯನ್ನಾದರೂ ತೋರಿಸಬೇಕು. ಅಂಗುಷ್ಠದಿಂದ ಮಧ್ಯಮ ಬೆರಳು ಹಾಗೂ ಅನಾಮಿಕ ಬೆರಳಿನ ಮಧ್ಯದ ಪರ್ವಗಳನ್ನು ಸ್ಪರ್ಶಿಸಿದರೆ ಧೂಪಮುದ್ರೆಯಾಗುವುದು.

**ಮಧ್ಯಮಾನಾಮಿಕಾಭ್ಯಾಂತು ಮದ್ಯಪರ್ವಣಿ ದೇಶಿಕಃ ।**
**ಅಂಗುಷ್ಠಾಗ್ರೇಣ ದೇವೇಶೀ ಧೃತ್ವಾ ಧೂಪಂ ನಿವೇದಯೇತ್ ॥**

- **ಧೂಪಮುದ್ರೆ–ಜ್ಞಾನಮುದ್ರೆ :**

ಅಂಗುಷ್ಠದ ತುದಿಯಿಂದ ತೋರುಬೆರಳಿನ ತುದಿಯನ್ನು ಸ್ಪರ್ಶ – ಮಾಡಿದರೂ ಧೂಪಮುದ್ರೆಯಾಗುವುದು. ಇದು ಜ್ಞಾನಮುದ್ರೆಯನ್ನು ಹೋಲುತ್ತದೆ.

**ಅಂಗುಷ್ಠಾಗ್ರೇಣ ತರ್ಜನ್ಯಾಃ ಸ್ಪೃಶೇದಗ್ರಂ ಮಹೇಶ್ವರಿ ।**

–ಧೂಪಮುದ್ರೇಯಮಾಖ್ಯಾತಾ

- **ಧೂಪಾರತಿಯನ್ನು ಮಾಡುವ ಕ್ರಮ :**

ಧೂಪದ ಆರತಿಯನ್ನು ಎತ್ತುವ ಮೊದಲು ಧೂಪಾರತಿಯನ್ನು 'ಅಸ್ತ್ರಾಯಫಟ್' ಎಂಬ ಅಸ್ತ್ರಮಂತ್ರದಿಂದ ನೀರನ್ನು ಪ್ರೋಕ್ಷಿಸಬೇಕು. ನಂತರ ಕೆಂಡವನ್ನು ಹಾಕಿ 'ನಮಃ' ಎಂದು ಪೂಜಿಸಿ, ದಶಾಂಗವನ್ನು ಹಾಕಿ, ಘಂಟಾನಾದ ಪೂರ್ವಕವಾಗಿ ಧೂಪವನ್ನು ಅರ್ಪಿಸಬೇಕು.

**ಧೂಪಭಾಜನಮಸ್ತ್ರೇಣ ಪ್ರೋಕ್ಷ್ಯಾಭ್ಯರ್ಚ್ಯ ಹೃದಂಬುನಾ ।**
**ಅಸ್ತ್ರೇಣ ಪೂಜಿತಾಂ ಘಂಟಾಂ ವಾದಯನ್ ಗುಗ್ಗುಲಂ ದಹೇತ್ ।**

- **ಘಂಟನಾದ ಕ್ರಮ :**

ಧೂಪದ ಆರತಿಯನ್ನು ಮಾಡುವಾಗ ಭಗವಂತನ ದೃಷ್ಟಿಪರ್ಯಂತ



ಘಂಟೆಯನ್ನು ಎತ್ತಿ, ಎಡಗೈಯಿಂದ ಘಂಟಾನಾದ ಮಾಡುತ್ತಾ ಬಲಗೈಯಿಂದ ಧೂಪ ಸಮರ್ಪಣೆ ಮಾಡುತ್ತಾ ಭಗವಂತನನ್ನು ಅರ್ಚಿಸಬೇಕು.

**ಉತ್ತಾರ್ಯ ದೃಷ್ಟಿ ಪರ್ಯಂತಂ ಘಂಟಾಂ ವಾಮದಿಶಿ ಸ್ಥಿತಾಂ।**
**ವಾದಯನ್ ವಾಮ ಹಸ್ತೇನ ದಕ್ಷಹಸ್ತೇನ ಚಾರ್ಚಯೇತ್ ॥**

– ಗೌತಮ ತಂತ್ರ

- **ಧೂಪಾರತಿಯ ಸ್ಥಳ :**

ಭಗವಂತನ ಪೂಜಾಸಾಮಾಗ್ರಿಗಳನ್ನು ಶಾಸ್ತ್ರೋಕ್ತವಾದ ಸ್ಥಳದಲ್ಲೇ ಇಟ್ಟು ಪೂಜಿಸಿದರೇ ಫಲಾಧಿಕ್ಯವು ಇರುತ್ತದೆ. ಅದರಂತೆ ಭಗವಂತನ ಮುಂದುಗಡೆ ನೇರದಲ್ಲಿ ಗಂಧ, ಪುಷ್ಪ, ಆಭರಣಗಳನ್ನು ಇಟ್ಟಿರಬೇಕು. ಗಂಧಾದಿಗಳನ್ನು ಹಿಂದೆ, ಎಡ, ಬಲಭಾಗದಲ್ಲಿ ಅರ್ಪಿಸಬೇಕು. ಧೂಪವನ್ನು ಭಗವಂತನ ಎಡಭಾಗದಲ್ಲೇ ಅರ್ಪಿಸಬೇಕು. ನೈವೇದ್ಯವನ್ನು ಭಗವಂತನ ಬಲಭಾಗದಲ್ಲೇ ಇಟ್ಟು ನಿವೇದಿಸಬೇಕು.

**ನಿವೇದಯೇತ್ ಪುರೋಭಾಗೇ ಗಂಧಂ ಪುಷ್ಪಂ ಚ ಭೂಷಣಂ।**
**ದೀಪಂ ದಕ್ಷಿಣತೋ ದದ್ಯಾತ್ ಪುರತೋ ವಾ ನ ವಾಮತಃ।**
**ವಾಮತಸ್ತು ತಥಾ ಧೂಪಮಗ್ರೇ ವಾ ನ ತು ದಕ್ಷಿಣೇ।**
**ನೈವೇದ್ಯಂ ದಕ್ಷಿಣೇ ಭಾಗೇ ಪುರತೋ ವಾ ನ ಪೃಷ್ಠತಃ॥**

- **ಧೂಪವನ್ನು ಬೀಸಣಿಗೆಯಿಂದಲೇ ಬೀಸಬೇಕು :**

ಧೂಪಕ್ಕಾಗಿ ತಂದಿರುವ ಕೆಂಡವನ್ನು ಊದುವಾಗ ಬಾಯಿ, ಕೈ, ಪಾತ್ರೆ, ತಟ್ಟೆಗಳಿಂದ ಬೀಸಿ ಉಜ್ವಲಗೊಳಿಸುವುದಿದೆ. ಆದರೆ ಬಾಯಿಯಿಂದ ಊದಿದಾಗ ಉಗುಳು ಬೀಳುವ ಸಂಭವವೇ ಹೆಚ್ಚು. ಬೀಸಣಿಗೆಯಿಂದ ಮಾತ್ರ ಬೀಸಿ ಉಜ್ವಲಗೊಳಿಸಬೇಕು. ಉಟ್ಟಿರುವ ಬಟ್ಟೆಯಿಂದಲೂ ಬೀಸಬಾರದು.

**ಧೂಪಯೇದ್ ವ್ಯಜನೇನೈವ ಧೂಪಂ ನಾಂಗೈಃ ವಿಧೂಪಯೇತ್ ।**
**ಹಸ್ತವಾತಾಹತಂ ಧೂಪಂ ವಸ್ತ್ರವಾತಾಹತಂ ತಥಾ ।**
**ಮುಖೇನ ಧಮಿತಂ ಧೂಪಂ ನ ದೇವಾಯ ಸಮರ್ಪಯೇತ್ ॥**

ಯಾರು ವಸ್ತ್ರಾದಿಗಳಿಂದ ಧೂಪಾರತಿಯ ಕೆಂಡವನ್ನು ಉಜ್ವಲಗೊಳಿಸಿ ಧೂಪಾರತಿಯನ್ನು ಅರ್ಪಿಸುವನೋ ಅವನು ಮೂರ್ಖನೆಂದು ಮಹಾಪುರಾಣವು ತಿಳಿಸಿದೆ.

**ವಸ್ತ್ರಾಽಽಸ್ಯ ಪಾಣಿಪಾತೇನ ಧೂಪಂ ಚ ವಿನಿವೇದಯತ್ ।**

- **ತುಪ್ಪವನ್ನು ಹಾಕದೆ ಧೂಪ ನಿಷಿದ್ಧ :**

ಕೆಲವರು ದಶಾಂಗವನ್ನು ಹಾಕಿ ಧೂಪವನ್ನು ಅರ್ಪಿಸುವರು, ಮತ್ತೆ ಕೆಲವರು ಕೇವಲ ಘೃತವನ್ನು ಮಾತ್ರ ಉಪಯೋಗಿಸಿ ಧೂಪವನ್ನು ಅರ್ಪಿಸುವರು. ಇವೆರಡೂ ಪದ್ಧತಿಯು ನಿಷಿದ್ಧವಾಗಿದೆ. ಧೂಪಾರತಿಗೆ ದಶಾಂಗವನ್ನು ಹಾಕಿ ಗೋಘೃತದಿಂದ ಸ್ಪರ್ಶಿಸಿ ಆ ಧೂಪವನ್ನು ಅರ್ಪಿಸಿದರೆ ಭಗವಂತನು ಸಂತೋಷಪಡುವನು.

**ಅಘೃತಂ ಗುಗ್ಗುಲಂ ಮರ್ತ್ಯೋ ಮತ್ಪುರೋ ವಿದಹೇಚ್ಚ ಯಃ ।**
**ಕೇವಲೇನ ಘೃತೇನೈವ ಧೂಪಯೇನ್ ಮಾಂ ವಿಮೂಢಧೀಃ ॥**

ಸಾಮಾನ್ಯವಾಗಿ ದಶಾಂಗಕ್ಕೆ ತುಪ್ಪವನ್ನು ಸೇರಿಸಿಯೇ ತಯಾರು ಮಾಡಿರುವರು. ಕೇವಲ ಸಾಂಬ್ರಾಣಿಯನ್ನು ಹಾಕುವಾಗ ಅದಕ್ಕೆ ತುಪ್ಪದ ಸ್ಪರ್ಶವಿರಲೇಬೇಕು ಎಂದಭಿಪ್ರಾಯ.

**ಘೃತಂ ನ ಕೇವಲಂ ದದ್ಯಾತ್ ದುಷ್ಟಂ ವಾ ತೃಣ ಗುಗ್ಗುಲಂ ।**

- **ಅರಿಷಿಣ ಪುಡಿ ನಿಷಿದ್ಧ :**

ಧೂಪಾರತಿಯ ಕಾಲದಲ್ಲಿ ದಶಾಂಗದ ಬದಲು ಅರಿಷಿಣಪುಡಿ, ಜೀರಿಗೆ ಪುಡಿ, ವೃಕ್ಷಕ್ಷೀರ, ಇವುಗಳನ್ನು ಅಥವಾ ಕೆಂಪು ಗಂಧವನ್ನಾಗಲೀ ಹಾಕಿ ಹೊಗೆ ಬರುವಂತೆ ಮಾಡುವುದಿದೆ. ಇದು ಭಗವಂತನಿಗೆ ನಿಷಿದ್ಧ ಉಗ್ರದೇವತೆಗಳಾದ ಭೈರವ, ಶಕ್ತಿ ದೇವತೆಗಳಿಗೆ ಸರಿ.



**ಹರಿದ್ರಾ ಜೀರಕಂ ವೃಕ್ಷಕ್ಷೀರಂ ಚ ಚಂದನಂ ।**
**ಮುಕುಂದ ಧೂಪೇ ದೇವರ್ಷೇ ಸರ್ವಮೇತದ್ ವಿವರ್ಜಯೇತ್ ॥**

– ಕಾಮಿಕಾಗಮ

- **ಯಕ್ಷ ಧೂಪವು ನಿಷಿದ್ಧ :**

ಕಪ್ಪು ಬಣ್ಣದ ಅಗರು, ಕರ್ಪೂರ ಇವೆರಡನ್ನೂ ಸೇರಿಸಿ ತಯಾರಾದ ಧೂಪವನ್ನು "ಯಕ್ಷರೂಪ" ಎಂದು ಹೆಸರಿಸಿದೆ. ಇದು ದುರ್ಗಾದೇವಿಗೆ ಪ್ರಿಯವೇ ಹೊರತು ವಿಷ್ಣುವಿಗೆ ಪ್ರಿಯವಲ್ಲವಾದ್ದರಿಂದ ದಶಾಂಗದಿಂದಲೇ ಧೂಪಿಸಬೇಕು.

**ಯಕ್ಷಧೂಪೇನ ವಾ ದೇವೀಂ ಮಹಾಮಾಯಂ ಪ್ರಪೂಜಯೇತ್ ।**
**ನ ಯಕ್ಷಧೂಪಂ ವಿತರೇತ್ ಮಾಧವಾಯ ಕದಾಚನ ॥**

– ಕಪಿಂಜಲ ಸಂಹಿತೆ

- **ಊದಿನಕಡ್ಡಿಯಿಂದ ಧೂಪ ನಿಷಿದ್ಧ :**

ಈಗಿನ ಸುವಾಸಿತ ಊದಿನ ಕಡ್ಡಿಗಳಲ್ಲಿ ಪ್ರಾಣಿಗಳ ಮೇದಸ್ಸು, ಮಜ್ಜೆ ಮುಂತಾದ ಅಶುದ್ಧ ವಸ್ತುಗಳನ್ನು ಸೇರಿಸಿ ತಯಾರಿಸುತ್ತಾರೆ. ಆದ್ದರಿಂದ ಅದರ ಧೂಪವು ನಿಷಿದ್ಧವಾಗಿದೆ. ಬೇರೆಯವರ ಧೂಪ, ಕಳ್ಳತನ ಮಾಡಿದ ಧೂಪಗಳಿಂದ ಧೂಪಿಸಬಾರದು.

**ಮೇದೋಮಜ್ಜಾಸಮಾಯುಕ್ತಾನ್ ನ ಧೂಪಾನ್ ವಿನಿವೇದಯೇತ್ ।**
**ಪರಕೀಯನ್ ತಥಾऽऽಭ್ರಾತಾನ್ ಸ್ತೇನಿಕೃತ್ಯಾಭಿಮರ್ದಿತಾನ್ ॥**

- **ಘಂಟಾನಾದವಿಲ್ಲದೆ ಧೂಪಾರ್ಪಣೆ ನಿಷಿದ್ಧ :**

**ಘಂಟಾನಾದಂ ವಿನಾ ಧೂಪಂ ನ ವಿದ್ವಾನ್ ದಾತುಮರ್ಹತಿ ।**
**ಸ್ನಾನೇ ಧೂಪೇ ತಥಾ ದೀಪೇ ನೈವೇದ್ಯೇ ಶಯನೇತಥಾ ।**
**ಬೋದನೇ ಭೂಷಣೇ ಚೈವ ಕುರ್ಯಾದ್ ಘೋಷಂ ಸದಾ ನರಃ ॥**

– ಕಪಿಂಜಲ ಸಂಹಿತೆ

- **ಧೂಪಕಾಲದ ಮಂತ್ರ :**

ಧೂಪಕಾಲದಲ್ಲಿ ಶಿಷ್ಟಾಚಾರ ಪ್ರಾಪ್ತವಾದ ಭಾಗವತದ ಶ್ಲೋಕಗಳನ್ನು ಪಠಿಸಬೇಕು.

**ಧ್ಯೇಯಂ ಸದಾ ಪರಿಭವಘ್ನಭೀಷ್ಟದೋಹಂ**
**ತೀರ್ಥಾಸ್ಪದಂ ಶಿವ ವಿರಂಚಿನತಂ ಶರಣ್ಯಂ ।**
**ಭೃತ್ಯಾರ್ತಿಹಂ ಪ್ರಣತಭಕ್ತಭವಾಬ್ಧಿಪೋತಂ**
**ವಂದಾಮಹೇ ಪುರುಷ ತೇ ಚರಣಾರವಿಂದಂ ॥** –ಭಾಗವತ 11/5/33

ಭಕ್ತರ ದುಃಖ ಪರಿಹರಿಸಿ, ಇಷ್ಟಾರ್ಥ ನೀಡುವ ಸಮಸ್ತ ತೀರ್ಥಗಳಿಗೂ ಆಸ್ಪದನಾದ, ಬ್ರಹ್ಮರುದ್ರಾದಿಗಳಿಂದಲೂ ವಂದ್ಯನಾದ, ಭೃತ್ಯರ ತಾಪತ್ರಯ ಪರಿಹರಿಸುವ, ಪ್ರಣತರಾದ ಭಕ್ತರ ಸಂಸಾರ ಸಾಗರವನ್ನು ದಾಟಿಸುವ ದೋಣಿಯಂತಿರುವ, ಪರಮ ಪುರುಷನಾದ ಶ್ರೀಹರಿಯ ಚರಣವನ್ನು ವಂದಿಸಬೇಕು.

- **ಧೂಪಕಾಲದಲ್ಲಿ ಭಗವನ್ಮೂರ್ತಿದರ್ಶನ :**

ಧೂಪವನ್ನೆತ್ತುವಾಗ ಭಗವಂತನ ಧೂಪವಾಸಿತವಾದ ಧೂಮ್ರ ಮುಖವನ್ನು ದರ್ಶನ ಮಾಡಿದರೆ ಅನಂತ ಪುಣ್ಯವು ಲಭಿಸುತ್ತದೆ.

**ಧೂಪಕಾಲೇ ಹರೇರ್ವಕ್ತ್ರಂ ಧೂಪಧೂಮ್ರಂ ಮನೋಹರಂ ।**
**ಚಾರುಹಾಸಂ ಪ್ರಪಶ್ಯಂತಿ ತೇಷಾಂ ಪುಣ್ಯಮನಂತಕಂ ॥**

– ಸ್ಕಂದಾಪುರಾಣ

- **ಪೂಜಕನಿಗೆ ಧೂಪದ ವಾಸನೆ ದೋಷಾದಾಯಕವಲ್ಲ :**

ಧೂಪವನ್ನು ಹಾಕುವಾಗ ಪೂಜಕನೇ ಮೊದಲು ಧೂಪದ ವಾಸನೆಯನ್ನು ಸ್ವೀಕರಿಸಿದಂತಾಗಿ ಉಚ್ಛಿಷ್ಟವನ್ನು ಭಗವಂತನಿಗೆ ಅರ್ಪಿಸಿದ ದೋಷವು ಬರುವುದೆಂದು ಸಂಶಯಪಡಬಾರದು. ಏಕೆಂದರೆ ಧೂಪವನ್ನು ತೋರಿಸುವಾಗ ಪೂಜಕನಿಗೆ ವಾಸನೆ ಬರದೇ ಇರಲು ಸಾಧ್ಯವೇ ಇಲ್ಲ. ತಾನೇ ಬುದ್ಧಿಪೂರ್ವಕವಾಗಿ ಮೂಸಿ ನೋಡಿ



ಅರ್ಪಿಸಿದರೆ ಮಾತ್ರ ದೋಷ. ಇದು ಅವರ್ಜನೀಯವೆನಿಸಿದೆ. ಇದೇ ರೀತಿ ದೀಪದ ಪ್ರಭೆಯೂ, ಗಂಧಂ, ಪುಷ್ಪಗಳ ವಾಸನೆ, ನದಿ ನೀರು ಇತ್ಯಾದಿಗಳಿಗೆ ಉಚ್ಛಿಷ್ಟವಾದ ದೋಷವಿರುವುದಿಲ್ಲ.

**ಪೂಜಾಕಾಲೇ ತು ಧೂಪಾನಾಂ ಗಂಧಃ ಪುಷ್ಪಾದಿಕಸ್ಯ ಚ।**
**ದೀಪಪ್ರಭಾ ನದೀನಾಂ ಚ ನಿರ್ಮಾಲ್ಯಂ ದೋಷಕೃನ್ ನ ಹಿ ॥**

- **ಧೂಪದ ಅವರ್ಜನೀಯತೆ :**

ಜಲವಿಲ್ಲದ ಪೂಜೆಯು ದುರ್ಭಿಕ್ಷಕ್ಕೆ ಕಾರಣವಾಗುತ್ತದೆ. ಗಂಧರಹಿತ ಪೂಜೆಯು ದೌರ್ಭಾಗ್ಯವನ್ನುಂಟು ಮಾಡುತ್ತದೆ. ಧೂಪರಹಿತ ಪೂಜೆಯಾದರೂ ಮನೋವ್ಯಾಕುಲತೆಯನ್ನು ನೀಡುತ್ತದೆ. ವಸ್ತ್ರರಹಿತ ಪೂಜೆಯಾದರೂ ಧನನಾಶವನ್ನು ಮಾಡುತ್ತದೆ.

**ಜಲಹೀನೆ ತು ದುರ್ಭಿಕ್ಷಂ ಗಂಧಹೀನೇ ತ್ವಭಾಗ್ಯತಾಂ।**
**ಧೂಪಹೀನೇ ತಥೋದ್ವೇಗಂ ವಸ್ತ್ರಹೀನೇ ಧನಕ್ಷಯಂ॥**

- **ಧೂಪವನ್ನು ನೆಲದ ಮೇಲೆ ಇಟ್ಟು ಅರ್ಪಿಸಬಾರದು :**

ದೇವರ ಮುಂದೆ ನೆಲದ ಮೇಲೆ ಕೆಂಡವನ್ನಿಟ್ಟು ದಶಾಂಗವನ್ನು ಹಾಕಿ ಧೂಪವನ್ನು ಅರ್ಪಿಸಬಾರದು. ಅದೇ ರೀತಿ ಮಣ್ಣಿನ ಪಾತ್ರೆ ಶರಾವ ಮುಂತಾದವುಗಳಲ್ಲಿ ಧೂಪವನ್ನು ಹಾಕಿ ಭಗವಂತನಿಗೆ ಅರ್ಪಿಸಬಾರದು.

**ನ ಭೂಮೌ ವಿತರೇತ್ ಧೂಪಂ ನಾಸನೇ ನ ಘಟೇ ತಥಾ।**
**ಯಥಾತಥಾಧಾರಗತಂ ಕೃತ್ವಾ ತದ್ವಿನಿವೇದಯೇತ್ ॥**

- **ಧೂಪದ ಕ್ರಮ :**

ಧೂಪಮುದ್ರೆಯನ್ನು ಪ್ರದರ್ಶಿಸಿ **"ಧೂಪಂ ಸಮರ್ಪಯಾಮಿ"** ಎಂದು ಹೇಳಿ ಪಾತ್ರೆಯಲ್ಲಿ ಶಂಖದಿಂದ ನೀರನ್ನು ಬಿಡಬೇಕು. ಭಗವಂತನಿಗೆ ಪುಷ್ಪವನ್ನು ಅರ್ಪಿಸಿ, ಧೂಪಾರತಿಯನ್ನು ಭಗವಂತನ ನಾಸಿಕದ ಹತ್ತಿರ ಮೂರು ಬಾರಿ ಓಂ ನಮೋ **ನಾರಾಯಣಾಯ** ಓಂ ಎಂದು ಹೇಳುತ್ತಾ

ಘಂಟಾನಾದ ಪೂರ್ವಕವಾಗಿ ಧೂಪವನ್ನು ಆರತಿ ಮಾಡಬೇಕು. ಅನಂತರ ಅದನ್ನು ದೇವರ ಎಡಭಾಗದಲ್ಲಿಟ್ಟು ಕೈಯನ್ನು ತೊಳೆಯಬೇಕು.

- **ನೈವೇದ್ಯವಿಲ್ಲದಿದ್ದರೆ ಧೂಪ ದೀಪವಿಲ್ಲ :**

ನೈವೇದ್ಯವನ್ನು ಭಕ್ತನು ಭಗವಂತನಿಗೆ ಅರ್ಪಿಸಲೇಬೇಕು. ನೈವೇದ್ಯವಿಲ್ಲದೆ ಧೂಪ-ದೀಪಗಳನ್ನು ಅರ್ಪಿಸಬಾರದು.

**ನೈವೇದ್ಯಂ ನಾಸ್ತಿ ಚೇದ್ ಧೂಪ ದೀಪೌ ನೈವ ಪ್ರದರ್ಶಯೇತ್ ॥**

– ವಿಷ್ಣುತೀರ್ಥೀಯ

**ಧೂಪಾಗ್ನಿ ಲಕ್ಷಣ :**

ಹೊಗೆ ಇಲ್ಲದ ಝುಗಝುಗಿಸುವ, ಜ್ವಾಲೆಯಿಲ್ಲದ ಕಟ್ಟಿಗೆಯ ಶೇಷರಹಿತವಾದ ಕೆಂಡದಿಂದ ಧೂಪ ಆರತಿ ಮಾಡಬೇಕು.

**ನಿರ್ಧೂರಮಸ್ಫುರದಂಗಾರೇ ನಿರ್ಜ್ವಾಲೇ ಚ ನಿರಿಂಧನೇ ॥**

**21. ದೀಪದ ಬಗ್ಗೆ ವಿವರಣೆ :**

ಘೃತದಿಂದಾಗಲಿ, ತೈಲದಿಂದಾಗಲಿ ದೀಪವನ್ನು ಬೆಳಗಿಸುವವನು ಸಮಸ್ತ ಅಜ್ಞಾನಾದಿ ದೋಷಗಳನ್ನು ಪರಿಹರಿಸಿಕೊಳ್ಳುವನು. ಒಂದು ನಿಮಿಷ ಅಥವಾ ನಿಮಿಷಾರ್ಧವಾಗಲಿ ತುಪ್ಪದಿಂದ ದೀಪವನ್ನು ಬೆಳಗಿದರೇ ವಿಷ್ಣುವು ಪ್ರಸನ್ನನಾಗುವನು. ಒಂದು ದೀಪವನ್ನು ದೇವರ ಮುಂದೆ ಬೆಳಗಿದವನಿಗೆ ರಾಜ್ಯ ಪ್ರಾಪ್ತಿಯು ಖಂಡಿತಾ ಆಗುವುದು.

**ಘೃತೇನ ವಾಽಥ ತೈಲೇನ ದೀಪಂ ಯೋ ಜ್ವಾಲಯೇನ್ನರಃ ।**
**ನಿಮಿಷಂ ನಿಮಿಷಾರ್ಧಂ ವಾ ಘೃತಂ ದೀಪ ನಿವೇದಯೇತ್ ॥**

**ಭವೇದೇಕಸ್ಯ ದೀಪಸ್ಯ ಭೂಮೌ ರಾಜ್ಯ ಭವೇದಿತಿ ।**
**ಅಜಾಘೃತಮಲಾಭೇ ತು ಶುದ್ಧ ತೈಲೇನ ವ ಪುನಃ ॥**

– ನೃಸಿಂಹಪುರಾಣ

- **ದೀಪದ ಎಣ್ಣೆ–ಎಳ್ಳೆಣ್ಣೆ :**

ಎಳ್ಳೆಣ್ಣೆಯೇ ಭಗವಂತನಿಗೆ ಅತಿ ಪ್ರಿಯವಾದದ್ದು – ಎಂದು ಕೆಲವರು ಅಭಿಪ್ರಾಯ. ಆದರೆ **"ಘೃತೇನ ವಾಥ ತೈಲೇನ"** ಎಂದು ತೈಲ ಸಾಮಾನ್ಯ ಪದದಿಂದ ದೀಪವನ್ನು ಬೆಳಗಿಸಲು ಪ್ರಮಾಣ ಹೇಳುತ್ತಿದೆ. ತುಪ್ಪದಿಂದ ದೀಪವನ್ನು ಹಚ್ಚುವುದು ಅತ್ಯುತ್ತಮವಾದದ್ದು. ಘೃತದ ಅಭಾವವಿದ್ದಾಗ ನಿಷಿದ್ಧವಲ್ಲದ ತೈಲದಿಂದ ದೀಪವನ್ನು ಬೆಳಗಬಹುದು. ಹುಚ್ಚೆಳ್ಳೆಣ್ಣೆ, ಪಾಮಾಯಿಲ್, ಸೂರ್ಯಕಾಂತಿ ಇತ್ಯಾದಿ ಬೀಜಗಳ ಎಣ್ಣೆ ನಿಷಿದ್ಧವಾಗಿದೆ. ಕಡ್ಲೆಕಾಯಿಯನ್ನು ಭಗವಂತನಿಗೆ ನಿವೇದಿಸಲು ಪ್ರಮಾಣವಿರುವುದರಿಂದ ಅದರ ಎಣ್ಣೆಯನ್ನು ದೀಪವನ್ನು ಹಚ್ಚಲು ಬಾಧಕವಿಲ್ಲ. ದ್ವಿದಳ ಧಾನ್ಯ ವ್ರತದಲ್ಲಿ ಕಡ್ಲೆಕಾಯಿ ಎಣ್ಣೆಯಿಂದ ಭಗವಂತನಿಗೆ ದೀಪವನ್ನು ಹಚ್ಚಬಾರದು ಎಂದು ಕೆಲವರ ಮತ. ಆದರೆ ಕಡ್ಲೆಕಾಯಿ ಎಣ್ಣೆಯನ್ನು ಉಪಯೋಗಿಸಬಾರದೆಂಬ ವಿಶೇಷ ನಿಷೇಧ ವಾಕ್ಯವನ್ನು ಹುಡುಕಬೇಕು. ಮುಖ್ಯ ಉದ್ದೇಶವಾದರೂ ಪೂಜಕನು ತನಗಾಗಿ ಘೃತವನ್ನು ಇಟ್ಟುಕೊಂಡು ಭಗವಂತನಿಗೆ ಎಣ್ಣೆಯ ದೀಪವನ್ನು ಹಚ್ಚಬಾರದೆಂದೇ ಅಂತರ್ಯ. ತುಪ್ಪದ ನಂತರ ಮುಖ್ಯ ಸ್ಥಾನ ಎಳ್ಳೆಣ್ಣೆಗೆ ಇರುತ್ತದೆ.

- **ತಿಲದ ತೈಲದಿಂದ ಆರತಿ ವಿಹಿತ :**

ಹಾರೀತ ಸ್ಮೃತಿಯಲ್ಲಿ –

**ಗವಾಜ್ಯಂ ತಿಲ ತೈಲಂ ಚ ಕುಸುಮೈಶ್ಚ ಸುವಾಸಿತಂ।**
**ಸಂಯೋಜ್ಯ ವರ್ತಿನಾ ದೀಪಂ ಭಕ್ತ್ಯಾ ವಿಷ್ಣೋ ರ್ನಿವೇದಯೇತ್ ॥**

ಹಾರೀತರ ಪ್ರಕಾರ ಏಕಾರತಿಯನ್ನು ಭಗವಂತನಿಗೆ ತೋರಿಸುವಾಗ ತುಪ್ಪ, ತಿಲ ತೈಲ ಈ ಎರಡರಿಂದ ಒದ್ದೆಯಾದ ಬತ್ತಿಯಿಂದ ದೀಪವನ್ನು ತೋರಿಸಬೇಕು. ಹಾಗೆಯೇ ಪುಷ್ಪಗಳಿಂದ ಆರತಿಯನ್ನು ಸುವಾಸನೆಯುಕ್ತವನ್ನಾಗಿ ಮಾಡಿ ಆರತಿಯನ್ನು ಎತ್ತಬೇಕು. ಹಲಗಾರತಿಯಲ್ಲಿ ಪುಷ್ಪವನ್ನು ಹಾಕಿದಾಗ ಲಕ್ಷ್ಮೀದೇವಿಯೇ ಆರತಿ ಮಾಡುವಳು ಎಂಬ ಅನುಸಂಧಾನವು ಇರಬೇಕು.

- **ಏಕಾರತಿ :**

ಏಕಾರತಿಯಲ್ಲಿ ಮೂರು ಬತ್ತಿಗಳಿರಬೇಕು. ಆ ಏಕಾರತಿಯನ್ನು ಅಪಾದಮೌಲಿ ಪರ್ಯಂತ ಪ್ರದಕ್ಷಿಣೆ ಕ್ರಮದಂತೆ ಮಾಡಿ ಭಗವಂತನಿಗೆ ತೋರಿಸಿ ಪುನಃ ನಂದಿಸಬೇಕು. ಹೀಗೆ ನಾವೇ ನಂದಿಸಿದಾಗ ಬರುವ ಹೊಗೆಯನ್ನು ದೇವತೆಗಳು ಆಘ್ರಾಣಿಸುವರು. ತಾವೇ ಆರಿ ಹೋದರೆ ಅದರ ಹೊಗೆಯನ್ನು ರಾಕ್ಷಸರು ಸ್ವೀಕರಿಸುವರು.

**ನಿರ್ವಾಪಿತಾನಾಂ ದೀಪಾನಾಂ ಧೂಪಂ ಜಿಘ್ರಂತಿ ದೇವತಾಃ ।**
**ಸ್ವಯಂ ನಿರ್ವಾಪಿತಾನಾಂ ತು ಧೂಪಂ ಜಿಘ್ರಂತಿ ರಾಕ್ಷಸಾಃ ॥**
**ತ್ರಿವರ್ತಿ ದೀಪ ನಾಶೇ ತು ಬುದ್ಧಿ ಪೂರ್ವಂ ಕೃತೇ ಸತಿ ।**
**ದೇವ ಗೃಹ್ಣಂತಿ ತಂ ದೀಪಂ ರಾಕ್ಷಸಾಧ್ಯಾಃ ತದನ್ಯಥಾ ॥**

**–ಪೂಜಾಕಲ್ಪಲತಾ**

ಏಕಾರತಿಯನ್ನು ಮೂರು ಬಾರಿ ಪ್ರದಕ್ಷಿಣಾಕಾರವಾಗಿ ಮಾಡಿದ ನಂತರ ಅರ್ಧಪ್ರದಕ್ಷಿಣೆಯಾಗಿ ಭ್ರಾಮಿಸಿ ಭಗವಂತನ ಎಡಭಾಗದಲ್ಲಿ ಸ್ಥಾಪಿಸಬೇಕು.

- **ಏಕಾರತಿಯಲ್ಲಿ ಹೇಳಬೇಕಾದ ಮಂತ್ರ :**

ದೀಪದಲ್ಲಿ ಭಗವಂತನ ಹದಿಮೂರು ರೂಪಗಳಿರುವುವು. ಏಕಾರತಿಯ ಮೂರು ಬತ್ತಿಗಳಿಗೆ ವಿಶ್ವ–ತೈಜಸ–ಪ್ರಾಜ್ಞ ರೂಪಗಳು ನಿಯಾಮಕಗಳಾಗಿವೆ.

**ತ್ರಯೋದಶ ಸ್ವರೂಪೈಸ್ತು ಜ್ಯೋತಿರ್ದೀಪಗತೋ ಹ್ಯಭೂತ್ ॥**

**– ಗುರುವೃತ್ತ**

ದೀಪವಿಲ್ಲದೆ ಪೂಜೆಯನ್ನು ಮಾಡಬಾರದು ಅಂಧನಾಗುವನು. ಕುಸುಂಬ ಹಾಗೂ ಏರಂಡ(ಹರಳೆಣ್ಣೆ)ಗಳಿಂದ ದೀಪವನ್ನು ಭಗವಂತನಿಗೆ ಹಚ್ಚಬಾರದು.

**ಕುಸುಂಬ–ಏರಂಡ ತೈಲೇನ ದೀಪಂ ಮಹ್ಯಂ ನಿವೇದಯೇತ್ ।**

**ದೋಷ ಇತಿ ಶೇಷಃ** । – ವರಾಹ ಪುರಾಣ

ಭಗವಂತನಿಗೆ ಅರ್ಪಿಸಿದ ದೀಪವನ್ನು ಬೇರೆ ಕಾರ್ಯಗಳಿಗಾಗಿ ಅನ್ಯತ್ರ ತೆಗೆದುಕೊಂಡು ಹೋಗಬಾರದು. ಅಂಧತ್ವ, ಮುಗ್ಧತ್ವ, ದೋಷ ಪೀಡಿತರಾಗುವರು.

**ಕುರ್ವೀತ ದೀಪಹರ್ತಾ ಚ ಮುಗ್ಧಾಂಧೋ ಜಾಯತೇ ಜಡಃ ।**

**ರೋಪಿತಂ ಪ್ರದೀಪಂ ಯೇ ನಯಂತ್ಯನ್ಯತ್ರ ಮಂದಿರಾತ್ ॥**

**ಅಂಧಾಸ್ತೇ ಭವಿಷ್ಯಂತಿ ಮುಗ್ಧಾ ವೈ ಜನ್ಮ ಜನ್ಮಸು ॥**

- **ಎಣ್ಣೆಗಳಲ್ಲಿ ಉತ್ತಮ, ಮಧ್ಯಮಾಧಮ :**

ಗೋಘೃತದಿಂದ ಹಚ್ಚಿದ ದೀಪ ಉತ್ತಮವಾದದ್ದು. ಎಮ್ಮೆಯ ತುಪ್ಪ ಹಾಗೂ ಅಜದ (ಆಡಿನ) ತುಪ್ಪದ ದೀಪವು ಮಧ್ಯಮ, ತಿಲತೈಲಾದಿಗಳಿಂದ ಹಚ್ಚಿದ ದೀಪವು ಕನಿಷ್ಠವಾದದ್ದು (ಕನ್ಯಸ–ಕನಿಷ್ಠ).

**ಗೋಘೃತೇನೋತ್ತಮಂ ದೀಪಂ ಮಧ್ಯಮಂ ಚಜಮಾಹಿಷ್ಯೈಃ ।**

**ತಿಲತೈಲಾದಿಭಿಃ ಸ್ನೇಹೈಃ ಕನ್ಯಸಂ ದೀಪಮುಚ್ಯತೇ** ॥ – ಪಂಚರಾತ್ರ

- **ದೀಪಗಳ ಸಂಖ್ಯೆ :**

ಒಂದರಿಂದ ನೂರೆಂಟು ದೀಪಗಳವರೆಗೂ ಅದಕ್ಕಿಂತ ಹೆಚ್ಚು ದೀಪಗಳನ್ನು ಸಂಪತ್ತಿಗೆ ಅನುಕೂಲವಾಗಿ ಭಗವಂತನಿಗೆ ಅರ್ಪಿಸಬಹುದು. ಹನ್ನೆರಡಕ್ಕೆ ಕಡಿಮೆ ಇಲ್ಲದೆ ಇಡುವುದು ಉತ್ತಮ.

**ಏಕಮಾರಭ್ಯ ದೀಪಂ ತು ಯಥಾ ವಿಭವ ವಿಸ್ತರಂ ।**

**ಕ್ರಮಾದ್ ದ್ವಾದಶಹೀನೇ ತು ದ್ವಾದಶಂ ಕನ್ಯಸಾಮಧಮಮ್ ॥**

ಹತ್ತಿಯಿಂದ ಬತ್ತಿಯನ್ನು ಮಾಡಿ ನಾಲ್ಕು ಅಂಗುಲ ಅಥವಾ ಹೂಬತ್ತಿಯಾದರೆ ಎರಡಂಗಲ ಪ್ರಮಾಣವಿರುವ ಬತ್ತಿಗೆ ಕರ್ಪೂರವನ್ನು ಲೇಪಿಸಿದರೆ ಉತ್ತಮ ದೀಪವಾಗುವುದು.

- **ಏಕಾರತಿ :**

ಏಕಾರತಿಯಲ್ಲಿ ಮೂರು ಬತ್ತಿಗಳಿರಬೇಕು. ಆ ಏಕಾರತಿಯನ್ನು ಅಪಾದಮೌಲಿ ಪರ್ಯಂತ ಪ್ರದಕ್ಷಿಣೆ ಕ್ರಮದಂತೆ ಮಾಡಿ ಭಗವಂತನಿಗೆ ತೋರಿಸಿ ಪುನಃ ನಂದಿಸಬೇಕು. ಹೀಗೆ ನಾವೇ ನಂದಿಸಿದಾಗ ಬರುವ ಹೊಗೆಯನ್ನು ದೇವತೆಗಳು ಆಘ್ರಾಣಿಸುವರು. ತಾವೇ ಆರಿ ಹೋದರೆ ಅದರ ಹೊಗೆಯನ್ನು ರಾಕ್ಷಸರು ಸ್ವೀಕರಿಸುವರು.

**ನಿರ್ವಾಪಿತಾನಾಂ ದೀಪಾನಾಂ ಧೂಪಂ ಜಿಘ್ರಂತಿ ದೇವತಾಃ ।**
**ಸ್ವಯಂ ನಿರ್ವಾಪಿತಾನಾಂ ತು ಧೂಪಂ ಜಿಘ್ರಂತಿ ರಾಕ್ಷಸಾಃ ॥**

**ತ್ರಿವರ್ತಿ ದೀಪ ನಾಶೇ ತು ಬುದ್ಧಿ ಪೂರ್ವಂ ಕೃತೇ ಸತಿ ।**
**ದೇವ ಗೃಹ್ಣಂತಿ ತಂ ದೀಪಂ ರಾಕ್ಷಸಾಧ್ಯಾಃ ತದನ್ಯಥಾ ॥**

**–ಪೂಜಾಕಲ್ಪಲತಾ**

ಏಕಾರತಿಯನ್ನು ಮೂರು ಬಾರಿ ಪ್ರದಕ್ಷಿಣಾಕಾರವಾಗಿ ಮಾಡಿದ ನಂತರ ಅರ್ಧಪ್ರದಕ್ಷಿಣೆಯಾಗಿ ಭ್ರಾಮಿಸಿ ಭಗವಂತನ ಎಡಭಾಗದಲ್ಲಿ ಸ್ಥಾಪಿಸಬೇಕು.

- **ಏಕಾರತಿಯಲ್ಲಿ ಹೇಳಬೇಕಾದ ಮಂತ್ರ :**

ದೀಪದಲ್ಲಿ ಭಗವಂತನ ಹದಿಮೂರು ರೂಪಗಳಿರುವುವು. ಏಕಾರತಿಯ ಮೂರು ಬತ್ತಿಗಳಿಗೆ ವಿಶ್ವ–ತೈಜಸ–ಪ್ರಾಜ್ಞ ರೂಪಗಳು ನಿಯಾಮಕಗಳಾಗಿವೆ.

**ತ್ರಯೋದಶ ಸ್ವರೂಪೈಸ್ತು ಜ್ಯೋತಿರ್ದೀಪಗತೋ ಹ್ಯಭೂತ್ ॥**

**– ಗುರುವೃತ್ತ**

ದೀಪವಿಲ್ಲದೆ ಪೂಜೆಯನ್ನು ಮಾಡಬಾರದು ಅಂಧನಾಗುವನು. ಕುಸುಂಬ ಹಾಗೂ ಏರಂಡ(ಹರಳೆಣ್ಣೆ)ಗಳಿಂದ ದೀಪವನ್ನು ಭಗವಂತನಿಗೆ ಹಚ್ಚಬಾರದು.

**ಕುಸುಂಬ–ಏರಂಡ ತೈಲೇನ ದೀಪಂ ಮಹ್ಯಂ ನಿವೇದಯೇತ್ ।**

**ದೋಷ ಇತಿ ಶೇಷಃ ।** – ವರಾಹ ಪುರಾಣ

ಭಗವಂತನಿಗೆ ಅರ್ಪಿಸಿದ ದೀಪವನ್ನು ಬೇರೆ ಕಾರ್ಯಗಳಿಗಾಗಿ ಅನ್ಯತ್ರ ತೆಗೆದುಕೊಂಡು ಹೋಗಬಾರದು. ಅಂಧತ್ವ, ಮುಗ್ಧತ್ವ, ದೋಷ ಪೀಡಿತರಾಗುವರು.

**ಕುರ್ವೀತ ದೀಪಹರ್ತಾ ಚ ಮುಗ್ಧಾಂಧೋ ಜಾಯತೇ ಜಡಃ ।**
**ರೋಪಿತಂ ಪ್ರದೀಪಂ ಯೇ ನಯಂತ್ಯನ್ಯತ್ರ ಮಂದಿರಾತ್ ॥**

**ಅಂಧಾಸ್ತೇ ಭವಿಷ್ಯಂತಿ ಮುಗ್ಧಾ ವೈ ಜನ್ಮ ಜನ್ಮಸು ॥**

- **ಎಣ್ಣೆಗಳಲ್ಲಿ ಉತ್ತಮ, ಮಧ್ಯಮಾಧಮ :**

  ಗೋಘೃತದಿಂದ ಹಚ್ಚಿದ ದೀಪ ಉತ್ತಮವಾದದ್ದು. ಎಮ್ಮೆಯ ತುಪ್ಪ ಹಾಗೂ ಅಜದ (ಆಡಿನ) ತುಪ್ಪದ ದೀಪವು ಮಧ್ಯಮ, ತಿಲತೈಲಾದಿಗಳಿಂದ ಹಚ್ಚಿದ ದೀಪವು ಕನಿಷ್ಠವಾದದ್ದು (ಕನ್ಯಸ–ಕನಿಷ್ಠ).

  **ಗೋಘೃತೇನೋತ್ತಮಂ ದೀಪಂ ಮಧ್ಯಮಂ ಚಜಮಾಹಿಷ್ಯೈಃ ।**
  **ತಿಲತೈಲಾದಿಭಿಃ ಸ್ನೇಹ್ಯೈಃ ಕನ್ಯಸಂ ದೀಪಮುಚ್ಯತೇ ॥** – ಪಂಚರಾತ್ರ

- **ದೀಪಗಳ ಸಂಖ್ಯೆ :**

  ಒಂದರಿಂದ ನೂರೆಂಟು ದೀಪಗಳವರೆಗೂ ಅದಕ್ಕಿಂತ ಹೆಚ್ಚು ದೀಪಗಳನ್ನು ಸಂಪತ್ತಿಗೆ ಅನುಕೂಲವಾಗಿ ಭಗವಂತನಿಗೆ ಅರ್ಪಿಸಬಹುದು. ಹನ್ನೆರಡಕ್ಕೆ ಕಡಿಮೆ ಇಲ್ಲದೆ ಇಡುವುದು ಉತ್ತಮ.

  **ಏಕಮಾರಭ್ಯ ದೀಪಂ ತು ಯಥಾ ವಿಭವ ವಿಸ್ತರಂ ।**
  **ಕ್ರಮಾದ್ ದ್ವಾದಶಹೀನೇ ತು ದ್ವಾದಶಂ ಕನ್ಯಸಾಮಧಮಮ್ ॥**

  ಹತ್ತಿಯಿಂದ ಬತ್ತಿಯನ್ನು ಮಾಡಿ ನಾಲ್ಕು ಅಂಗುಲ ಅಥವಾ ಹೂಬತ್ತಿಯಾದರೆ ಎರಡಂಗಲ ಪ್ರಮಾಣವಿರುವ ಬತ್ತಿಗೆ ಕರ್ಪೂರವನ್ನು ಲೇಪಿಸಿದರೆ ಉತ್ತಮ ದೀಪವಾಗುವುದು.

**ಕಾರ್ಪಾಸತೂಲಂ ತೇನೈವ ವರ್ತಿಂ ಕೃತ್ವಾ ಯುಗಾಂಗುಲಮ್ ।**
**ಕರ್ಪೂರವರ್ತಿಃ ಶ್ರೇಷ್ಠಾ ಸ್ಯಾತ್ ಮಧ್ಯಮಾಗರುವರ್ತಿಕಾ ॥**

## 22.ನೈವೇದ್ಯದ ಬಗ್ಗೆ ವಿವರಣೆ :

ನೈವೇದ್ಯ – ಭಗವಂತನು ಸ್ವೀಕರಿಸುವ ಕ್ರಮವು ಹೀಗಿದೆ. ಭಗವಂತನು ಭಕ್ತನು ಸಮರ್ಪಿಸಿದ ನೈವೇದ್ಯವನ್ನು ಕಪಿಲಾತ್ಮಕವಾದ ದಿವ್ಯವಾದ ಕಣ್ಣಿನಿಂದ ನೋಡಿ ಪವಿತ್ರವನ್ನಾಗಿ ಮಾಡುವನು. ನಂತರ ನೃಸಿಂಹ ರೂಪಾತ್ಮಕವಾದ ದಿವ್ಯವಾದ ಘ್ರಾಣೇಂದ್ರಿಯದಿಂದ ಆಘ್ರಾಣಿಸುವನು. ಭೃಗುರಾಮಾತ್ಮಕವಾದ ಅಪ್ರಾಕೃತವಾದ ವಾಗಿಂದ್ರಿಯದಿಂದ ಸ್ವೀಕರಿಸುವನು. ನಂತರ ಶುದ್ಧವಾದ ನೈವೇದ್ಯವನ್ನು ಅರ್ಪಿಸಿದ ಭಕ್ತನನ್ನು ನೋಡುವನು. ಈ ದೃಷ್ಟಿಯೇ ಸಂಸಾರತಾಕರವಾದದ್ದು. ಮಹಾಕೂರ್ಮರೂಪಿಯಾದ ಭಗವಂತನು ನೈವೇದ್ಯ ವಸ್ತುಗಳಲ್ಲಿರುವ ತನ್ನ ಸ್ವಾಖ್ಯರಸವನ್ನು (ರೂಪವನ್ನು) ಸ್ವೀಕರಿಸುವನು. ಭಗವಂತನು ಭಕ್ತನಿಂದ ನಿವೇದಿಸಲ್ಪಟ್ಟ ಅನಿಷಿದ್ಧವಾದ ಆಹಾರ ವಸ್ತುಗಳಿಗೆ ಅಭಿಮಾನಿಗಳಾಗಿರುವ ಗರುಡ, ಶೇಷ, ರುದ್ರ ಮೊದಲಾದ ದೇವತೆಗಳಲ್ಲಿ ನಿಯಾಮಕಗಳಾದ ಕೇಶವಾದಿ ರೂಪಗಳನ್ನು ಮೂಲರೂಪದಿಂದ ಐಕ್ಯಗೊಳಿಸುವನು. ಇದೇ ನೈವೇದ್ಯವೆಂದು ತಿಳಿಯಬೇಕು. ಭಗವಂತನ ಭೋಗವು ಮಾನವರ ಭೋಗದಂತೆ ಅಲ್ಲ. ಬಾಹ್ಯ ಭೋಗ ವಿಲಕ್ಷಣವಾದದ್ದು.

ಸುವರ್ಣಾದಿ ಪಾತ್ರೆಗಳಲ್ಲಿ ವಾಸನ ರೂಪಗಳಿಂದ ಇರುವ ಆಹಾರ ಪದಾರ್ಥಗಳಾಕಾರದಂತೆ ಇರುವ ತನ್ನ ಸ್ವರೂಪಗಳನ್ನೇ ಸ್ವೀಕರಿಸಿ ಸಾರಭೋಕ್ತ ಎನಿಸುವನು. ಸಾರರೂಪನಾಗಿ ರಸನೆನಿಸಿದ ಭಗವಂತನು ಬಾಹ್ಯವಾದ ಅನ್ನಾದಿಗಳನ್ನು ಭುಂಜಿಸುವ ಪ್ರಮೇಯವಿರುವುದಿಲ್ಲ (ರಸೋ ವೈಸಃ), ಹಾಲು, ಮೊಸರು, ಅನ್ನ, ಸೂಪ ಮೊದಲಾದ ಆಹಾರ ಪದಾರ್ಥಗಳಲ್ಲಿ ಅನ್ನಾದಿ ಆಕಾರಗಳಿಂದ ಇರುವ ದೇವತೆಗಳು ತಮ್ಮ ತಮ್ಮ ಅಕಾರ (ರೂಪ)ಗಳನ್ನು ಮಹಾಲಕ್ಷ್ಮೀದೇವಿಗೆ ಅರ್ಪಿಸುವರು.



ಮಹಾಲಕ್ಷ್ಮೀಯಾದರೋ ತನ್ನ ಸ್ವರೂಪದ ಜೊತೆಗೆ ಅವುಗಳನ್ನು ಭಗವಂತನಿಗೆ ಅರ್ಪಿಸುವಳು. ಫಲಪುಷ್ಪಾದಿಗಳಲ್ಲಿಯೂ ಅಭಿಮಾನಿಗಳು ಫಲಾದಿಗಳಲ್ಲಿರುವ ತಮ್ಮ ಸ್ವರೂಪವನ್ನು 'ಭಗವಂತನೆ ನಮ್ಮ ಈ ಸ್ವರೂಪವೇ ನಿನ್ನಾಧೀನವೆಂದು' ಭಗವಂತನಲ್ಲಿ ಅರ್ಪಿಸುವರು. ಭಗವಂತನಾದರೂ ಮಹಾಲಕ್ಷ್ಮೀಯಿಂದಾರಂಭಿಸಿ ಬ್ರಹ್ಮಾದಿ ದೇವತೆಗಳು ಹಾಗೂ ಮಾನುಷ ಪರ್ಯಂತವಾಗಿ ಯೋಗ್ಯವಾದ ಭಾಗವನ್ನು ಸ್ವೀಕರಿಸುವನು. ಈ ರೀತಿಯಲ್ಲಿ ಭಗವಂತನು ವಾಗೀಂದ್ರಿಯ, ಘ್ರಾಣೇಂದ್ರಿಯ, ದರ್ಶನೇಂದ್ರಿಯಗಳೆಂಬ ಮೂರು ವಿಭಾಗಗಳಿಂದ ಸ್ವಾಖ್ಯ ರಸವನ್ನು ಸ್ವೀಕರಿಸುವನು.

**ಅದನಾಘ್ರಾಣ ದೃಷ್ಟ್ಯಾಖ್ಯ ಭೋಗತ್ರಯ ವಿಭಾಗತಃ।**
**ಮುಖನಾಸಾಚಕ್ಷುಷಾಂ ಚ ತದ್ಭೋಗ್ಯಮನ್ನಂ ತ್ರಿಧಾ ಹರೇಃ॥**

ಎಂಬ ಪ್ರಮಾಣವು ಈ ಪ್ರಮೇಯವನ್ನೆ ವಿವರಿಸುವುದು. ಪೂಜಕನು ಲಕ್ಷ್ಮೀದೇವಿಯಿಂದಾರಂಭಿಸಿ ಮನುಷ್ಯರವರೆಗೂ ಲಕ್ಷ್ಯಾದಿಗಳಿಗೆ ಯೋಗ್ಯವಾದ ಆಹಾರವನ್ನು ನೀಡಲು ಭಗವಂತನನ್ನೇ ಪ್ರಾರ್ಥಿಸಬೇಕು.

- **ಭಗವಂತನು ಪ್ರಸಾದವನ್ನು ನೀಡುವ ಕ್ರಮ :**

ಪೂಜಕನು ಲಕ್ಷ್ಮೀದೇವಿಗೆ ಹಾಗೂ ಮುಖ್ಯಪ್ರಾಣನಿಗೆ ಸಹಭೋಗ ರೂಪವಾದ ಪ್ರಸಾದವನ್ನು ನೀಡಿರುವನು. ಆದ್ದರಿಂದ **'ಸಶ್ರೀಕಾಯ ಸಪರಿವಾರಾಯ ಶ್ರೀಲಕ್ಷ್ಮೀನಾರಾಯಣಾಯ ನೈವೇದ್ಯಂ ಸಮರ್ಪಯಾಮಿ'** ಎಂದು ಸಂಕಲ್ಪಿಸಬೇಕು. ಭಗವಂತನು ಲಕ್ಷ್ಮೀದೇವಿ ಹಾಗೂ ಬ್ರಹ್ಮದೇವರಿಗೆ ನೈವೇದ್ಯವನ್ನು ಕೊಡುವನು ಎಂದು ಭಾವಿಸಿ ಲಕ್ಷ್ಮೀಪ್ರತಿಮೆ, ವಾಯುಗಳಿಗೆ ತೀರ್ಥಾದಿಗಳನ್ನು ನೀಡಿ ಅವರ ಭಾಗಗಳನ್ನು ಕೊಡಲು ಭಗವಂತನನ್ನು ಪ್ರಾರ್ಥಿಸಬೇಕು.

- **ಭಗವಂತನು ನೈವೇದ್ಯ ನೀಡುವ ರೀತಿ :**

ಪ್ರಜೆಗಳು ರಾಜನಿಗೆ ನೀಡಿದ ಕಾಣಿಕೆ ಮೊದಲಾದ ವಸ್ತುಗಳನ್ನು ರಾಜನು

ಸ್ವೀಕರಿಸಿ, ಉತ್ತಮ, ಮಧ್ಯಮಾಧಮ ಮೂರು ಭಾಗಗಳಾಗಿ ವಿಭಜಿಸಿ ಉತ್ತಮವಾದದ್ದನ್ನು ತಾನು ಸ್ವೀಕರಿಸಿ, ಮಧ್ಯಮ ವಸ್ತುವನ್ನು ಹೆಂಡತಿಗೆ ಕೊಟ್ಟು, ಅಧಮ ಭಾಗವನ್ನು ಪುತ್ರಾದಿಗಳಿಗೆ ನೀಡುವಂತೆ ಭಗವಂತನು ಕೂಡ ಭಕ್ತರಿಂದ ಅರ್ಪಿಸಲ್ಪಟ್ಟ ನೈವೇದ್ಯವನ್ನು ಉತ್ತಮ, ಮಧ್ಯಮ, ಅಧಮವೆಂಬ ಮೂರು ಭಾಗವಾಗಿ ವಿಂಗಡಿಸಿ ಉತ್ತಮವಾದ ಸ್ವಾಖ್ಯರಸವನ್ನು ತಾನೇ ಸ್ವೀಕರಿಸುವನು.

- **ವೈಷ್ಣವರಿಂದ ಶಿವ ನಿರ್ಮಾಲ್ಯವು ಅಗ್ರಾಹ್ಯ :**

**ಅಗ್ರಾಹ್ಯಂ ಶಿವ ನಿರ್ಮಾಲ್ಯಂ ಪತ್ರಂ ಪುಷ್ಪಂ ಫಲಂ ತಥಾ ।**

ವೈಷ್ಣವನಾದವನು ಎಂದಿಗೂ ಶಿವನ ಪ್ರಸಾದವನ್ನು ಭಕ್ಷಿಸಬಾರದು. ನಿರ್ಮಾಲ್ಯವನ್ನು ಮುಟ್ಟಿದರೂ ಸಚೇಲ ಸ್ನಾನ ಮಾಡಬೇಕು.

**ಸ್ಪೃಷ್ಟ್ವಾ ರುದ್ರಸ್ಯ ನಿರ್ಮಾಲ್ಯಂ ಸವಾಸಾ ಆಪ್ಲುತಃ ಶುಚಿಃ ।**

- **ನೈವೇದ್ಯ ಸ್ವೀಕಾರವಿಲ್ಲ :**

ವಿಷ್ಣು ಭಕ್ತನಾದವನು ರುದ್ರ ಹಾಗೂ ಸೂರ್ಯಾದಿಗಳ ನಿರ್ಮಾಲ್ಯವನ್ನೇ ಮುಟ್ಟಬಾರದೆಂದ ಮೇಲೆ ರುದ್ರ ನೈವೇದ್ಯವು ಸುತರಾಂ ಸ್ವೀಕರಿಸಲು ನಿಷಿದ್ಧವಾಗಿದೆ.

**ಕೇವಲಂ ಸೌರಶೈವೇ ತು ವೈಷ್ಣವೋ ನೈವ ಭಕ್ಷಯೇತ್ ।**
**ನಿರ್ಮಾಲ್ಯಂ ನೋಪಭೋಕ್ತವ್ಯಂ ರುದ್ರಸ್ಯ ತಪನಸ್ಯ ಚ ॥**

- **ಸಾಲಿಗ್ರಾಮ ಸ್ಪರ್ಶದಿಂದ ಪಾವಿತ್ರ್ಯತೆ :**

ಶಿವಲಿಂಗಗಳಿಗೆ ಸಾಲಿಗ್ರಾಮ ಹಾರದ ಅಥವಾ ಸಾಲಿಗ್ರಾಮದ ಸ್ಪರ್ಶವಿದ್ದರೆ ಆ ನೈವೇದ್ಯವು ಸ್ವೀಕಾರಾರ್ಹವೆಂದು ಹಾರೀತರು ತಿಳಿಸಿದ್ದಾರೆ.

**ಶಾಲಿಗ್ರಾಮಾದಿಭಿಃ ಶಂಭೋ ವೇಷ್ಟಿತಸ್ಯ ಯದರ್ಪಣಂ ।**
**ತದ್ಭೋಕ್ತವ್ಯಂ ದ್ವಿಜೈಃ ನಿತ್ಯಂ ತತೋಽನ್ಯತ್ ಪರಿವರ್ಜಯೇತ್ ॥**



[ಉದಾ.: ಧರ್ಮಸ್ಥಳದಲ್ಲಿ ಸಾಲಿಗ್ರಾಮವನ್ನು ವಾದಿರಾಜರು ಇಟ್ಟಿರುವುದರಿಂದ ನೈವೇದ್ಯವನ್ನು ಸ್ವೀಕರಿಸುವ ಪದ್ಧತಿಯಿದೆ.]

- **ನೈವೇದ್ಯ ಮಾಡುವ ಕ್ರಮ :**

ಗೋಮಯದಿಂದ ಎರಡು ಮಂಡಲಗಳನ್ನು ಮಾಡಿ 'ಶ್ರೀಃ' ಎಂದು ಶ್ರೀಕಾರವನ್ನು ರಂಗವಲ್ಲಿಯಿಂದ ಬರೆಯಬೇಕು. ಎರಡು ಮಂಡಲಗಳಲ್ಲಿ ದೊಡ್ಡದಾದ ಮಂಡಲದಲ್ಲಿ ಆಗ್ನೇಯಾದಿ ಕ್ರಮದಿಂದ ನೈವೇದ್ಯ ವಸ್ತುಗಳನ್ನು ಸ್ಥಾಪಿಸಬೇಕು.

**ದೇವಸ್ಯಾಗ್ರೇ ಭುವಂ ಶೋಧ್ಯ ಶ್ರೀಬೀಜಂ ತತ್ರ ಸಂಲ್ಲಿಖೇತ್ ।**

- **ನೈವೇದ್ಯ ವಸ್ತುಗಳನ್ನು ಇಡುವ ಕ್ರಮ :**

ಭಗವಂತನ ಮುಂಭಾಗವನ್ನೇ ಪೂರ್ವ ದಿಕ್ಕೆಂದು ಭಾವಿಸಬೇಕು. ಭಗವಂತನ ಬಲಭಾಗದ ಮೂಲೆ ದಿಕ್ಕು ಆಗ್ನೇಯ. ಈ ದಿಕ್ಕಿನಲ್ಲಿ ಭಕ್ಷ್ಯವಸ್ತುಗಳನ್ನು ಇಡಬೇಕು. ಭಗವಂತನ ಎಡಭಾಗದ ಎದುರಿನ ಮೂಲೆದಿಕ್ಕು ಈಶಾನ್ಯ. ಈ ಈಶಾನ್ಯ ದಿಕ್ಕಿನಲ್ಲಿ ಪಾಯಸವನ್ನು ಸ್ಥಾಪಿಸಬೇಕು. ನೈರುತ್ಯದಲ್ಲಿ ಚಟ್ನಿ, ಮುಂತಾದ ಲೇಹ್ಯ ವಸ್ತುಗಳನ್ನು ಇಡಬೇಕು. ವಾಯುವ್ಯ ದಿಕ್ಕಿನಲ್ಲಿ ಉಪಭೋಜನಗಳೆನಿಸಿದ ತೊವ್ವೆ ಮುಂತಾದ ವ್ಯಂಜನ ಪದಾರ್ಥಗಳನ್ನಿಡಬೇಕು. ಈ ನಾಲ್ಕು ದಿಕ್ಕುಗಳಲ್ಲಿ ವಸ್ತುಗಳನ್ನು ಇಟ್ಟು ಮಧ್ಯದಲ್ಲಿ ಅನ್ನವನ್ನು ಸ್ಥಾಪಿಸಬೇಕು. ತುಪ್ಪವನ್ನು ಅನ್ನ ಹಾಗೂ ಪಾಯಸಗಳ ಮಧ್ಯದಲ್ಲಿ ಸ್ಥಾಪಿಸಬೇಕು.

**ಭಕ್ಷ್ಯಾಣ್ಯಾಗ್ನೇಯಕೋಣೇ ತು ಐಶಾನ್ಯಾಂ ಪಾಯಸಂ ನ್ಯಸೇತ್ ।**
**ನೈರ್ಋತ್ಯಾಂ ಲೇಹ್ಯ ಪೇಯಾದಿ ವಾಯುವ್ಯಾಮುಪಭೋಜನಮ್ ॥**

**ಮಧ್ಯೇ ಚರುಂ ಸ್ಥಾಪಯಿತ್ವಾ ಸ್ಥಾಪಯೇದ್ ಘೃತಪಾತ್ರಕಂ ।**
**ಪರಮಾನ್ನಚರೋರ್ಮಧ್ಯೇ ಘೃತಪಾತ್ರಂ ವಿನಿಕ್ಷಿಪೇತ್ ॥**

ಈ ಮಂಡಲದಲ್ಲಿ ಅನ್ನಾದಿ ಮುಸುರೆ ಪದಾರ್ಥಗಳನ್ನಿಡಬೇಕು. ಎರಡನೇ

ಮಂಡಲದಲ್ಲಿ ನೀರು, ಹಣ್ಣು, ಹಾಲು, ಮೊಸರು, ಕೋಸಂಬರಿ ಮುಂತಾದ ವಸ್ತುಗಳನ್ನಿಡಬೇಕು.




**ಲೇಹ್ಯಂ ಪೇಯಂ ಚ ಚೋಷ್ಯಂ ಚ ಖಾದ್ಯಂ ಚೈವ ಚತುರ್ವಿಧಮ್ ।**
**ಪರಮಾನ್ನಂ ಹರಿದ್ರಾನ್ನಂ ಚಿತ್ರಾನ್ನಂ ಕೇವಲಂ ತಥಾ ।**
**ಗುಡೋದನಂ ಚ ಮುದ್ಗಾನ್ನಂ ಇತ್ಯನ್ನಂ ಷಡ್ವಿಧಂ ಸ್ಮೃತಮ್ ॥**

ಪರಮಾನ್ನ, ಚಿತ್ರಾನ್ನ, ಕಲಸಿದ ಅನ್ನ, ಕೇವಲ ಅನ್ನ, ಗುಡಾನ್ನ (ಪೊಂಗಲು), ಮುದ್ಗಾನ್ನ ಇವುಗಳಲ್ಲಿ ಯಾವ ಯಾವ ಕಾಲದಲ್ಲಿ ಯಾವುದು ಭಗವಂತನಿಗೆ ಪ್ರೀತಿಯಾಗುವುದೋ ಆ ಕಾಲಗಳಲ್ಲಿ ಆಯಾಯ ಭಕ್ಷ್ಯಗಳನ್ನು ನಿವೇದಿಸಬೇಕು.

ಶರೀರ ನಿಲ್ಲಲು ನಾವು ತಿನ್ನುವ ಸಮಸ್ತ ವಸ್ತುಗಳನ್ನೂ ಭಗವಂತನಿಗೆ ಅರ್ಪಿಸಿಯೇ ಸ್ವೀಕರಿಸಬೇಕು. ಮನೆಯಲ್ಲಿಯೇ ಬೆಳೆದಿರುವ ಫಲಗಳನ್ನು, ಹಣಕೊಟ್ಟು ಖರೀದಿ ಮಾಡಿರುವ, ತಿನ್ನುವ ವಸ್ತುಗಳನ್ನು ಬೇರೆಯವರು ಕೊಟ್ಟಿರುವ ತೆಂಗಿನಕಾಯಿ ಮುಂತಾದ ವಸ್ತುಗಳನ್ನು ಭಗವಂತನಿಗೆ ಅರ್ಪಿಸಿಯೇ ಸ್ವೀಕರಿಸಬೇಕು. ನಿವೇದಿಸದೆ ತಿಂದರೇ ಕಳ್ಳತನವನ್ನು ಮಾಡಿದ ಪಾಪವು ತಗಲುವುದು.

**ವನಸ್ಥಾನ್ ಫಲಮೂಲಾದೀನ್ ವಿನಾ ದ್ರವ್ಯಂ ಸುಖಾಽಽಗತಾನ್ ।**
**ಈಷತ್ ಪ್ರಯತ್ನತಃ ಸಾಧ್ಯಾನ್ ಯೋ ನಿತ್ಯಂ ಹ್ಯರ್ಪಯೇದ್ ಬುಧಃ ॥**



**ಶರೀರಯಾತ್ರಾ ಸಿದ್ಧ್ಯರ್ಥಂ ಅನ್ನಪಾನಧನಾದಿಕಾನ್ ।**
**ಸಂಪಾದಯತಿ ಯಾನೇವ ಪೂಜಾರ್ಥಂ ತಾನ್ ಪ್ರಕಲ್ಪಯೇತ್ ॥**

– ಯೋಗದೀಪಿಕಾ

- **ನೀರಿನ ನೈವೇದ್ಯ :**

ನಾವು ಕುಡಿಯುವ ನೀರನ್ನೂ ಭಗವದರ್ಪಿತ ಮಾಡಿಯೇ ಕುಡಿಯಬೇಕು. ಕರ್ಪೂರಾದಿಗಳಿಂದ ಸವಾಸಿತವಾದ ಶುದ್ಧವಾದ ನದ್ಯಾದಿ ನೀರನ್ನು ಭಗವಂತನಿಗೆ ನೈವೇದ್ಯ ಕಾಲದಲ್ಲಿ ಅರ್ಪಿಸಬೇಕು. ಮೊಸರು, ಮಜ್ಜಿಗೆ ಇವುಗಳನ್ನು ಅರ್ಪಿಸಿಯೇ ಉಪಯೋಗಿಸಬೇಕು.

**ಶುದ್ಧೋದಕಂ ಶೀತಲಂ ಚ ಕರ್ಪೂರೇಲಾದಿವಾಸಿತಮ್ ।**
**ಸಾಂದ್ರಂ ಸುದಧಿ ತಕ್ರಂ ಚ ಸಾಕ್ಷಾದಮೃತಮೇವ ವಾ ॥**
**ಮಯಾ ಸಮರ್ಪಿತಂ ದೇವ ಗೃಹಾಣ ರಮಯಾ ಸಹ ॥**

- **ಘೃತಾಭಿಘಾರ :**

ಹೀಗೆ ವಸ್ತುಗಳನ್ನು ಇಟ್ಟು ಅನ್ನ, ಪಾಯಸ ಮುಂತಾದ ನೈವೇದ್ಯ ವಸ್ತುಗಳ ಮೇಲೆ ತುಪ್ಪವನ್ನು ಓಂಕಾರ ಪೂರ್ವಕವಾಗಿ ಅಭಿಘಾರ ಮಾಡಬೇಕು.

- **ತುಲಸೀದಳ ಪ್ರಕ್ಷೇಪ :**

ಲಕ್ಷ್ಮೀದೇವಿಯ ಸನ್ನಿಧಾನ ಪ್ರಾಪ್ತಿಗಾಗಿ ನೈವೇದ್ಯ ವಸ್ತುಗಳ ಮೇಲೆ ತುಲಸೀದಲವನ್ನು ಹಾಕಬೇಕು. ಮೊಸರು, ತಾಂಬೂಲ, ಸ್ವಾದೂದಕಗಳಿಗೆ ತುಲಸಿಯನ್ನು ಹಾಕಬೇಕಿಲ್ಲ.

- **ಜಲಪ್ರೋಕ್ಷಣೆ :**

ಕಲಶದಲ್ಲಿರುವ ಶುದ್ಧವಾದ ನೀರನ್ನು ಶಂಖದೊಳಗೆ ಹಾಕಿಕೊಂಡು ತುಲಸೀದಲವನ್ನಿಟ್ಟು ಓಂ **ನಮೋ ನಾರಾಯಣಾಯ** ಓಂ ಎಂದು ಎಂಟು ಬಾರಿ ಮೂಲ ಮಂತ್ರದಿಂದ ಶಂಖಜಲವನ್ನು ಅಭಿಮಂತ್ರಿಸಿ, ಆ ನೀರನ್ನು ಕೈಯಲ್ಲಿ ಹಾಕಿಕೊಂಡು–

**ಓಂ ನಾರಾಯಣಾಯ ವಿದ್ಮಹೆ ವಾಸುದೇವಾಯ ಧೀಮಹಿ ।**
**ತನ್ನೋ ವಿಷ್ಣುಃ ಪ್ರಚೋದಯಾತ್ ॥**

ಎಂಬ ವಿಷ್ಣುಗಾಯತ್ರೀ ಮಂತ್ರದಿಂದ ನೀರನ್ನು ನೈವೇದ್ಯದ ಮೇಲೆ ಪ್ರೋಕ್ಷಿಸಿ ನೈವೇದ್ಯ ಪದಾರ್ಥವನ್ನು ಸ್ಪರ್ಶಿಸಬೇಕು. ನಂತರ ಈ ಮಂತ್ರವನ್ನು ಪಠಿಸಬೇಕು.

**ಸೌವರ್ಣೈಃ ಸ್ಥಾಲಿಸಂಘೈಃ ಮಣಿಗಣಖಚಿತೈಃ ಗೋಘೃತಾಕ್ತಾನ್ ಸುಪಕ್ವಾನ್ ಭಕ್ಷ್ಯಾನ್ ಭೋಜ್ಯಾಂಶ್ಚ ಲೇಹ್ಯಾನಪಿ ಪರಮ–ಮಹಚ್ಚೋಷ್ಯಮನ್ನಂ ನಿಧಾಯ । ನಾನಾಶಾಖೈರುಪೇತಂ ದಧಿ ಮಧು ಸುಘೃತಂ ಕ್ಷಿರಪಾನೀಯಯುಕ್ತಂ ತಾಂಬೂಲಂ ಚಾಪಿ ವಿಷ್ಣೋಃ ಪ್ರತಿದಿವಸಮಹಂ ಮಾನಸೇ ಚಿಂತಯಾಮಿ ॥**

## 23.ಆರತಿಗಳ ಬಗ್ಗೆ ವಿವರಣೆ :

ಹಲಗಾರತಿಯಲ್ಲಿರುವ ದೇವತೆಗಳು –

**ದೀಪಪಾತ್ರಾದಿ ದೈವತ್ವಂ ಮುಖೇ ಪಾವಕಮುಚ್ಯತೇ ।**
**ದಂಡಮೀಶ್ವರ ದೈವತ್ವಂ ಪಾದಂ ಪ್ರಜಾಪತಿಸ್ತಥಾ ॥**

ಹಲಗಾರತಿ ಪಾತ್ರೆಯು ದಿವ್ಯವಾಗಿದ್ದು ಹಲಗಾರತಿಯ ಮುಂದೆ ದೀಪವನ್ನು ಹಚ್ಚುವ ಸ್ಥಳದಲ್ಲಿ ಅಗ್ನಿಯೇ ಇರುವನು. ದಂಡದಲ್ಲಿ ರುದ್ರನಿರುವನು. ಹಲಗಾರತಿಯ ಹಿಂಬದಿಯಲ್ಲಿ ಪ್ರಜಾಪತಿಯೇ ಇರುವನು. ಮಂಗಳಾರತಿಯನ್ನು ಮಾಡುವಾಗ ಆ ವೃತ್ತವು ಸೂರ್ಯಮಂಡಲವನ್ನು ಪ್ರತಿನಿಧಿಸುತ್ತದೆ. ಅದರೊಳಗೆ ಇರುವ ಭಗವಂತನ ರೂಪವನ್ನು ನೋಡಬೇಕು. ಏಕಾರತಿಯನ್ನು ಬಿಟ್ಟು ಬೇರೆಯಾದ ಮಂಗಳಾರತಿಯನ್ನು ಪೂಜಕನು ಆರಿಸಬಾರದು. ದೀಪವನ್ನು ತಾನೇ ನಂದಿಸಿದರೆ ಅವನ ಮನೆಯ ಕುಲ ಬೆಳಗಿಸುವ ಪುತ್ರನು ಬೇಡವೆಂದು ಒಪ್ಪಿದಂತೆಯೇ ಸರಿ. ಆದ್ದರಿಂದ ಅವನ ಪತ್ನಿಯ ಗರ್ಭ ನಿಲ್ಲುವುದಿಲ್ಲ, ಜಾರಿ ಹೋಗುತ್ತದೆ.

**ನೀರಾಜನಾಯ ತಂತ್ರಂ ತು ವೃತ್ತಂ ವೈ ಚ ಸೂರ್ಯಮಂಡಲಂ।**
**ಮಧ್ಯಮ ಚಾಗ್ನಿದೈವತ್ಯಂ ಆರಾತ್ರಿಕಾಧಿದೇವತಾ ॥**

- **ದೀಪ ಮುದ್ರೆ :**

**ದೀಪಪ್ರಲೋಭನಂ ಪುಂಸಾಂ ಕೂಷ್ಮಾಂಡಭೇದನಂ ಸ್ತ್ರಿಯಃ।**
**ಆಚಿರೇಣೈವ ಕಾಲೇನ ಗರ್ಭಪಾತೋ ನ ಸಂಶಯಃ।**
**ನೈವ ನಿರ್ವಾಪಯೇತ್ ದೀಪಂ ಕದಾಚಿದಪಿ ಯತ್ನತಃ ॥**
**ಊರ್ಧ್ವಂ ತತ್ ಸಂಗ್ರಾಹ್ಯಾಂ ಕೃತ್ವಾ ವಾಮಾಂಗುಷ್ಠಮೇವ ಚ।**
**ತರ್ಜನ್ಯನಾಮಿಕಾಭ್ಯಾಂ ತು ಸಮುದ್ಧೃತ್ಯ ಕನಿಷ್ಠಿಕಾಂ ॥**
**ಅವಾಙ್ಮುಖೇನ ವಾಮೇನ ಸಂಹತ್ಯಾಂಗುಲಿಭಿಃ ಸಹ।**
**ಉತ್ತಾನೇನ ಹಸ್ತೇನ ದೀಪಮುದ್ರಾಂ ಪ್ರಚಕ್ಷತೇ ॥** – ಕಪಿಂಜಲಸಂಹಿತೆ

- **ಮಂಗಳಾರತಿ ಇಲ್ಲದ ಪೂಜೆ :**

ಮಂಗಳಾರತಿಯನ್ನು ಬೆಳಗದೆ ಮಾಡುವ ಪೂಜಾದಿಗಳು ಅಗ್ನಿಯ ಭಯವನ್ನು ತಂದೊಡ್ಡುತ್ತವೆ.

**ಆರಾತ್ರಿಕವಿಹೀನೇ ತು ಪಾವಕೇನ ಭಯಂ ಭವೇತ್।**

- **ಆರತಿಯ ಸಂಖ್ಯೆ :**

ಒಂಬತ್ತು ಮುಖಗಳಿರುವ ಆರಾತ್ರಿಕವು ಉತ್ತಮವಾದದ್ದು. ಪಂಚಮುಖ–ಗಳಿರುವ ನೀರಾಜನವು ಮಧ್ಯಮವಾದದ್ದು, ಒಂದೇ ಮುಖವುಳ್ಳ ದೀಪದಿಂದ ಪೂಜೆಯು ಅಧಮವೆನಿಸುತ್ತದೆ.

**ನವದೀಪಯುತಂ ಶ್ರೇಷ್ಠಂ ಪಂಚದೀಪಂ ತು ಮಧ್ಯಮಂ।**
**ಕನ್ಯಾಸಂ ತ್ವೇಕದೀಪೇನ ಯುತಂ ಪಾತ್ರ ಕ್ರಮಂ ಭವೇತ್ ॥**

– ಪಂಚರಾತ್ರ

ಒಂದೇ ಆರತಿ ಇದ್ದಾಗ **ಅಸ್ತ್ರಾಯ ಹುಂ ಫಟ್** ಎಂಬ ಅಸ್ತ್ರ ಮಂತ್ರದಿಂದ ನೀರಿನಿಂದ ಆರತಿಯನ್ನು ಪ್ರೋಕ್ಷಿಸಿ ನೀರಾಜನವನ್ನು ಮಾಡಬೇಕು.

**ದೀಪಮೇವೈಕದೀಪೇ ತು ಪ್ರೋಕ್ಷಯೇತ್ ಅಸ್ತ್ರಮಂತ್ರತಃ।**

